# ಕಸ್ತೂರಿ

## ಕನ್ನಡ ಡೈಜೆಸ್ಟ್




ಸಹಾಯಕ ಸಂಪಾದಕ :
ಮಾಧವ ನಾ. ಮಹಿಷಿ

ಕಲೆ :
ಕೆ. ಬಿ. ಕುಲಕರ್ಣಿ

ಮುಖಪುಟ :
ವಸಂತ
(ಬಾಶೋಲಿ ಚಿತ್ರದ ಪ್ರತಿಕೃತಿ)

ಚಿತ್ರ :
ಕೆ. ಬಿ. ಕುಲಕರ್ಣಿ


ಜನವರಿ ೧೯೮೨ರಿಂದ ಜಾರಿಯಲ್ಲಿ ಬಂದಿರುವ ಚಂದಾ ದರಗಳು :

| | | |
|---|---|---|
| ಬಿಡಿ ಸಂಚಿಕೆ | ... | ೨-೫೦ |
| ೧ ವರ್ಷಕ್ಕೆ | ಅಂಚೆ ಸೇರಿ | ೨೯-೦೦ |
| ೨ ವರ್ಷಕ್ಕೆ | ,, | ೫೫-೦೦ |
| ೩ ವರ್ಷಕ್ಕೆ | ,, | ೮೨-೦೦ |


KASTURI May 1982


## ಬೆಳಕಿಂಡಿ

ಕಾಲವೆಂಬ ಮರಳರಾಶಿಯ ಮೇಲೆ ಮೂಡುವ ಹೆಜ್ಜೆ ಗುರುತುಗಳಲ್ಲಿ ಕೆಲವು ಬರಿ ಹಿಮ್ಮಡದವಾಗಿರುತ್ತವೆ.

—'ಅಟ್ಲಾಂಟಿಕ್ ಲಾಗ್'ನಿಂದ

*

ಈ ಕಾಲದ ಶಿಕ್ಷಣ ಹೇಗಿದೆಯೆಂದರೆ ಸ್ಕೂಲಿನಿಂದ ಬಸ್ಸಿನಲ್ಲಿ ಮನೆಗೆ ಬರುವುದರೊಳಗಾಗಿ ಮಗುವಿಗೆ ತಾನೇನನ್ನು ಕಲಿತೆನೆಂಬುದೇ ಮರೆತುಬಿಟ್ಟಿರುತ್ತದೆ.

—'ರೀಡರ್ಸ್ ಡೈಜೆಸ್ಟ್'ನಿಂದ

*

"ನಿಮ್ಮ ಮೇಲೆ ಮಾರ್ಕ್ಸ್‌ನ ಪ್ರಭಾವ ಏನು?"

"ಎಂದಿಗೂ ನೂರಕ್ಕೆ ಮೂವತ್ತಕ್ಕಿಂತ ಹೆಚ್ಚಾಗಿಲ್ಲ."

—'ಅಸ್ಪೋಟ' ನಾಟಕದಿಂದ

*

"ಆಧುನಿಕ ಇತಿಹಾಸವನ್ನು ಬರೆಯಲು ಏನು ಬಳಸಬೇಕು?"

"ಬರಿ ಪೆನ್ಸಿಲ್ ಸಾಕು."

— ಅಲೆನ್ ಡೆಕಾಕ್ಸ್

*

### ಚಂದಾದಾರರಿಗೆ ಸೂಚನೆ

'ಕಸ್ತೂರಿ' ತಿಂಗಳ ಒಂದನೇ ದಿನಾಂಕದೊಳಗೇ ಪ್ರಕಟವಾಗುವುದು. ತಿಂಗಳ ೫ ನೇ ದಿನಾಂಕದೊಳಗೆ ತಲುಪದೇ ಹೋದರೆ ಚಂದಾದಾರರು ತಮ್ಮ ಟಪಾಲು ಕಟ್ಟೆಯಲ್ಲಿ ಮೊದಲು ವಿಚಾರಿಸಿ ಅನಂತರ ನಮಗೆ ತಿಳಿಸಬೇಕು. ಪತ್ರವ್ಯವಹಾರ ಮಾಡುವಾಗ ಚಂದಾ ನಂಬರು ಹಾಕಿರಬೇಕು.

# ಈ ಸಂಚಿಕೆಯಲ್ಲಿ



## ಪುಸ್ತಕ ವಿಭಾಗ

## ರಾಮಾಯಣದಲ್ಲಿ ರಾಜಕಾರಣ

"ರಾಮಾಯಣದಲ್ಲಿ ರಾಜಕಾರಣ" (ಕಸ್ತೂರಿ ಏಪ್ರಿಲ್ ೧೯೮೨) ಲೇಖನವನ್ನು ಕುರಿತು.

ವಾಲ್ಮೀಕಿ ರಾಮಾಯಣವು ಈಗ ಇರುವ ರೂಪದಲ್ಲಿ ಕೂಡ ಧಾರ್ಮಿಕ ಕಾವ್ಯವಾಗಿಲ್ಲ. ಸಂಪ್ರದಾಯವು ಕೂಡ ರಾಮಾಯಣಕ್ಕೆ 'ಕಾವ್ಯ' ವೆಂದು ಸ್ಥಾನವಿತ್ತಿದೆಯೇ ಹೊರತು "ಪುರಾಣ" ವೆಂದಲ್ಲ.

ರಾಮಾಯಣಕಾಲೀನ ರಾಜಕಾರಣವನ್ನು ಅಥವಾ ಇನ್ನಿತರ ಪ್ರವೃತ್ತಿಗಳನ್ನು ಪರಿಶೀಲಿಸುವಾಗ, ಖಚಿತವಾಗಿ ಪ್ರಕ್ಷಿಪ್ತವೆಂದು ಸ್ಪಷ್ಟವಿರುವ ಭಾಗಗಳನ್ನುಳಿದ ವಾಲ್ಮೀಕಿ ರಾಮಾಯಣವನ್ನು ಆಧಾರವಾಗಿರಿಸಬೇಕೇ ಹೊರತು, ಬರಿಯ ಆಧಾರರಹಿತ ಊಹೆಗಳನ್ನಲ್ಲ. ಮೊದಲೇ ಕೆಲವು ತೀರ್ಮಾನಗಳನ್ನು ತಯಾರಿಸಿ, ಇಡಿಯ ರಾಮಾಯಣದ ಮೂಲಸ್ವರೂಪ (ಅಥವಾ 'ರಾಮಾಯಣ'ದ ಹಿಂದಿನ ಐತಿಹಾಸಿಕ ಬೀಜ ಘಟನೆ)ವನ್ನು ಅವಕ್ಕೆ ತಕ್ಕಂತೆ ಊಹಿಸುವುದು ಗಂಭೀರ ವಿವೇಚನೆ ಆಗಲಾರದು.

ರಾಮನ ಪಟ್ಟಾಭಿಷೇಕ, ಸೀತಾಪಹಾರ ಇಲ್ಲೆಲ್ಲ ರಾಜಕೀಯ ಇದೆ ನಿಜ. ಅಯೋಧ್ಯಾಕಾಂಡ, ಮುಖ್ಯವಾಗಿ ಮನೆತನದ ಒಳಜಗಳದ ಚಿತ್ರವೇ. ಆದರೆ, ಸೀತಾಪಹಾರಕ್ಕೆ ರಾವಣನಿಗೆ ಭರತ, ಕೈಕೇಯಿಯರ ಪ್ರಚೋದನೆ ಇರಬೇಕೆಂದಾಗಲಿ, ವಸಿಷ್ಠನು ಕೈಕೇಯಿಯ ಸಂಚಿನಲ್ಲಿ ಪಾಲುಗಾರನೆಂದಾಗಲಿ ಊಹಿಸುವುದು ಅತಿವಾದವಾಗುತ್ತದೆ. ಇಂತಹ ಊಹೆಗಳು ನಗೆ ಬರಹವೊಂದಕ್ಕೆ ವಸ್ತುವಾಗಬಹುದೇ ಹೊರತು ಬೇರೆ ಅಲ್ಲ. ರಾವಣನ ಸಖ್ಯವನ್ನು ಪಡೆದು ಸೀತಾಪಹಾರ ಮಾಡಿಸುವ ಬದಲು ವಂಚನೆಯಿಂದ ರಾಮ–ಲಕ್ಷ್ಮಣರನ್ನು ಮುಗಿಸುವುದು ಕಷ್ಟವಾಗದು.

ಕೈಕೆಯಿ ಯಾರಿಗಾಗಿ ಯೋಜನೆ ಹಾಕಿ ಸಂಚು ನಡೆಸಿದಳೋ, ಅಂತಹ ಭರತನಿಗೇ ಅದು ಸಮ್ಮತವಿಲ್ಲದ್ದು ರಾಮಾಯಣದ ಮುಖ್ಯ ಸ್ವಾರಸ್ಯ. ರಾಮ–ಭರತರ, ಭೇಟಿ, ಭರತನ ಬಂಧುಪ್ರೇಮ ಇವೆಲ್ಲ ಕಾವ್ಯದ ಸ್ಪಷ್ಟ ಆಧಾರವನ್ನು ತಳ್ಳಿಹಾಕಿ ಕವಿಕಲ್ಪಿತವೆಂದು ಹೇಳುವುದು, ಕಾವ್ಯದಲ್ಲಿ ಯಾವುದೇ ಚಿಕ್ಕ ಸೂಚನೆ ಕೂಡ ಇಲ್ಲದೆ, ಭರತನನ್ನು ರಾಮನ ವಿರುದ್ಧ ಸಂಚಿನ 'ಖಳನಾಯಕ'ನಾಗಿ ಊಹಿಸುವುದು, ಕೊನೆಗೆ ಅದೇ ಭರತನು ನಂದಿಗ್ರಾಮದಲ್ಲಿ ಸರಳ ಜೀವನ ನಡೆಸಿದ್ದನ್ನು ಒಪ್ಪುವುದು ಇವೆಲ್ಲ ತರ್ಕ ಸಂಗತವಾಗದು. ಹಾಗೆ ಊಹಿಸುತ್ತ ಹೋದರೆ ವಿರಾಧ, ಕಬಂಧ, ಖರಾಸುರ, ಪರಶುರಾಮ – ಇವರನ್ನೆಲ್ಲ ಛೂ ಬಿಟ್ಟವನು ಭರತನೇ ಎಂದೂ ಹೇಳಬಹುದು.

ಸಾಂಪ್ರದಾಯಿಕವಲ್ಲದ ದೃಷ್ಟಿಯಿಂದ ಕಾವ್ಯಗಳನ್ನು ನೋಡುವ ದೃಷ್ಟಿ ಅವಶ್ಯ. ಆದರೆ ಯಾವುದೇ ಒಂದು ಊಹೆಯನ್ನು ಅತಿಯಾಗಿ ಎಳೆದಾಡಿದರೆ ತಮಾಷೆಯಾಗುತ್ತದೆ.

ಮಂಗಳೂರು–೩. –ಎಂ. ಪ್ರಭಾಕರ ಜೋಶಿ

'ರಾಮಾಯಣದಲ್ಲಿ ರಾಜಕೀಯ' (ಏಪ್ರಿಲ್ ೮೨) ಲೇಖನದಲ್ಲಿ 'ಸೌಂದರ್ಯವತಿಯಾದ ಎರಡನೇ ಪತ್ನಿಗೆ ಮರುಳಾದ ದಶರಥ ಆಕೆಯ (ಕೈಕೇಯಿ) ವಶವರ್ತಿಯಾಗಿ…' ಎಂದಿದೆ. ಆದರೆ ದಶರಥನ ಎರಡನೇ ಹೆಂಡತಿ ಸುಮಿತ್ರೆ. ಕೈಕೇಯಿಯು ಮೂರನೇ (ಕಿರಿಯ) ಹೆಂಡತಿ.

ಪ್ರಸ್ತುತ ಲೇಖನ ವಾಲ್ಮೀಕಿ ರಾಮಾಯಣದ ನೆಲೆಗಟ್ಟಿನಿಂದ ಮೂಡಿ ಬಂದು ಮಣ್ಣಿನಿಂದೆದ್ದು ಬಂದ ಶಿಲ್ಪವಾಗಿದೆ. ನಮ್ಮ ಮನದಲ್ಲಿ ಕೆಲ ದಿನಗಳಿಂದ ಕಾಡುತ್ತಿದ್ದ ಅನುಮಾನಗಳು ಈ ಲೇಖನದಿಂದ ಮೂರ್ತರೂಪ ಪಡೆದು ಬಂದದ್ದು ಒಂದು ಬಗೆಯ ಸಮಾಧಾನ ತಂದಿದೆ.

ಗೌನಿಪಲ್ಲಿ –ಬಿ. ಎಸ್. ರಾಮಚಂದ್ರ
ಸ. ರಘುನಾಥ

## ಗಡಿ ಸಮಸ್ಯೆ

'ಗಡಿ ಸಮಸ್ಯೆ: ವಿವೇಕ ಮತ್ತು ಅವಿವೇಕ' ಶೀರ್ಷಿಕೆಯ 'ವಿಚಾರಿ'ಯವರ ವಿಚಾರಧಾರೆ (ಕಸ್ತೂರಿ ಏಪ್ರಿಲ್, ೮೨) ನಿಜಕ್ಕೂ ಮನನೀಯವಾಗಿದೆ. ದಶಕದ ಹಿಂದಿನ ಮಾತನ್ನೆ ಮತ್ತೆ ಪುನರುಚ್ಚರಿಸಬೇಕಾದಂಥ ಆಪತ್ಕಾಲೀನ ಪರಿಸ್ಥಿತಿ ನಾಡಿನಲ್ಲಿ ಸೃಷ್ಟಿಯಾಗಿರುವುದು ಅತ್ಯಂತ ದೌರ್ಭಾಗ್ಯದ ಸಂಗತಿ ಎನ್ನದೆ ವಿಧಿಯಿಲ್ಲ. ಕನ್ನಡ ಬದುಕಿಲ್ಲದೆ ಕನ್ನಡಿಗರು ಬದುಕುವುದಿಲ್ಲ. ಕನ್ನಡಿಗರು ಬದುಕಬೇಕಾದರೆ ಮೊದಲು ಕನ್ನಡ

ಉಳಿಯಲೇಬೇಕು, ಕನ್ನಡ ಬೆಳೆಯಲೇಬೇಕು.

ಸದಾ ನಗುತ್ತಾ, ಎಲ್ಲರನ್ನೂ ನಗಿಸುತ್ತಾ ನಗುನಗುತ್ತಲೇ ನಮ್ಮಿಂದ ದೂರಾಗಿ ತಮ್ಮ ಅಮರ ಕೃತಿಗಳ ಮೂಲಕ ಸ್ಮರಣೀಯ ವ್ಯಕ್ತಿಗಳ ಸಾಲಿಗೆ ಸೇರಿರುವ ಹಾಸ್ಯಬ್ರಹ್ಮ ಬಳ್ಳಾರಿ ಬೀಚೀ ಅವರ ಜೀವನಾದರ್ಶಗಳು ನಾಡಿನ ಜನತೆಗೆ ಎಂದೆಂದಿಗೂ ಸ್ಫೂರ್ತಿದಾಯಕವಾಗಿರುತ್ತದೆ ಎನ್ನುವುದರಲ್ಲಿ ಉತ್ಪ್ರೇಕ್ಷೆ ಇಲ್ಲ.

ಬೆಂಗಳೂರು–೨೧ —ನ. ಅ. ರಾವ್

## ಕ್ಯಾನ್ಸರ್ ನಿರೋಧ

ಮಾರ್ಚ್ ೧೯೮೨ರ ಸಂಚಿಕೆಯಲ್ಲಿ ಕ್ಯಾನ್ಸರ್ ಬಗೆಗೆ ಬರೆದಿರುವ ಕೆ. ಎಂ. ನರಸಿಂಹಸ್ವಾಮಿ, ಕಳಸ ಅವರ ಲೇಖನ ಬೋಧಪ್ರದವಾಗಿದೆ. ಅದನ್ನು ಓದಿದಾಗ ನನ್ನನ್ನು ಕಾಡಿದ ಒಂದು ಸಂಶಯದ ಕುರಿತು ಇಲ್ಲಿ ಬರೆಯುತ್ತಿದ್ದೇನೆ.

"ಕ್ಯಾನ್ಸರ್ ನಿರೋಧಿಸಲು ಯಾವುದಾದರೂ ಮುಲಾಮಿದೆಯೆ?" ಎಂಬ ಪ್ರಶ್ನೆಗೆ ಉತ್ತರವಾಗಿ, "ಇಲ್ಲ. ಕ್ಯಾನ್ಸರ್ ಯಾವುದೇ ವಿಷಕ್ರಿಮಿಯಿಂದ ಹರಡುವುದಿಲ್ಲವಾಗಿ ಅದನ್ನು ನಿರೋಧಿಸತಕ್ಕ ಯಾವ ಮುಲಾಮೂ ಇಲ್ಲ" ಎಂದಿದ್ದಾರೆ. ಆದರೆ ಫೆಬ್ರುವರಿ ೧೯೮೨ರ 'ಜನಪ್ರಿಯ ವಿಜ್ಞಾನ' ಸಂಚಿಕೆಯಲ್ಲಿ ಪ್ರಕಟವಾಗಿರುವಂತೆ ವ್ಯಕ್ತಿಯ ಕುತ್ತಿಗೆಯಲ್ಲಿ ತಲೆದೋರುವ ವ್ಯಾಧಿಯನ್ನು ನಿರ್ಮೂಲನಗೊಳಿಸಲು 'ಬಲಿಯೋಮೈಸಿನ್' ಎಂಬ ಹೊಸ ಮುಲಾಮನ್ನು ಕಂಡು ಹಿಡಿಯಲಾಗಿದೆ.

ಕ್ಯಾನ್ಸರ್ ಗಡ್ಡೆಗಳನ್ನು ನಿರ್ಮೂಲನಗೊಳಿಸುವ ಈ ಹೊಸ ಮುಲಾಮನ್ನು ಯುಕ್ರೇನಿನ ಕ್ಯಾನ್ಸರ್ ಚಿಕಿತ್ಸಾಲಯದಲ್ಲಿ ೮೦ ರೋಗಿಗಳ ಮೇಲೆ ಬಳಸಿ ಪರಿಶೀಲಿಸಲಾಯಿತು. ರೋಗಿಗಳ ಕತ್ತಿನ ಅಭಿಧಮನಿಗಳ ಒಳಗಡೆ ಈ ಮುಲಾಮು ಹರಡಿಕೊಳ್ಳುವಂತೆ ಚಿಕಿತ್ಸೆ ನೀಡಲಾಯಿತು. ಒಂದು ತಿಂಗಳವರೆಗೆ ಇಂತಹ ಚಿಕಿತ್ಸೆ ನೀಡಿದಾಗ ಮೂರನೆ ಒಂದು ಭಾಗದಷ್ಟು ರೋಗಿಗಳಲ್ಲಿ ಕ್ಯಾನ್ಸರ್ ವ್ರಣಗಾತ್ರದಲ್ಲಿ ಕುಗ್ಗಿತು. ಇನ್ನುಳಿದ ಶೇಕಡಾ ೩೦ರಷ್ಟು ರೋಗಿಗಳಲ್ಲಿ ಈ ವ್ರಣ ಸಂಪೂರ್ಣ ಕಣ್ಮರೆಯಾಯಿತು. ಮುಲಾಮು ಹರಡಿದ ಭಾಗಗಳನ್ನು ನಂತರ ವೈದ್ಯರು ಕೂಲಂಕಷವಾಗಿ ಪರಿಶೀಲಿಸಿ ನೋಡಿದಾಗ ಅಲ್ಲಿ ಕ್ಯಾನ್ಸರ್ ಕೋಶಗಳು ಸಂಪೂರ್ಣ ನಶಿಸಿ ಹೋಗಿರುವುದು ಕಂಡುಬಂತೆನ್ನುತ್ತದೆ, ಆ ವರದಿ.

"ಕ್ಯಾನ್ಸರನ್ನು ನಿರೋಧಿಸತಕ್ಕ ಯಾವ ಮುಲಾಮೂ ಇಲ್ಲ" ಎಂದರೆ ಭಾರತದಲ್ಲಿ ಆ ಸೌಲಭ್ಯವಿಲ್ಲ ಎಂದರ್ಥವೆ?

ಗುಬ್ಬಿ —ಎಂ. ಆರ್. ಗಣೇಶಕುಮಾರ್

## ಹೀಗೇಕೆ?

'ಕಸ್ತೂರಿ'ಯ ಕಾಯಂ ಓದುಗರಲ್ಲಿ ನಾನೊಬ್ಬ. ಕಸ್ತೂರಿ ಓದಿದೊಡನೆಯೇ ಮೂಡಿಸುವ ಒಂದು ಭಾವ ಮೆಚ್ಚಿಗೆ. ಹೀಗಾಗಿ ಇತ್ತೀಚಿನ ಬೆಲೆಯೇರಿಕೆ ಕೂಡ ಹೆಚ್ಚೆನಿಸಲಿಲ್ಲ. ಆದರೆ ಮೊನ್ನೆ ಏಪ್ರಿಲ್ ಸಂಚಿಕೆ ಕೊಂಡಾಗ ಅದರಲ್ಲಿ ಉಪಯೋಗಿಸಿದ ಕೆಲವು ಕಾಗದಗಳನ್ನು ನೋಡಿ ಪಿಚ್ಚೆನಿಸಿತು. ನಿಮಗೆ ಬೇಕಾದ ಮುದ್ರಣಕಾಗದದ ಪೂರೈಕೆಸರಿಯಿಲ್ಲವೆಂದು ನೀವು ಹೇಳಿಕೊಳ್ಳಬಹುದಾದರೂ ನಿಮ್ಮ ಪತ್ರಿಕೆಗಿಂತ ಕಡಿಮೆ ಬೆಲೆಗೆ, ಅದಕ್ಕಿಂತ ಉತ್ತಮ ಕಾಗದ ಮುದ್ರಣ ವಿನ್ಯಾಸ ಬಳಸುವ ಪತ್ರಿಕೆಗಳಿರುವದನ್ನು ನೀವು ಅಲ್ಲಗಳೆಯಲಾರಿರಿ.

ಇಷ್ಟೆಲ್ಲಾ ಆದರೂ 'ಕಸ್ತೂರಿ' ಎಂದಿದ್ದರೂ ನಮ್ಮದೇ ಆದ್ದರಿಂದ, ಈ ಪತ್ರ ಪ್ರಕಟವಾಗುವ ಆಸೆ ಇಲ್ಲದಿದ್ದರೂ ನನಗಾಗಿರುವ ಹತಾಶಭಾವ ಹೋಗಲಾಡಿಸಲು ಇದನ್ನು ಬರೆಯುತ್ತಿದ್ದೇನೆ.

ಯಾಣ —ಎನ್. ಜಿ. ಭಟ್ಟ

## ಸ್ಫೋಟ

ಕಸ್ತೂರಿ ಏಪ್ರಿಲ್ ೮೨ರ ಸಂಚಿಕೆಯಲ್ಲಿ ಪ್ರಕಟವಾಗಿರುವ 'ಸ್ಫೋಟ' (ಪುಸ್ತಕ ವಿಭಾಗ) ವೈಜ್ಞಾನಿಕ ಕಥೆ ಉತ್ತಮವಾಗಿದೆ. ವೈಜ್ಞಾನಿಕ ಕಥೆ ಎಂದು ಹೇಳಿಕೊಳ್ಳುವ ಕಥೆಗಳಲ್ಲೆಲ್ಲಾ ಮಸಾಲಿ ಚಿತ್ರಗಳಂತೆ ಭಾರೀ ಸಾಹಸಗಳೇ ತುಂಬಿರುತ್ತವೆ! ವೈಜ್ಞಾನಿಕ ಕಥೆಯಲ್ಲಿ ಏನೆಲ್ಲಾ ಬರೆಯಬಹುದು. ಅದಕ್ಕೆ ಕಾರಣವೂ ಬೇಡ, ಪರಿಹಾರವೂ ಬೇಡ. ಅದಕ್ಕೇ ಅವನ್ನು ಬರೆಯುವುದು ಅತಿ ಸುಲಭ ಎಂದು ತಿಳಿಯುವ ಲೇಖಕರಿಗೆ 'ಸ್ಫೋಟ'ದಂತಹ ಉತ್ತಮ ಕಥೆ ಓದಲು ಕೊಡಬೇಕು.

ಬಾಗಲಕೋಟೆ —ಅನಿಲ ತಾಳಿಕೋಟಿ

# ಕಸ್ತೂರಿ

ವರ್ಷ : ೨೬ ಮೇ, ೧೯೮೨ ಸಂಚಿಕೆ : ೫

## ಖಡ್ಗಕ್ಕಿಂತ ಹರಿತ

ಸಾಹಿತ್ಯ ಒಂದು ರಾಷ್ಟ್ರೀಯ ಸಂಪತ್ತು. ಆ ಸಂಪತ್ತನ್ನು ರಕ್ಷಿಸಿ ಪೀಳಿಗೆಯಿಂದ ಪೀಳಿಗೆಗೆ ಸ್ಫೂರ್ತಿಯನ್ನು ಚೈತನ್ಯವನ್ನು ನೀಡುವಲ್ಲಿ ಯಶಸ್ವಿಯಾಗುವುದೇ ಮೌಲಿಕ ಸಾಹಿತ್ಯ. ಸಾಮಾಜಿಕವಾಗಿಯಾಗಲಿ ರಾಜಕೀಯವಾಗಿಯಾಗಲಿ ಶ್ರೇಯೋಮಾರ್ಗಕ್ಕೆ ಕೊಂಡೊಯ್ಯುವುದೇ ಅವರ ಗುರಿ.

ಇಟಲಿಯ ತರುಣ ಕ್ರಾಂತಿಕಾರಿ ಮ್ಯಾಜಿನಿ ತನ್ನ ಬಡಿದೆಬ್ಬಿಸುವ ಸಂದೇಶಗಳನ್ನು ಏಳು ಪುಸ್ತಕಗಳನ್ನಾಗಿ ಬರೆದ.

ಮ್ಯಾಜಿನಿ ಹೇಳುತ್ತಿದ್ದ. "ತರುಣರೇ, ಇಟಲಿಯ [illegible] ಇಟಲಿಯ ಧ್ವಜ ಚಿಂದಿ ಚಿಂದಿಯಾಗಿದೆ. ಭಿಕ್ಷೆ ಬೇಡಿದರೆ ಸ್ವಾತಂತ್ರ್ಯ ಸಿಗುವದಿಲ್ಲ. ನಿಮ್ಮ ಅರ್ಜಿಯನ್ನು ಓದಿ ಆಸ್ಟ್ರಿಯ ತಾನು ಗೆದ್ದುದನ್ನು ಎಂದೂ ಬಿಟ್ಟು ಕೊಡುವುದಿಲ್ಲ.

"ತರುಣರೇ ಧ್ಯೇಯವನ್ನು ಪ್ರೀತಿಸಿ! ಧ್ಯೇಯವನ್ನು ಆರಾಧಿಸಿ! ಧ್ಯೇಯಕ್ಕಾಗಿ ದಣಿಯದಿರಿ! ವಿಪತ್ತಿಗೆ ಮಣಿಯದಿರಿ. ಧ್ಯೇಯಕ್ಕಾಗಿ ಸ್ವಾರ್ಥವನ್ನು ತ್ಯಜಿಸಿ,"

ಈ ಪುಸ್ತಕದ ಏಳು ಭಾಗಗಳನ್ನು ಸ್ವಾತಂತ್ರ್ಯ ವೀರರೆಂದೇ ಖ್ಯಾತರಾದ ವಿನಾಯಕ ದಾಮೋದರ ಸಾವರಕರರು ಓದಿದರು.

ಆದರಿಂದ ಸ್ಫೂರ್ತರಾದ ಸಾವರಕರರು

ತಾಯ್ನಾಡಿಗಾಗಿ ಏನಾದರೂ ಮಾಡಬೇಕು, ಜನರನ್ನು ಬಡಿದೆಬ್ಬಿಸಬೇಕು ಎಂದು ಚಡಪಡಿಸ ಹತ್ತಿದರು. ಮ್ಯಾಜಿನಿಯ ಶಬ್ದಗಳು ಒಳಗೆ ನಿಗಿನಿಗಿಯಾಗಿ ಸ್ಫೋಟಗೊಳ್ಳಲು ಕಾಯುತ್ತಿದ್ದವು.

ಸ್ವಾತಂತ್ರ್ಯ ಮಂತ್ರವನ್ನು ದೇಶದಾದ್ಯಂತ ಸಾರುವ ದೀಕ್ಷೆಯನ್ನು ತೊಟ್ಟರು ಸಾವರಕರ್. ಮ್ಯಾಜಿನಿ ಅದರ ಅಧಿದೈವತನಾದ! ಸ್ಫೂರ್ತಿಯ ಸೆಲೆಯಾದ! ಮ್ಯಾಜಿನಿಯು 'ತರುಣ–ಇಟಲಿ ಸಂಘ' ವನ್ನು ಸ್ಥಾಪಿಸಿದಂತೆಯೇ ಸಾವರಕರರು ಇಂಗ್ಲಂಡಿನಲ್ಲಿ 'ಅಭಿನವ ಭಾರತ' ಸಂಸ್ಥೆಯನ್ನು ಸ್ಥಾಪಿಸಿದರು. ಅಲ್ಲೇ ಮದನಲಾಲ ಧಿಂಗ್ರಾ, ಭಗತಸಿಂಗರಂಥ ಗಂಡುಗಲಿಗಳನ್ನು ತಯಾರಿಸಿದರು. ಮ್ಯಾಜಿನಿಯ ಪುಸ್ತಕಗಳ ಅನುವಾದ ೧೯೦೬ ರಲ್ಲಿ ಮುಗಿಯಿತು. ಮುನ್ನೂರು ಪುಟಗಳ ಪುಸ್ತಕವನ್ನು ಬರೆದು ಮುಗಿಸಲು ಎರಡೇ ತಿಂಗಳು ಸಾಕಾಯಿತು.

ಪುಸ್ತಕವೇನೋ ಸಿದ್ಧವಾಯಿತು. ಆದರೆ ಅದನ್ನು ಭಾರತಕ್ಕೆ ಸಾಗಿಸುವ ಬಗೆ ಹೇಗೆ? ಎಂಬ ಪ್ರಶ್ನೆ ದುಂದೆ ಬಂತು.

ಅಂತೂ ಸರಕಾರದ ಕಣ್ಣಿಗೆ ಬೀಳದಂತೆ ಹಸ್ತಪ್ರತಿ ಭಾರತದಲ್ಲಿದ್ದ ಅವರ ಅಣ್ಣ ಗಣೇಶ ದಾಮೋದರ ಸಾವರಕರರ ಕೈಗೆ ತಲುಪಿತು. ಅದನ್ನು ಮೊತ್ತಮೊದಲು ಓದಿದ ಟಿಳಕರು, "ಇದು ಬಹಳ ಅಪಾಯದ ಕೆಲಸ. ವಿಚಾರ ಮಾಡಿ ಕೆಲಸ ಮಾಡಿ," ಎಂದು ಸಲಹೆ ನೀಡಿದರು. ೧೯೦೭ ರಲ್ಲಿ ಪುಸ್ತಕ ಪ್ರಕಟಗೊಂಡಾಗ, ೭೦೦೦ ಪ್ರತಿಗಳು ಎರಡೇ ಎರಡು ತಿಂಗಳಲ್ಲಿ ಖರ್ಚಾದವು. ಬೇಡಿಕೆ ಹೆಚ್ಚಿತು. ದೇಶದ ಪ್ರಮುಖ ಪತ್ರಿಕೆಗಳು ಪುಸ್ತಕದ ಬಗೆಗೆ ಅಗ್ರಲೇಖಗಳನ್ನೇ ಬರೆದವು.

ಸರಕಾರದ ತಲೆ ಬಿಸಿಯಾಯಿತು. ಕೈ ಕಟ್ಟಿ ಕುಳಿತುಕೊಳ್ಳುವುದು ಬ್ರಿಟಿಶ್ ಸರಕಾರಕ್ಕೆ ಅಸಾಧ್ಯವಾದಾಗ ಅದು ಪುಸ್ತಕವನ್ನು ನಿಷೇಧಿಸಿ ಆಜ್ಞೆ ಹೊರೆಡಿಸಿತು.

ಎಷ್ಟೋ ಯುವಕರು ಈ ಪುಸ್ತಕದ ಮುನ್ನುಡಿಯನ್ನು ಕಂಠಪಾಠ ಮಾಡಿದ್ದರು.

ಪೋಲೀಸರು ಅಂಗಡಿ ಮನೆಗಳ ದಾಳಿ ಮಾಡಿ ಪುಸ್ತಕವನ್ನು ವಶಪಡಿಸಿಕೊಂಡರು. ಅವನ್ನು ಉಳಿಸಿಕೊಳ್ಳಲು ಎಷ್ಟೋ ಕಡೆ ಪ್ರತಿಗಳನ್ನು ಗೂಡಿನಲ್ಲಿಟ್ಟು ಗಾರೆಮಾಡಲಾಯಿತು.

ಆದರೆ ಪುಸ್ತಕಗಳ ನಿಷೇಧ ತೆಗೆಯುವ ಪ್ರಯತ್ನ ನಡೆಯಿತು. ಅನೇಕ ಕಡೆ ಸಭೆಗಳಲ್ಲಿ ಬಹಿರಂಗವಾಗಿ ಪುಸ್ತಕವನ್ನು ಓದಲಾಯಿತು. ಆದರೆ ಈ ಎಲ್ಲ ಪ್ರಯತ್ನ ನಿಷ್ಫಲಗೊಂಡವು. ಅಷ್ಟೇ ಅಲ್ಲ, ಮೂವತ್ತು ವರ್ಷಗಳ ನಂತರವೂ ಪುಸ್ತಕ ಸ್ವತಂತ್ರವಾಗಲಿಲ್ಲ. ಕಡೆಗೆ ೧೯೪೬ರಲ್ಲಿ ಬಾಳಾಸಾಹೇಬ ಖೇರ ಎನ್ನುವವರು ಮುಂಬಯಿಯ ಮುಖ್ಯ ಮಂತ್ರಿಯಾದಾಗ ಸಾವರಕರರ ಸಾಹಿತ್ಯಕ್ಕೆ ಸ್ವಾತಂತ್ರ್ಯ ಬಂತು.

ಸುಮಾರು ನಲವತ್ತು ವರ್ಷಗಳವರೆಗೆ ಜಗತ್ತಿನಲ್ಲೆ ಬಲಾಢ್ಯವಾದ ಒಂದು ಸರಕಾರ ಕೇವಲ ಒಂದು ಪುಸ್ತಕಕ್ಕೆ ಅಂಜಿ ಕಳವಳಗೊಂಡು ತಲೆ ಬಿಸಿ ಮಾಡಿಕೊಂಡ ಕಥೆ ಇದು.

ಖಡ್ಗಕ್ಕಿಂತ ಲೇಖನಿ ಹರಿತವಾದದೆಯೆನ್ನುವುದು ಸುಳ್ಳೆ?

–'ಅಭಿಮಾನಿ'



೧೯೬೬ ರಲ್ಲಿ ನಿಧನರಾದ ವಾಲ್ಟ್ ಡಿಸ್ನೀ ಬೇರಾರೂ ಗಳಿಸಿದಷ್ಟು ಆಸ್ಕರ್ ಪಾರಿತೋಷಕಗಳನ್ನು ಗಳಿಸಿದ್ದರು. ೧೯೩೧ ಮತ್ತು ೧೯೬೯ ರ ನಡುವಿನ ಅವಧಿಯಲ್ಲಿ ೩೫ ಆಸ್ಕರ್ ಪಾರಿತೋಷಕಗಳನ್ನು ಅವರು ಗಳಿಸಿದ್ದರು. —ಎಸ್. ವಿಶ್ವನಾಥ



ಕಡೆಗಣಿಸಲ್ಪಟ್ಟ ಐತಿಹಾಸಿಕ ವಾಸ್ತುಶಿಲ್ಪ

# ಮುಳಬಾಗಿಲಿನ ಗೋಪಾಲಕೃಷ್ಣ ದೇವಾಲಯ

ಟಿ. ಎಸ್. ಪದ್ಮನಾಭರಾವ್

ಕೋಲಾರ ಜಿಲ್ಲೆಯ ಮುಳಬಾಗಿಲು ಕನ್ನಡನಾಡಿನ ರಾಜಕೀಯ ಇತಿಹಾಸದಲ್ಲಿ ಮಹತ್ವಪೂರ್ಣ ಪಾತ್ರವಹಿಸಿದ ಊರು. ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಾದ ನಂತರ ಇಲ್ಲಿ ಎರಡನೆಯ ಹರಿಹರ ರಾಜಪ್ರತಿನಿಧಿಯಾಗಿ ಕಾರ್ಯನಿರ್ವಹಿಸುತ್ತಿದ್ದ. ಯುವರಾಜನೇ ಇಲ್ಲಿನ ರಾಜಪ್ರತಿನಿಧಿಯಾಗಿರುತ್ತಿದ್ದ.ದೊಂದು ವಿಶೇಷ. ಈ ಸಾಮ್ರಾಜ್ಯದ ಮೂಡಣ ಬಾಗಿಲಾಗಿ ಮುಳಬಾಗಿಲು ಸುರಕ್ಷಿತ ಸ್ಥಳವಾದ ಬಯಲುಸೀಮೆಗೆ ಸೇರಿ, ವೀರ ಕಂಪಣರಾಯನ ರಾಜಧಾ ಯಾಗಿತ್ತು. ಗಂಗಾಂಬಿಕೆ ಅವನ ಕವಯಿತ್ರಿ ಹೆಂಡತಿ. ಆಕೆಯ "ಮಧುರಾ ವಿಜಯಂ"ದ ಇಲ್ಲಿನ ಗುಡಿ ಗೋಪುರಗಳ, ಕೋಟೆ ಕೊತ್ತಲಗ ಬಣ್ಣನೆಯಿದೆ.

ವಿಜಯನಗರ ಸಾಮ್ರಾಜ್ಯದ ದೊರೆಗಳ ಈ ನೆಲದೊಡೆಯರಾದೊಡನೆ, ಆ ಕಾಲಕ್ಕಿಂ ಹಿಂದೆ ಇಲ್ಲಿ ಆಳಿದ ರಾಜವಂಶಗಳು, ಅವರ ನಿರ್ಮಿಸಿದ ಸ್ಮಾರಕಗಳು, ದೇವಮಂದಿರಗಳು ತೆ

ಯ ಮರೆಗೆ ಹೋದದ್ದು ಸಹಜ. ಇಲ್ಲಿಯ ಬೆಟ್ಟದಲ್ಲಿರುವ ಗ್ರಾಮದೇವತೆ ನಾಂಚಾರಮ್ಮದೇವಿಯ ಗುಹೆ, ಊರ ಹೊರಗಿನ ಶಂಕರನಾರಾಯಣ ದೇವಸ್ಥಾನ ಈ ಕಾಲಕ್ಕಿಂತ ತುಂಬಾ ಹಳೆಯವು. ಇವು ಈಗ ಹಾಳುಬಿದ್ದಿವೆ.

ಬೆಟ್ಟದ ಬುಡದಲ್ಲಿರುವ ಗೋಪಾಲ ಕೃಷ್ಣದೇವಾಲಯ ಯಾವ ಸಂಶೋಧಕನ ಗಮನಕ್ಕೂ ಬಾರದೆ, ವಿಜಯನಗರ ಪೂರ್ವಕಾಲದ ಇತಿಹಾಸಕ್ಕೆ ಮೂಕಸಾಕ್ಷಿಯಾಗಿ ಊರಿನತ್ತ ನೋಡುತ್ತ ನಿಂತಿದೆ. ವಿಶಾಲವಾದ ಪ್ರಾಕಾರ, ಭವ್ಯ ಪ್ರಾಂಗಣ, ಎತ್ತರವಾದ ನಿಲುಗಂಬಗಳು ಭೆಗ್ನ ಶಿಲ್ಪಗಳನ್ನು ಹೊತ್ತ ಗಾರೆಗೋಪುರ, ಹಳೆಯದೊಂದು ಕೊಳ ಅಂದಿನಿಂದ ಬಂದ ಉಳಿಕೆ. ಸುತ್ತಲೂ ಗೆಳೆದ ಲಂಟಾನ ಪೊದೆ, ಪಾಚಿಗಟ್ಟಿದ ಕಂಬಗಳು ಕುಸಿದ ಗೋಡೆಗಳು ಇಂದಿನ ಗಳಿಕೆ.

ಸುಂದರವಾದ ವಾಸ್ತು ನವರಂಗ, ಗಿಡ್ಡವಾದ ವಿಮಾನ ನಾಲ್ಕು ಕಡೆ ಇರುವ ಭೆಗ್ನವಾದ ಲಕ್ಷ್ಮೀನಾರಾಯಣ ಯೋಗನಾರಾಯಣ ನರಸಿಂಹಾವತಾರ, ಕೃಷ್ಣ ಲೀಲಾವಿಲಾಸ ಮತ್ಸ್ಯ ನಾಗಕನ್ಯೆಯರು ಸಿಂಹಮುಖಿಗಳು ಹೊಯ್ಸಳ ಕಾಲದ ಕಲೆಯನ್ನು ನೆನಪಿಗೆ ತರುವಂತಹವು.

ಇಂತಹ ಭವ್ಯವಾದ ದೇವಾಲಯದೊಳಗೆ ಮೂರ್ತಿಯಿಲ್ಲ: ಶಾಸನ ಅಥವಾ ಯಾವುದೇ ಬರಹಗಳಿಲ್ಲ. ಸ್ಥಳ ಪುರಾಣದಲ್ಲಿ ಇದರ ಉಲ್ಲೇಖವಿಲ್ಲ. ದೇವಾಲಯದ ನಿರ್ಮಾಣದ ಬಗ್ಗೆ ಬಹುಶಃ ಪ್ರಸ್ತಾಪವಿಲ್ಲ. ಈ ಶತಮಾನದ ಮೊದಲಲ್ಲಿ ಇದನ್ನು ನೋಡಿದವರೂ ಇದನ್ನು ಹಾಳು ಗುಡಿಯೆಂದೇ ಗುರುತಿಸುತ್ತಾರೆ. ಪೂಜೆಯಿಲ್ಲದ, ಇಲ್ಲಿದ್ದ ಕೃಷ್ಣನ ಮೂರ್ತಿಯನ್ನು ಆಂಜನೇಯ ದೇವಾಲಯಕ್ಕೆ ಸ್ಥಳಾಂತರಿಸಲಾಯಿತೆಂದು ಬಹಳ ಜನರ ಅಭಿಮತ. ಆದರೆ ಅಲ್ಲಿ ಈ ಮೂರ್ತಿಯನ್ನು ನೋಡಿದಾಗ ಏನೂ ಹೇಳಲು ಬರುವಂತಿಲ್ಲ.

ಮುಳಬಾಗಿಲಿನ ಈಗಿನ ಕೆರೆ ಹಿಂದೆ ಅಗ್ರಹಾರವಾಗಿತ್ತೆಂದು ಹೇಳುವುದಕ್ಕೆ ಪುರಾವೆಗಳಿವೆ. ಬೆಟ್ಟದಸನಿಹದ ಈ ಪ್ರದೇಶವನ್ನು ಯಾವುದೋ ಕಾರಣಕ್ಕಾಗಿ ಜನ ಕೆರೆಗೆ ಬಿಟ್ಟುಕೊಟ್ಟು ಊರ ಒಳಗೆ ಮನೆಗಳನ್ನು ನಿರ್ಮಿಸಿಕೊಂಡರು. ಆಗ ಈ ದೇವಾಲಯ ಕೆರೆಯ ಇನ್ನೊಂದು ದಡದಲ್ಲಿತ್ತು ಎಂದು ಹೇಳಬಹುದು. ಈಗಿನ ಕೆರೆ ಪಕ್ಕದಲ್ಲಿದೆ.

ಕ್ರಿ. ಶ. ೧೩೨೯ ರ ಶಂಕರತೀರ್ಥರ ಶಾಸನ ಸುಮಾರು ಅದೇ ಕಾಲದ ಸೋಮೇಶ್ವರ ದೇವಾಲಯದ ಗೋಡೆ ಬರಹ ಅಥವಾ ಇನ್ನಾವುದೇ ಹಳೆಯ ಬರಹಗಳಲ್ಲಿಯೂ ಗೋಪಾಲಕೃಷ್ಣ ದೇವಾಲಯದ ಬಗ್ಗೆ ಪ್ರಸ್ತಾಪವಿಲ್ಲ. ನಮಗೆ ಈ ಬಗ್ಗೆ ಕುತೂಹಲಕರವಾದ ಎಳೆ ಸಿಗುವುದು ಸಮೀಪದ ಪಾದ್ರೀಪುರದ ನರಸಿಂಹ ದೇವಸ್ಥಾನವನ್ನು ಗಮನಿಸಿದಾಗ ಮಾತ್ರ.

ಹೊಯ್ಸಳ ವಂಶದ ಕೊನೆಯ ಕುಡಿ ನರಸಿಂಹ ಬಲ್ಲಾಳನ ಕಾಲದ್ದೆಂದು ಹೇಳಲಾದ ಈ ಗುಡಿಯನ್ನು ಹಲವು ವರ್ಷಗಳ ಹಿಂದೆ ಜೀರ್ಣೋ




"ಇದೇನ್ಸಾರ್, ಹೀಗಂತೀರಾ...? ನಾನು ಶುದ್ಧ ನಾಸ್ತಿಕ...ಸತ್ಯವಾಗಿಯೂ, ನಮ್ಮ ದೇವರಾಣೆಯಾಗಿಯೂ..."

ಹಿಂದೆ ಇನ್ನೂ ದೇವರಿಲ್ಲದ ಗುಡಿಯಾಗಿತ್ತು.

ರಾಜನಿಷ್ಠ ಹೊಯ್ಸಳ ಸಾಮಂತ ರಾಜ ನಾರಾಯಣ ಈ ಪ್ರದೇಶವನ್ನು ಸಂಗಮ ವಂಶದ ದೊರೆಗಳ ವಶಕ್ಕೆ ಮಣಿದು ಅವರಿಗೆ ಬಿಟ್ಟುಕೊಡಬೇಕಾಯಿತು ಎಂಬುದು ಇತಿಹಾಸ ನಮಗೆ ಹೇಳುವ ಪಿಸುಮಾತು. ಹೊಯಿಸಳರು ಈ ಪ್ರದೇಶಕ್ಕೆ ಇಟ್ಟ ಕಾಲನ್ನು ಕತ್ತರಿಸಿ ಹಿಂದೆ ಹೋಗುವಂತೆ ಮಾಡಿದ ಸಂಗಮ ವಂಶದ ರಾಜರೇ ಮುಂದೆ ವಿಜಯನಗರ ಸಾಮ್ರಾಜ್ಯಕ್ಕೆ ಅಡಿಗಲ್ಲು ಹಾಕಿದವರು. ಇದು ಕ್ರಿ.ಶ. ೧೩೩೦ರ ಹಿಂದಿನ ಮಾತು.

ಕ್ರಿ.ಶ. ೧೩೪೨ ರ ವರೆಗೆ ಆಳಿದ ಮುಮ್ಮಡಿ ಬಲ್ಲಾಳನ ಕಾಲಕ್ಕಿಂತ ಸ್ವಲ್ಪ ಮುಂಚೆಯೇ ಈ ದೇವಾಲಯ ನಿರ್ಮಾಣವಾಗಿರಬೇಕು. ಮಲ್ಲಿಕ್ ಕಾಫಿರ್ ಸುಮಾರು ೧೩೧೦ರಲ್ಲಿ ಇಲ್ಲಿಗೆ ಬಂದಿದ್ದ ಎಂಬ ಕತೆಯೊಂದಿದೆ. ಇದು ನಿಜವಾದರೆ, ಅವನು ಹಾಳುಗೆಡವಿದ ದೇವಾಲಯಗಳಲ್ಲಿ ಇದೂ ಸೇರಿತ್ತೆ? ಎಂಬ ಸಂದೇಹ ಬರುತ್ತದೆ. ಆದರೆ ಈ ಎರಡೂ ಕಾಲಗಳಲ್ಲಿ ತಾಳಿಕೆ ಬರುವುದಿಲ್ಲ. ಹೊಯ್ಸಳ ನರಸಿಂಹನ ಕಾಲದ ಈ ದೇವಾಲಯ ಹಾಳು ಗುಡಿಯಾಗಲು ಕಾರಣವೇನು? ಅದಕ್ಕಿಂತ ಹಿಂದಿನ ಆಂಜನೇಯ, ಸೋಮೇಶ್ವರ ದೇವಸ್ಥಾನಗಳು ಹಾನಿಗೀಡಾಗಲಿಲ್ಲ.

ಹಾಗಾದರೆ ತಮ್ಮ ವೈರಿಗಳಾದ ಹೊಯ್ಸಳರು ನಿರ್ಮಿಸಿದ ಅವರಿಲ್ಲಿ ಕಾಲಿಡಲು ಪ್ರಯತ್ನಿಸಿದ ಪ್ರತೀಕವಾದ ಈ ದೇವಸ್ಥಾನ ವಿಜಯನಗರದ ದೊರೆಗಳ ಉದಾಸೀನಕ್ಕೆ ತುತ್ತಾಯಿತೆ? ಗಂಗಾಬಿಕೆಯ ಕಾವ್ಯಲಹರಿಯಲ್ಲಿ ಈ ಭವ್ಯ ದೇಗುಲಕ್ಕೆ ಜಾಗವಿರಲಿಲ್ಲವೆ?

ಹೊಯ್ಸಳ ದೊರೆಗಳು ತಮ್ಮ ಆಳ್ವಿಕೆಯ ನೆಲವನ್ನು ಪೂರ್ವದ ಕಡೆ ಹಿಗ್ಗಿಸಿಕೊಳ್ಳಲು ಸಾಕಷ್ಟು ಪ್ರಯತ್ನವನ್ನು ನಡೆಸಿದ್ದುದು ಸಹಜ. ಅವರು ಆಗಿನ 'ಮುಳುವಾಯಿವಾಚಿಪುರಂ'ನ ಮೂಲಕ ಹೊರಟಾಗ ಅಲ್ಲಿ ದೇವಾಲಯಗಳನ್ನು ನಿರ್ಮಿಸಿರುವುದು ಅಸಂಭವವೇನಲ್ಲ. ಹೀಗೆಯೇ ಖಾದ್ರೀಪುರದ ಹಾಗೂ ಮುಳಬಾಗಿಲಿನ ನರಸಿಂಹ ಉಗ್ರನಾರಾಯಣ ಹಾಗೂ ಗೋಪಾಲಕೃಷ್ಣನ ದೇವಸ್ಥಾನಗಳು ನಿರ್ಮಿಸಲ್ಪಟ್ಟವು.

ವಿಜಯನಗರದರಸರ ಪ್ರಭಾವಶಾಲೀ ಹಿಡಿತಕ್ಕೆ ಸಿಕ್ಕಿದ ಅಂದಿನ ಇತಿಹಾಸಕಾರರಿಗೂ ಸ್ಥಳ ಪುರಾಣಕಾರರಿಗೂ ಇವು ತುಂಬ ಅರ್ವಾಚೀನ ದೇವಾಲಯ ಅಥವಾ ಹಾಳುಬಿದ್ದ ದೇವಾಲಯಗಳಾಗಿ ಕಂಡಿರಬೇಕು. ಇದರಿಂದಲೇ ಈ ಎರಡು ದೇವಾಲಯಗಳೂ ಯಾವ ದಾಖಲೆಯಲ್ಲಿಯೂ ಗಮನಾರ್ಹವಾಗಿ ಮೂಡಿ ಬರಲಿಲ್ಲ. ಈ ಗುಡಿಗಳಿಗಾಗಿ ನೀಡಲ್ಪಟ್ಟ ದಾನ ಪತ್ರ, ದತ್ತಿ ಮುಂತಾದವೂ ಹೆಚ್ಚು ಬೆಳಕಿಗೆ ಬಂದಿಲ್ಲ.

ಗೋಪಾಲಕೃಷ್ಣ ದೇವಸ್ಥಾನವನ್ನು ಕಂಡೊಡನೆ ಇದು ಹೊಯ್ಸಳ ದೊರೆಗಳ ಕಾಲದಲ್ಲಿ ನಿರ್ಮಾಣವಾದದ್ದು ಎಂಬ ತೀರ್ಮಾನಕ್ಕೆ ನಾವು ಬಂದರೂ ಈ ಕಾಲದ ಎಂದರೆ ಹೊಯ್ಸಳ ವಂಶದ ಅವನತಿ, ಸಂಗಮ ವಂಶದ ಉಗಮ ವಿಜಯನಗರ ಮಹಾ ಸಾಮ್ರಾಜ್ಯ ಸ್ಥಾಪನೆಯಾದ ಸಂಧಿ ಕಾಲದಲ್ಲಿ ಇಲ್ಲಿ ನಡೆದ ಘಟನೆಗಳು ಕತ್ತಲೆಯ ಮರೆಯಲ್ಲಿಯೇ ಇವೆ.

ಈ ಬಗ್ಗೆ ಇನ್ನೆಲ್ಲಿಯಾದರೂ ಮಾಹಿತಿ ದೊರೆತರೆ, ಹೊಯ್ಸಳ ಕಲೆ ಇತಿಹಾಸಗಳ ಸಂಶೋಧಕರು ಇತ್ತ ತೀವ್ರ ಗಮನ ಹರಿಸಿದರೆ ಇತಿಹಾಸದಲ್ಲಿ ಮೆರೆಯಬೇಕಾಗಿದ್ದ ಈ ದೇವಾಲಯದ ದುಃಸ್ಥಿತಿಗೆ ಕಾರಣ, ಅಂದಿನ ಸಮಕಾಲೀನ ಘಟನೆಗಳು ಬೆಳಕಿಗೆ ಬಂದು, ಬಿಟ್ಟು ಹೋದ ಈ ಕಾಲದ ಕೊಂಡಿಯನ್ನು ಸಿಕ್ಕಿಸಿದಂತಾಗುತ್ತದೆ. ✡

**ಕೃತಿಯೊಂದರ ರಚನೆಯಿಂದ ಸಂಪೂರ್ಣ ಸಮಾಧಾನವಾಗದಿದ್ದಾಗ ಕಲಾವಿದನ ಮನಸ್ಸಿನಲ್ಲಿ ಯೋಚನೆಯು ಹುಳು ಕೊರೆಯಲಾರಂಭಿಸುತ್ತದೆ. ಪರಿಣಾಮವಾಗಿ ಹೊಸ ಕೃತಿಯು ಹೊಳಹು ಹುಟ್ಟತೊಡಗುತ್ತದೆ.** — ಬರ್ಟೋಲ್ಟ್ ಬ್ರೆಕ್ಟ್

# ಬ್ರೂಸ್ ಲೀಯ ಮರಣದ ರಹಸ್ಯ

ಎಂ. ಡಿ. ರಾಣೆ

ಬ್ರೂಸ್ ಲೀ ಹೆಸರಿನಲ್ಲಿ ಏನೋ ಜಾದು, ಆಕರ್ಷಣೆ. ಹೆಸರು ಕೇಳಿದರೆ ಸಾಕು, ಹುಚ್ಚೆದ್ದು ಕುಣಿಯುತ್ತಿದ್ದವು ಮಕ್ಕಳು. ಯುವ ಜನಾಂಗಕ್ಕೆ ತಮ್ಮ ಶರ್ಟು ಬನಿಯನ್ನುಗಳ ಮೇಲೆ ಆತನ ಚಿತ್ರ ಧರಿಸಿಕೊಳ್ಳುವುದೆಂದರೆ ಏನೋ ಮಜಾ! ಬಾಕ್ಸರ್ ಮಹಮ್ಮದ ಆಲಿ ಫುಟ್‌ಬಾಲ್ ಜಾದೂಗಾರ ಪೀಲೆ, ಟೆನಿಸ್‌ಪಟು ಬೋರ್ಗ್ ಇವರನ್ನು ಜನಪ್ರಿಯತೆಯಲ್ಲಿ ಮೀರಿ ನಿಂತ ಈ ಶತಮಾನದ ಯುವಶಕ್ತಿಯ ಪ್ರತೀಕ ಬ್ರೂಸ್ ಲೀ.

ದೊಡ್ಡವರ ಬದುಕು ರಹಸ್ಯಮಯ, ಮರಣ ಮತ್ತಷ್ಟು ರಹಸ್ಯಮಯ. ಹೌದು. ಈ ಮಾತು ಬ್ರೂಸ್ ಲೀಯ ಜೀವನದ ಅಂತಿಮ ಕ್ಷಣಕ್ಕೂ ಅನ್ವಯಿಸುವುದು. ಆತನ 'ಎಂಟರ್ ದಿ ಡ್ರಾಗನ್' ಚಿತ್ರ ನೋಡಿದವರು ಕೋಟ್ಯಾವಧಿ ಜನ. ನೋಡಬೇಕೆಂದು ಬಯಸುವವರು ಎಷ್ಟೋ ಕೋಟಿ. ಆತನ ಕರಾಟೆಯ ಭಂಗಿ ಜನರ ಮೇಲೆ ಚೆಲ್ಲಿದ ಮೋಡಿ ಅಸಾಧಾರಣವಾದದ್ದು.

ಜುಲೈ ೧೯೭೩, ೨೦ನೇ ತಾರೀಖಿನ ರಾತ್ರಿಯ ೮ ಗಂಟೆ. ಆಗಸದ ನಕ್ಷತ್ರ ಪುಂಜದಿಂದ ಉಲ್ಕೆಯೊಂದು ಕಳಚಿ ಬಿತ್ತು. ಬ್ರೂಸ್ ಲೀಗೆ ಸಹಿಸಲಾರದ ತಲೆನೋವು. ಹಾಸಿಗೆಯ ಮೇಲೆ ಮಲಗಿದ್ದಾನೆ. ಮಲಗಿದವನು ಏಳಲೇ ಇಲ್ಲ. ಜಗತ್ತಿಗೆ ವಿದಾಯ ಹೇಳಿದ ೩೨ ವಯಸ್ಸಿನ ಅತಿ ಉತ್ತಮ ಆರೋಗ್ಯವಂತ ಜೀವಿ ದ್ರವ್ಯದಲ್ಲಿ ಮುಳುಗಿದ.

ಬ್ರೂಸ್ ಲೀ ಕರಾಟೆಯ ಯುದ್ಧಕಲೆಯನ್ನು ಜನಸಾಮಾನ್ಯರಲ್ಲಿ ಪ್ರಚಲಿತದಲ್ಲಿ ತಂದು ಅವರ ಶೈಲಿಯಾದ ಕುಂಗ್‌ಫೂ ತಂತ್ರಕ್ಕೆ ಪಾಶ್ಚಾತ್ಯ 'ಮಾರಾಮಾರಿ' ತಂತ್ರವನ್ನು ಕೂಡಿಸಿ ಹೊಸ ಒಂದು ಪದ್ಧತಿಯನ್ನು ಜಾರಿಯಲ್ಲಿ ತಂದಿದ್ದ. ಬ್ರೂಸ್ ಲೀ ಅಭಿನಯಿಸಿದ್ದು ಕೇವಲ ೨-೩ ಅಂತರರಾಷ್ಟ್ರೀಯ ಚಿತ್ರಗಳಲ್ಲಿ. ಆದರೆ ಈ ಮಾಧ್ಯಮದ ಮೂಲಕ ಆತ ಅಮರನಾದ. ಅದರಲ್ಲಿಯೂ 'ಎಂಟರ್ ದಿ ಡ್ರಾಗನ್' ಚಿತ್ರದ ಮೂಲಕ ಆತ ಜಗತ್ತಿನ ಭಾರೀ ನಟರಲ್ಲಿ ಒಬ್ಬನಾದ.

ಆತನ ಮೃತ್ಯು ಅನೇಕ ಸಂಶಯಗಳಿಗೆ ಅವಕಾಶ ಮಾಡಿಕೊಟ್ಟಿತು. ಆತನು ಸತ್ತ ನಾಲ್ಕನೆಯ ದಿನ 'ಸ್ಟಾರ್' ಎನ್ನುವ ಪತ್ರಿಕೆ ಆತನನ್ನು ಮನೆಯಿಂದ ಆಸ್ಪತ್ರೆಗೆ ಕರದೊಯ್ಯಲಾಗಿಲ್ಲ ಎನ್ನುವ ಅಂಬ್ಯುಲೆನ್ಸ್ ಅಧಿಕಾರಿಯ ಹೇಳಿಕೆಯ ಆಧಾರದ ಮೇಲಿಂದ ಸುದ್ದಿ ನೀಡಿ ಅವನ ಅಭಿಮಾನಿಗಳಿಗೆ ಆಘಾತವನ್ನುಂಟು ಮಾಡಿತು. ಈ ಪತ್ರಿಕೆಯ ಪ್ರಕಾರ ಆತನನ್ನು ಬೆಟಿ ಲೆಂಗಪಿ ಎನ್ನುವ ನಟಿಯ ಮನೆಯಿಂದ ಆಸ್ಪತ್ರೆಗೆ ಕರದೊಯ್ಯಲಾಯಿತು. ವರದಿಗಾರರು ಆ ನಟಿಯನ್ನು ಪ್ರಶ್ನಿಸಿದಾಗ ಆಕೆ, "ಬ್ರೂಸ್ ಲೀ ಸತ್ತ ರಾತ್ರಿ ನಾನು ನನ್ನ ಮನೆಯಲ್ಲಿಯೇ ಇರಲಿಲ್ಲ" ಎನ್ನುವ ಹಾರಿಕೆಯ ಹೇಳಿಕೆಯನ್ನು ನೀಡಿದಳು. ಇನ್ನೂ ಪ್ರಶ್ನಿಸಿದಾಗ, "ನಾನು ಆತನನ್ನು ಭೇಟಿಯಾಗಿ

೬–೭ ತಿಂಗಳಾದವು. ರಸ್ತೆಯ ಮೇಲೆ ಭೆಟ್ಟಿಯಾಗಿದ್ದೆ." ಎಂದಳು. ಸಮಸ್ಯೆ ಜಟಿಲವಾಗಿ ಆಕೆಯಿಂದ ಸ್ಪಷ್ಟೀಕರಣ ಕೇಳಿದಾಗ "ನಾನು ಈ ಮೊದಲು ನೀಡಿದ ಹೇಳಿಕೆಗಳು ಸುಳ್ಳು. ಹೆದರಿಕೆಯಿಂದ ಹಾಗೆ ಹೇಳಿದ್ದೆ," ಎಂದಳು!

ಮರಣದ ದಿನ ಬ್ರೂಸ್ ಲೀ ಮತ್ತು ಹಾಂಗ್‌ಕಾಂಗಿನ ಪ್ರಸಿದ್ಧ ಚಿತ್ರ ನಿರ್ಮಾಪಕರಾದ ರೇಮಾಂಡರು ಮಧ್ಯಾಹ್ನ ೨ ಗಂಟೆಗೆ ಬೈಟಿ ಲಿಂಗ ಪಿಯ ಮನೆಗೆ ಹೋಗಿದ್ದರು. ತುಂಬಾ ಸಮಯದ ವರೆಗೆ ಮೂವರೂ ಬ್ರೂಸ್ ಲೀಯ 'ಗೇಮ್ಸ್ ಆಫ್ ಡೆಥ್' ಹೊಸ ಚಿತ್ರದ ಪಟಕಥೆಯನ್ನು ಕುರಿತು ಚರ್ಚಿಸುತ್ತಿದ್ದರು. ಸಾಯಂಕಾಲ ೭॥ ಗಂಟೆಗೆ ರೇಮಾಂಡರು ಒಂದು ಸುಪ್ರಸಿದ್ಧ ಹೋಟೆಲ್ಲಿಗೆ ಹೋದರು. ಅಲ್ಲಿ ಅವರು ಬ್ರೂಸ್ ಲೀ ಮತ್ತು ಹಾಂಗ್‌ಕಾಂಗಿನ ಸುಪ್ರಸಿದ್ಧ ನಿರ್ಮಾಪಕರ ಕೂಡ ರಾತ್ರಿಯ ಭೋಜನ ಮಾಡಬೇಕಾಗಿತ್ತು. ಬ್ರೂಸ್ ಲೀಗೆ ತಲೆ ನೋಯುತ್ತಿದ್ದುದರಿಂದ ಮಲಗಿಯೇ ಇದ್ದ.

ರೇಮಾಂಡ್ ಹೋದ ನಂತರ ಬೈಟಿ ಬ್ರೂಸ್ ಲೀಗೆ ನಿದ್ದೆ ಬರುವ ಗುಳಿಗೆ ಕೊಟ್ಟಳು. ಗಾಢನಿದ್ದೆ ಆವರಿಸಿತು.

ರಾತ್ರಿಯ ೯–೩೦. ಬ್ರೂಸ್ ಲೀ ಇನ್ನೂ ಹೋಟೆಲಿಗೆ ಮರಳಿಲ್ಲ. ರೇಮಾಂಡರ ಫೋನು ಒಂದೇ ಸಮನೆ ಒದರುತ್ತಿತ್ತು. ತಾನು ಎಷ್ಟು ಎಬ್ಬಿಸಲು ಪ್ರಯತ್ನಿಸಿದರೂ ಬ್ರೂಸ್ ಲೀ ಎಚ್ಚರಾಗುತ್ತಿಲ್ಲ ಎಂದು ಬೈಟಿ ಸೂಚನೆ ನೀಡಿದಳು. ರೇಮಾಂಡ್ ಕೂಡಲೇ ಬೈಟಿಯ ಮನೆಗೆ ಧಾವಿಸಿದರು. ಅಲ್ಲಿ ಬ್ರೂಸ್ ಲೀಯ ಡಾಕ್ಟರರೂ ಹಾಜರಿದ್ದರು. ಕ್ವೀನ್ ಎಲಿಜಾಬೆತ್ ಆಸ್ಪತ್ರೆಗೆ ಸಾಗಿಸಲಾಯಿತು. ಆದರೆ ಮಲಗಿದ್ದ ಬ್ರೂಸ್ ಲೀ ಏಳಲೇ ಇಲ್ಲ.

ಆತನ ಮರಣ ಅನೇಕ ಸಂಶಯಗಳಿಗೆ ದಾರಿ ಮಾಡಿಕೊಟ್ಟಿತು. ಬೈಟಿಯ ಮನೆಯ ಹತ್ತಿರವೇ 'ಬ್ಯಾಪ್ಟಿಸ್ಟ್' ಆಸ್ಪತ್ರೆ ಇದ್ದರೂ ತುಂಬಾ ದೂರ ಇರುವ ಎಲಿಜಾಬೆತ್ ಆಸ್ಪತ್ರೆಗೆ ಆತನನ್ನು ಏಕೆ ಸಾಗಿಸಲಾಯಿತು? ಎನ್ನುವ ಪ್ರಶ್ನೆ ಇನ್ನೂ ಜೀವಂತ [illegible] ರಹಸ್ಯವನ್ನು ತಿಳಿಯಲು ಸರಕಾರ ಒಂದು ವಿಚಾರಣಾ ಆಯೋಗವನ್ನೇ ರಚಿಸಿತು. ಸಪ್ಟೆಂಬರ್ ೩, ೧೯೭೩ರಲ್ಲಿ ತನ್ನ ಕಾರ್ಯಾಚರಣೆಯನ್ನು ಪ್ರಾರಂಭಿಸಿ ಅನೇಕ ವ್ಯಕ್ತಿಗಳಿಂದ ಮಾಹಿತಿಯನ್ನು ಸಂಗ್ರಹಿಸಿದ್ದರ ಫಲವಾಗಿ ಅನೇಕ ರಹಸ್ಯಮಯ ವಿಷಯಗಳನ್ನು ಆಯೋಗ ಹೊರಹಾಕಿತು. ಬ್ರೂಸ್ ಲೀಯ ಪತ್ನಿ ಲಿಂಡಾಳ ಹೇಳಿಕೆಯಂತೆ ಅವಳ ಗಂಡ ಮಾದಕ ಪದಾರ್ಥಗಳನ್ನು ಸೇವಿಸುತ್ತಿದ್ದ. ಹೃದಯರೋಗದಿಂದ ಬಳಲುತ್ತಿದ್ದ. ಮೂರು ತಿಂಗಳ ಹಿಂದೊಮ್ಮೆ ಪ್ರಜ್ಞಾಹೀನನಾಗಿ ಬಿದ್ದಿದ್ದ. ಡಾಕ್ಟರರು ಮಾದಕ ಪದಾರ್ಥ ಸೇವಿಸಬಾರದೆಂದು ಸಲಹೆ ನೀಡಿದ್ದರೂ ಬ್ರೂಸ್ ಲೀ ಇವುಗಳನ್ನು ಹೆಚ್ಚೆಚ್ಚು ಸೇವಿಸುತ್ತಿದ್ದ. ಲಿಂಡಾ ಈ ಬಗ್ಗೆ ಒಮ್ಮೆ ಗಂಡನಿಗೆ ಕೇಳಿದಾಗ ತಾನು ಶೂಟಿಂಗ್ ಸಮಯದಲ್ಲಿ ಸ್ಫೂರ್ತಿ ಮತ್ತು ಚುರುಕಾಗಿರಲು ಇವುಗಳನ್ನು ಸೇವಿಸುತ್ತಿರುವದಾಗಿ ಹೇಳಿದ್ದ.

ಆದರೆ ಡಾಕ್ಟರರು ತಮ್ಮ ವರದಿಯಲ್ಲಿ ಆತನ ಮರಣಕ್ಕೆ ಮಾದಕ ಪದಾರ್ಥಗಳ ಸೇವನೆಯೇ ಕಾರಣ ಎನ್ನುವದನ್ನು ತಳ್ಳಿಹಾಕಿದ್ದರು. ಆತನ ಹೊಟ್ಟೆಯಲ್ಲಿ ಮಾದಕ ಪದಾರ್ಥಗಳ ಕೆಲವೊಂದು ಕಣಗಳು ಕಂಡುಬಂದರೂ ಕೇವಲ ಇವುಗಳ ಮೂಲಕ ಮೃತ್ಯು ಬರಲು ಸಾಧ್ಯವಿದ್ದಿಲ್ಲ. ಆತನ ಖಾಸಗಿ ಡಾಕ್ಟರರ ಹೇಳಿಕೆಯಂತೆ ಬ್ರೂಸ್ ಲೀ ಸಾಯುವ ಮೊದಲು ಎರಡು ಪ್ರಕಾರಗಳ ಗುಳಿಗೆಗಳನ್ನು ನುಂಗುತ್ತಿದ್ದ–ಒಂದು ಶೂಟಿಂಗ್ ಸಮಯದಲ್ಲಿ ಬೆನ್ನಿಗೆ ಗಾಯವಾಗಿದ್ದರಿಂದ ತೆಗೆದುಕೊಳ್ಳುವ ನೋವು ನಿವಾರಕ ಗುಳಿಗೆ ಮತ್ತೊಂದು ಹೃದಯ ರೋಗವನ್ನು ಕುರಿತಾದದ್ದು.

ಬ್ರೂಸ್ ಲೀಯ ಮೃತ್ಯುವಿನ ನಂತರ ಆತನ ಶರೀರದ ಕೆಲವೊಂದು ಭಾಗಗಳನ್ನು ಪರೀಕ್ಷಿಸಿದಾಗ ಬೆನ್ನು ಮೂಳೆ ಉಬ್ಬಿರುವುದು ಕಂಡು ಬಂದಿತು. ತಲೆ ನೋವನ್ನು ಕಡಿಮೆ ಮಾಡಲು ಬೈಟಿ ಬ್ರೂಸ್ ಲೀಗೆ ಒಂದು ಗುಳಿಗೆ ಕೊಟ್ಟಿದ್ದಳು. ಬಹುಶಃ ಆತನು ಈ ಔಷಧಕ್ಕೆ ಅಲರ್ಜಿಕನಾಗಿ ಅದರ ಪ್ರಭಾವದಿಂದ ಸತ್ತಿರಬಹುದು ಎಂಬ ಅನುಮಾನವೂ ಉಂಟು.

ಸಪ್ಟೆಂಬರ್ ೨೪ ರಂದು ಎಲ್ಲ ವಿಷಯಗಳನ್ನು ಗಮನದಲ್ಲಿಟ್ಟುಕೊಂಡು ಆಯೋಗ ಬ್ರೂಸ್

ಲೀಯ ಮರಣವನ್ನು ದುರ್ಘಟನಾವಶಮೃತ್ಯು ಎಂದು ಸಾರಿತು.

ಇದು ಕೇವಲ ಸೈದ್ಧಾಂತಿಕ ವಿಶ್ಲೇಷಣೆಯಾಯಿತು. ಬಹಳಷ್ಟು ಜನರು ಆತನ ಮರಣಕ್ಕೆ ಇನ್ನಿತರ ಮಹತ್ವದ ಕಾರಣಗಳನ್ನು ಕೊಟ್ಟಿದ್ದಾರೆ. ಇವುಗಳಲ್ಲಿ ಕೆಲವೊಂದು ನಿರ್ಣಾಯಕವಲ್ಲದಿದ್ದರೂ ಅವುಗಳನ್ನು ಅಲ್ಲಗಳೆಯಲು ಬರುವುದಿಲ್ಲ.

ಅನೇಕರ ಪ್ರಕಾರ ಬ್ರೂಸ್ ಲೀಯನ್ನು ಕೊಲ್ಲಲಾಗಿದೆ. ಬಹುಶಃ ಬೈಟಿಯೇ ಈ ಹತ್ಯಾಕಾಂಡದ ಮಾಧ್ಯಮವಾಗಿರಬಹುದು ಎನ್ನುವ ಸಂಶಯ ಕೆಲವರಿಗೆ. ಹಾಂಗಕಾಂಗಿನಲ್ಲಿ ಆತನನ್ನು ದ್ವೇಷಿಸುವವರ ಸಂಖ್ಯೆ ಸಾಕಷ್ಟಿತ್ತು. ಚಿತ್ರ ನಿರ್ಮಾ-

ಗಿಂದೊಳಗೆ ಬ್ರೂಸ್ ಲೀಯ ವಿರುದ್ಧ ಕಿಡಿಕಾರುತ್ತಿದ್ದರು. ಇವರಿಬ್ಬರೂ ಬ್ರೂಸ್ ಲೀ ಚಿತ್ರೋದ್ಯಮವನ್ನು ಸೇರುವುದಕ್ಕಿಂತ ಮುಂಚಿತವಾಗಿಯೇ ಹಾಂಗ್‌ಕಾಂಗ್ ಚಿತ್ರೋದ್ಯಮದ ಸಮ್ರಾಟರಾಗಿದ್ದರು. ಬ್ರೂಸ್ ಲೀ ಸಹ ತನ್ನ ಪ್ರಾರಂಭಿಕ ಜೀವನವನ್ನು ಇವರ ಸಹಾಯದಿಂದಲೇ ಆರಂಭಿಸಿದ್ದನು. ಆದರೆ ಕೊನೆಗೆ ಬ್ರೂಸ್ ಲೀ ಇವರಿಬ್ಬರ ಕೂಡ ಇರುವ ವ್ಯಾಪಾರಿ ಸಂಬಂಧವನ್ನು ಕಡಿದುಕೊಂಡಿದ್ದನು.

ಹಾಂಗ್‌ಕಾಂಗ್ ಚಿತ್ರೋದ್ಯಮದ ಪ್ರಮುಖ ಸ್ಟಂಟ್‌ಮನ್ನರು ಈತನ ವಿರುದ್ಧ ಕತ್ತಿಯನ್ನು ಮಸೆಯುತ್ತಿದ್ದರು. ಏಕೆಂದರೆ ಬ್ರೂಸ್ ಲೀ ತನ್ನ ಸ್ಟಂಟ್ ದೃಶ್ಯಗಳನ್ನು ತಾನೇ ಮಾಡುತ್ತಿದ್ದ

ವಹಿಸುತ್ತಿದ್ದುದರಿಂದ ಇವರು ನಿರುದ್ಯೋಗಿಗಳಾಗಿದ್ದರು.

ಯುದ್ಧಕಲೆ ಪರಂಪರಾಗತವಾಗಿ ಬಂದದ್ದು. ಬ್ರೂಸ್ ಲೀ ಅದರ ಗುಪ್ತ ವಿಷಯಗಳನ್ನು ಪಾಶ್ಚಿಮಾತ್ಯರಿಗೆ ತಿಳಿಸಿದ್ದರಿಂದ ಮತ್ತು ಅದರ ತಂತ್ರವಾದ 'ಕುಂಗ್ ಫೂ'ವನ್ನು ಬದಲಾಯಿಸಿ 'ಜೀತ್‌ಕೂನ ದೋ'ವೆನ್ನುವ ಭಿನ್ನವಾದ ತಂತ್ರವನ್ನು ಪ್ರಚಾರದಲ್ಲಿ ತಂದಿದ್ದರಿಂದ ಈ ವೃತ್ತಿಯವರು ಆತನನ್ನು ದ್ವೇಷಿಸುತ್ತಿದ್ದರು. ಇವರ ಪೈಕಿ ಒಬ್ಬನು ಬ್ರೂಸ್‌ಲೀಗೆ ವಿಷಪ್ರಾಶನ ಮಾಡಿಸಿರಬಹುದೆಂದು ಸಂಶಯವನ್ನೂ ವ್ಯಕ್ತಪಡಿಸಲಾಗುತ್ತಿದೆ. ಒಂದು ವೇಳೆ ವಿಷಪ್ರಾಶನವಾಗಿದ್ದಲ್ಲಿ ಡಾಕ್ಟರ್ ತಪಾಸಣೆಯಿಂದ ಈ ಅಂಶ ಹೊರಗೆ ಬೀಳಬಹುದಿತ್ತಲ್ಲ? ಆದರೆ ಕೆಲವೊಂದು ಚೀನೀ ವಿಷಗಳು ತಮ್ಮ ಪ್ರಭಾವವನ್ನು ಕೆಲವೊಂದು ನಿರ್ದಿಷ್ಟ ಸಮಯದ ನಂತರ ಮಾತ್ರ ತೋರಿಸುವುವು ಮತ್ತು ಅವುಗಳನ್ನು ಕಂಡುಹಿಡಿಯಲು ಡಾಕ್ಟರರಿಗೂ ಸಾಧ್ಯವಾಗುವದಿಲ್ಲ. ಬ್ರೂಸ್ ಲೀ ಸೇವಿಸುತ್ತಿದ್ದ ಮಾದಕ ಪದಾರ್ಥಗಳಲ್ಲಿಯ ಕೆಲವೊಂದು ಮಿಶ್ರಣ ಆತನ ಜೀವನಕ್ಕೆ ಮಾರಕವಾಗಿರಬಹುದು. ಕೆಲವರ ಮಾತಿನ ಪ್ರಕಾರ ಬ್ರೂಸ್ ಲೀ ತನ್ನ ಆರೋಗ್ಯ ಮತ್ತು ಚಟುವಟಿಕೆಯನ್ನು ಕಾಯ್ದುಕೊಳ್ಳಲು ಆವಶ್ಯಕತೆಗಿಂತ ಹೆಚ್ಚಾಗಿ ವ್ಯಾಯಾಮ ಮತ್ತು ಯುದ್ಧಕಲೆಯ ಪ್ರಾತ್ಯಕ್ಷಿಕೆಗಳನ್ನು ಮಾಡುತ್ತಿದ್ದ. ಈ ಹೆಚ್ಚಿನ ಶ್ರಮವನ್ನು ಜೀರ್ಣಿಸಿಕೊಳ್ಳಲು ಶರೀರಕ್ಕೆ ಸಾಧ್ಯವಾಗದೇ ಮೃತ್ಯು ಬಂದಿರಬಹುದು.

ಬ್ರೂಸ್ ಲೀ ಇಂದಿಲ್ಲ. ಆದರೆ ತನ್ನ ಮರಣದ ಹಿಂದೆ ರಹಸ್ಯವನ್ನು ಬಿಟ್ಟುಹೋಗಿದ್ದಾನೆ. ಇಂದು ಅನೇಕ ಪತ್ತೇದಾರರು ವರದಿಗಾರರು ಮತ್ತು ಆತನ ಪ್ರಶಂಸಕರು ಆತನ ಮರಣದ ನಿಜಕಾರಣವನ್ನು ಕಂಡುಹಿಡಿಯಲು ಪ್ರಯತ್ನ ಮಾಡುತ್ತಿದ್ದಾರೆ.

✡



ಸಯಾಮಿನಲ್ಲಿ ಜನ ಬಿಳಿ ಹಲ್ಲುಗಳಿಗಿಂತ ಕಪ್ಪು ಹಲ್ಲುಗಳನ್ನು ಮೆಚ್ಚುವುದೇ ಹೆಚ್ಚು. ಆದ್ದರಿಂದಲೇ ಗಟ್ಟಿಮುಟ್ಟಾದ ಶುಭ್ರ ಹಲ್ಲುಗಳನ್ನು ಕಿತ್ತಿಸಿಕೊಂಡು ಕೃತ್ರಿಮ ಕಪ್ಪು ಹಲ್ಲುಗಳನ್ನು ಇಲ್ಲಿಯ ಅನೇಕರು ಕಟ್ಟಿಸಿಕೊಳ್ಳುವುದುಂಟು.

ಅಮೇರಿಕದಲ್ಲಿ ಕ್ರಾಂತಿಪೂರ್ವದಲ್ಲಿ ಅನೇಕರು ತಮ್ಮ ಬಿದ್ದು ಹೋದ ಹಲ್ಲುಗಳಿಂದಾಗಿ ಮುಖಕ್ಕೆ ಗುಳಿ ಬೀಳಬಾರದೆಂದು ಬಾಯಲ್ಲಿ ಹತ್ತಿದಂತದ ಚೆಂಡುಗಳನ್ನು ಹಿಡಿದಿಡುತ್ತಿದ್ದರು. ಆ ಕಾಲಕ್ಕೆ ದಂತವೈದ್ಯರ ಸಂಖ್ಯೆಯೂ ವಿರಳವಾಗಿತ್ತಾದ್ದರಿಂದ 'ಔಷಧ'ಗಳನ್ನು ತಲೆ ಮೇಲೆ ಹೊತ್ತುಕೊಂಡು ಊರೂರು ಅಲೆಯುವ 'ವೈದ್ಯರಾಜ'ರೇ ಈ ಕೆಲಸ ಮಾಡುತ್ತಿದ್ದರು. ಅಗತ್ಯವೆನಿಸಿದಾಗ ಇವರು ಹಲ್ಲುಗಳನ್ನು ಕೀಳುತ್ತಿದ್ದರು ಕೂಡ. ಅಮೇರಿಕದ ಕ್ರೀಡಾ ಇತಿಹಾಸದಲ್ಲಿ ಪ್ರಖ್ಯಾತ ಅಶ್ವಾರೋಹಿಯೆನಿಸಿದ ಪೌಲ್ ರೀವೀಯರ್ ತನ್ನ ಬಿಡುವಿನ ಸಮಯದಲ್ಲಿ, "ಸ್ತ್ರೀ ಪುರುಷರ ಹಲ್ಲುಗಳನ್ನು ಸ್ವಚ್ಛ ಮಾಡುವುದಕ್ಕಾಗಿ ಮೊದಲೇ ಸಮಯಾವಕಾಶವನ್ನು ಗೊತ್ತುಪಡಿಸಿಕೊಳ್ಳಬಹುದು," ಎಂದು ಜಾಹೀರಾತು ಕೊಟ್ಟಿದ್ದನಂತೆ.

### ಕ್ಷಯರೋಗ ಜಂತುಗಳನ್ನು ರಾಬರ್ಟ್ ಕಾಕ್ ಕಂಡುಹಿಡಿದು ನೂರು ವರ್ಷಗಳಾದವು

# ಕ್ಷಯ: ಒಂದು ಪ್ರಗತಿ ವರದಿ

ಹಲವಾರು ವರ್ಷಗಳ ಹಿಂದೆ ಪುರಾತತ್ತ್ವ ಶಾಸ್ತ್ರಜ್ಞರು ಮೂರು ಸಾವಿರ ವರ್ಷಗಳಷ್ಟು ಹಳೆಯದಾದ ಮಮ್ಮಿಯೊಂದನ್ನು ಈಜಿಪ್ಟಿನಲ್ಲಿ ಶೋಧಿಸಿದಾಗ ಮಮ್ಮೀಕೃತನಾದ ವ್ಯಕ್ತಿ ಕ್ಷಯ ರೋಗದಿಂದ ತೀರಿಕೊಂಡಿದ್ದು ಗೊತ್ತಾಯಿತು. ಇಲ್ಲಿಯವರೆಗೆ ದೊರೆತ ಕ್ಷಯರೋಗದ ಪ್ರತ್ಯಕ್ಷ ಪ್ರಮಾಣಗಳ ಪೈಕಿ ಇದೇ ಎಲ್ಲಕ್ಕೂ ಹಳೆಯದೆಂದು ಭಾವಿಸಲಾಗಿದೆ. ಆದರೆ ಇದರಿಂದ ಆ ಕಾಲದಲ್ಲಿಯೂ ಕ್ಷಯರೋಗ ಜನರನ್ನು ಬಾಧಿಸುತ್ತಿತ್ತೆನ್ನುವುದು ಸಿದ್ಧವಾಗುತ್ತದೆಯೇ ಹೊರತು ಆ ರೋಗ ಅವರಿಗೆ ಗೊತ್ತಿತ್ತೆ? ಎನ್ನುವುದು ಸಂಶಯಾಸ್ಪದವಾಗಿಯೇ ಉಳಿಯುತ್ತದೆ. ಪಾಶ್ಚಾತ್ಯ ಪಂಡಿತರ ಪ್ರಕಾರ ಈ ರೋಗವನ್ನು ಮೊತ್ತ ಮೊದಲು ಕಂಡುಹಿಡಿದಾತ ಆಧುನಿಕ ವೈದ್ಯಶಾಸ್ತ್ರದ ಪಿತಾಮಹನಾದ ಹಿಪ್ಪೋಕ್ರೇಟಸ್. ಆದರೆ ನಮ್ಮ ಜನರಿಗೆ ಈ ರೋಗ ಅದಕ್ಕಿಂತ ಮೂರು ನಾಲ್ಕು ಸಾವಿರ ವರ್ಷಗಳಷ್ಟು ಹಿಂದೆಯೇ ಪರಿಚಿತವಾಗಿತ್ತೆನ್ನುವುದಕ್ಕೆ ಋಗ್ವೇದದ ಆದಿಭಾಗದಲ್ಲಿ ಬರುವ ಯಕ್ಷ್ಮರೋಗಕ್ಕೆ ಸಂಬಂಧಿಸಿದ ಸೂಕ್ತಗಳೇ ಸಾಕ್ಷಿ. ಅಲ್ಲಿ ಯಕ್ಷ್ಮವನ್ನು ಅಧಿದೈವತೆಯ ಸ್ಥಾನಕ್ಕೇರಿಸಿ ನಮ್ಮನ್ನು ರೋಗದ ಪಾಶದಿಂದ ಪಾರುಮಾಡೆಂದು ಪ್ರಾರ್ಥಿಸಲಾಗಿದೆ. ಮುಂದೆ ಕ್ರಮೇಣವಾಗಿ ಕ್ಷಯರೋಗಕ್ಕೆ ಸಂಬಂಧಿಸಿದ ಹಾಗೆ ಅನೇಕ ಚಿಕಿತ್ಸಾವಿಧಾನಗಳು ಆಯುರ್ವೇದದಲ್ಲಿ ರೂಪಿಸಲ್ಪಟ್ಟವಾದರೂ ಅವು ನೂರಕ್ಕೆ ನೂರರಷ್ಟು ಫಲದಾಯಕವಾಗಿವೆಯೆ ಎನ್ನುವುದು ಸಂದಿಗ್ಧವಾಗಿಯೇ ಇದೆ.

ಕ್ಷಯರೋಗವನ್ನು ಎರಡು ಎರಡೂವರೆ ಸಾವಿರ ವರ್ಷಗಳ ಹಿಂದೆಯೇ ಹಿಪ್ಪೋಕ್ರೇಟಿಸ್ ಕಂಡುಹಿಡಿದನಾದರೂ ಆ ರೋಗಕ್ಕೆ ರೋಗ ಜಂತುಗಳು ಕಾರಣ ಎನ್ನುವುದು ತಿಳಿದು ಬರಲು ಅನೇಕ ಶತಮಾನಗಳೇ ಬೇಕಾದವು. ಹೀಗಾಗಿ ಅಲ್ಲಿಯವರೆಗೆ ಚಿಕಿತ್ಸಾವಿಧಾನಕ್ಕೆ ಕಲ್ಪನೆಯೆ ಆಧಾರವಾಗಿತ್ತು. ರಕ್ತ ಕೆಟ್ಟು ಈ ರೋಗ ಬರುವುದೆಂಬ ಭಾವನೆ ಸಾರ್ವತ್ರಿಕವಾಗಿದ್ದರಿಂದ ಈ 'ಕೆಟ್ಟ ರಕ್ತ'ವನ್ನು ಆಗಾಗ ಶರೀರದಿಂದ ಹೊರಹಾಕುವ ವಿಧಾನ ಬಹು ಕಾಲದವರೆಗೆ ಪ್ರಚಲಿತವಿತ್ತು. ಆದರೆ ಇದರಿಂದ ರೋಗಿ ಗುಣಮುಖನಾಗುವುದಿಲ್ಲವೆಂಬುದು ತಿಳಿದು ಬಂದಾಗ ಆರ್ಸೆನಿಕ್ (ಇದರಿಂದಲೆ ಸೇಂಟ್ ಹೆಲೆನಾದಲ್ಲಿ ನೆಪೋಲಿಯನ್ನನನ್ನು ಕೊಲ್ಲಲಾಯಿತು). ಅಯೋಡೀನ್, ಬಂಗಾರ, ಬೆಳ್ಳಿ ಮುಂತಾದವುಗಳಿಂದ 'ಔಷಧ'ಗಳನ್ನು ತಯಾರಿಸುವ ಪದ್ಧತಿ ಬಳಕೆಗೆ ಬಂತು. ಇದೂ ಪ್ರಯೋಜನಕರವಲ್ಲವೆನ್ನುವುದು ಗೊತ್ತಾದಾಗ ಆಹಾರ ಕೊಡುವ ಹಾಗೂ ಗಂಟಲಿನ ಹತ್ತಿರ ಜಿಗಳೆಗಳನ್ನು ಬಿಟ್ಟು ಅವು 'ಕೆಟ್ಟ ರಕ್ತ'ವನ್ನು ಹೀರುವ ಹಾಗೆ ಮಾಡುವ ಹಾಗೂ ಪೌಷ್ಟಿಕವಾದ ಆಹಾರ ಕೊಡುವ ಪದ್ಧತಿ ಬಳಕೆ ಬಂತು.

ಇವರಿಂದಾಗಿಯೂ ರೋಗ ಗುಣವಾಗುವುದಿಲ್ಲವೆನ್ನುವುದು ಜನರ ಗಮನಕ್ಕೆ ಬರಲು ತಡವಾಗಲಿಲ್ಲ. ಹೀಗಾಗಿ ಕ್ಷಯರೋಗ



೧೮೮೨ ರ ಮಾರ್ಚ್ ೨೪ರಂದು ರಾಬರ್ಟ್ ಕಾಕ್ ಕ್ಷಯ ರೋಗಾಣುಗಳನ್ನು ಗುರುತಿಸಿ ಬೇರ್ಪಡಿಸಿದ. ಈ ಚಿತ್ರ ಆ ವಿಜ್ಞಾನಿಯದು. ವರ್ತುಲದಲ್ಲಿರುವವೇ ಹಿಗ್ಗಿಸಿದ ರೋಗಾಣುಗಳು.

ಪ್ರಾಣಾಂತಕವೆನ್ನುವ ವಿಚಾರ ಸಾರ್ವತ್ರಿಕವಾಗಿ ಪ್ರಚಲಿತವಾಯಿತು. ಬಹುಶಃ ಅದಕ್ಕೇ ಇರಬೇಕು, ಇಂಗ್ಲೆಂಡಿನ ಹೆಸರಾಂತ ಲೇಖಕ ಜಾನ್ ಬನಿಯನ್ ತನ್ನ ಒಂದು ಕಥೆಯಲ್ಲಿ ಕ್ಷಯರೋಗ ಯಮದೂತರ ಮುಖಾಂತರವಾಗಿ ಬಂತು ಎಂದು ಹೇಳಿದ್ದಾನೆ.

ಸರಿಯಾಗಿ ಇಂದಿಗೆ ನೂರು ವರ್ಷಗಳ ಹಿಂದೆ ಜರ್ಮನಿಯಲ್ಲಿ ರಾಬರ್ಟ್ ಕಾಕ್ ಎಂಬ ವಿಜ್ಞಾನಿ ಕ್ಷಯರೋಗ ಜಂತುಗಳನ್ನು ಕಂಡುಹಿಡಿದಿದ್ದಲ್ಲದೆ (೧೮೮೨) ಅವುಗಳನ್ನು ಘನಮಾಧ್ಯಮದ ಮೇಲೆ ಬೆಳೆಸುವ ವಿಧಾನವನ್ನು ಸಂಶೋಧಿಸಿ ರೋಗಜಂತು ಶಾಸ್ತ್ರಕ್ಕೆ ಅಸ್ತಿವಾರ ಹಾಕಿದ ನಂತರ ಈ ರೋಗದ ಸಂಶೋಧನೆಗೆ ಹೊಸ ತಿರುವು ಬಂತು.

ರಾಬರ್ಟ್ ಕಾಕ್ ಕ್ಷಯರೋಗ ಜಂತುಗಳನ್ನು ಸಂಶೋಧಿಸಿದ ನಂತರ ಹದಿಮೂರು ವರ್ಷಗಳಲ್ಲಿ ಎಕ್ಸ್‌ರೇ ಕಂಡುಹಿಡಿಯಲ್ಪಟ್ಟು ರೋಗನಿದಾನದ ದಾರಿ ಸುಗಮವಾಯಿತು. ೧೯೨೧ರಲ್ಲಿ ಎ. ಕಾಮೆಟ್ ಹಾಗೂ ಜಿ. ಗೆರಿನ್ ಎಂಬವರು ಬಿಸಿಜಿ ಲಸಿಕೆಯನ್ನು ತಯಾರಿಸಿ ವ್ಯಾಪಕಪ್ರಮಾಣದಲ್ಲಿ ಬಳಕೆಯಲ್ಲಿ ತಂದಿದ್ದು ಕ್ಷಯರೋಗದ ಪ್ರತಿಬಂಧಕೋಪಾಯಗಳ ಮಾರ್ಗದಲ್ಲಿ ಒಂದು ಮೈಲುಗಲ್ಲೆನ್ನಬೇಕು.

ಮುಂದೆ ೧೯೪೪ರಲ್ಲಿ ಅಮೇರಿಕದಲ್ಲಿ ಸ್ಟ್ರೆಪ್ಟೋಮೈಸಿನ್ ಕಂಡುಹಿಡಿಯಲ್ಪಟ್ಟು ಅದಕ್ಕಾಗಿ ವಾಕ್‌ಮನ್ ಎಂಬ ವಿಜ್ಞಾನಿಗೆ ಮುಂದೆ ನೋಬೆಲ್ ಬಹುಮಾನವೂ ಬಂತು. ಇಂದಿಗೂ ಸ್ಟ್ರೆಪ್ಟೋಮೈಸಿನ್ ಕ್ಷಯರೋಗಕ್ಕೆ ಬಹು ಪ್ರಭಾವಶಾಲಿಯಾದ ಔಷಧವೆಂದು ಭಾವಿಸಲಾಗಿದೆ. ಆದರೆ ಇದನ್ನು ಬಹುಕಾಲ ತೆಗೆದುಕೊಂಡರೆ ತಲೆ ಸುತ್ತತೊಡಗುತ್ತದೆ. ಶ್ರವಣಶಕ್ತಿ ಕುಂದಲಾರಂಭಿಸುತ್ತದೆ. ಈ ಔಷ



ಧಿಗೆ ರೋಗಜಂತುಗಳು ಒಗ್ಗಿಕೊಂಡು ರೋಗ ಉಲ್ಬಣಿಸುವ ಸಂಭವವೂ ಉಂಟು. ಇವನ್ನೆಲ್ಲ ಹೋಗಲಾಡಿಸಬೇಕೆಂದರೆ ಸ್ಟ್ರೆಪ್ಟೋಮೈಸಿನ್ನಿಗೆ ಪೂರಕವಾಗಿ ಬೇರೆ ಔಷಧವನ್ನು ಕೊಡಬೇಕು.

ಈ ಹೊಸ ಔಷಧಿಗಳಿಗಾಗಿ ಕಾಯುವ ಪ್ರಮೇಯ ಜಗತ್ತಿಗೆ ಒದಗಲೇ ಇಲ್ಲ. ಸ್ಟ್ರೆಪ್ಟೋಮೈಸಿನ್ನಿನ ಶೋಧವಾದ ಒಂದು ವರ್ಷದಲ್ಲಿ ಪಿ. ಅಮೈನೋಸ್ಯಾಲಿಸಿಲಿಕ್ ಆ್ಯಸಿಡ್ಡಿನ (PAS) ಹಾಗೂ ಮುಂದೆ ಆರು ವರ್ಷಗಳಲ್ಲಿ ಐಸೋನಿಯಾಜಿಡ್ಡಿನ ಶೋಧವಾಗಿ ಕ್ಷಯರೋಗ ಮಾನವನ ಹತೋಟಿಗೆ ಬರುವಂತಾಯಿತು. ಇವೆರಡೂ ಔಷಧಗಳು ಬಹು ಅಗ್ಗವಾಗಿದ್ದರಿಂದ ತೀರಾ ಬಡವರಿಗೂ ಇದು ಎಟಕುವಂತಾಗಿ ಶತಶತಮಾನಗಳಿಂದ ಬಾಧಿಸುತ್ತಿದ್ದ ಈ ರೋಗ ಕಣ್ಮರೆಯಾಗುವ ಪರಿಸ್ಥಿತಿ ಒದಗಿತೆಂದೇ ಎಲ್ಲರೂ ಭಾವಿಸುವಂತಾಯಿತು.

ಆದರೆ ವಾಸ್ತವವಾಗಿ ಆದದ್ದೇ ಬೇರೆ. ಮುಂದುವರಿದ ಪಾಶ್ಚಾತ್ಯ ದೇಶಗಳಲ್ಲಿ ರೋಗದ ಪ್ರಮಾಣ ಕಡಿಮೆಯಾಗುತ್ತಾ ಬಂದರೆ ಹಿಂದುಳಿದ ಏಶಿಯ ಹಾಗೂ ಆಫ್ರಿಕದ ದೇಶಗಳಲ್ಲಿ ರೋಗ ಬೆಳೆಯುತ್ತಲೇ ಹೋಯಿತು. ಕೊಳಚೆ ಪ್ರದೇಶಗಳಲ್ಲಿ ವಾಸಿಸುವವರಲ್ಲೂ, ಪೌಷ್ಟಿಕ ಆಹಾರದ ಅಭಾವವಿರುವವರಲ್ಲೂ ಈ ರೋಗ ಬೆಳೆಯುವದರಿಂದ ಹೆಚ್ಚಾಗಿ ಬಡವರೇ ಈ ರೋಗಕ್ಕೆ ತುತ್ತಾಗುತ್ತಿದ್ದಾರೆ.

ಹಾಗಾದರೆ ಇದಕ್ಕೇನು ಉಪಾಯ? ವಿಜ್ಞಾನಿಗಳು ಕ್ಷಯರೋಗಕ್ಕೆ ತುತ್ತಾದವರ ಜೀವನ ವಿಧಾನವನ್ನು ಅಭ್ಯಸಿಸಿದಾಗ ಅವರಲ್ಲಿ ಬಹುತೇಕ ಜನ ಸ್ವಲ್ಪವಾಸಿಯಾದ ಹಾಗೆ ಕಂಡಕೂಡಲೆ ಔಷಧ ಸೇವನೆಯನ್ನು ವರ್ಜಿಸುತ್ತಾರೆ. ಆಗ ರೋಗ ಜಂತುಗಳು ಮೊದಲು ಕೊಡುತ್ತಿದ್ದ ಔಷಧಿಗಳಿಗೆ ಒಗ್ಗಿಕೊಳ್ಳುವುದರಿಂದ ರೋಗ ಮತ್ತೆ ಉಲ್ಬಣಿಸಿ ರೋಗಿಗಳು ಮೃತ್ಯುಮುಖರಾಗುತ್ತಾರೆ ಎಂಬುದು ತಿಳಿಯಿತು.

ಈ ರೋಗ ಬಂದರೆ ರೋಗ ಗುಣವಾದ ಹಾಗೆ ಕಂಡರೂ ಒಂದು ಒಂದೂವರೆ ವರ್ಷದ ವರೆಗೆ ಡಾಕ್ಟರರು ವಿಧಿಸಿದ ಔಷಧವನ್ನು ತೆಗೆದುಕೊಳ್ಳಲೇಬೇಕು. ಈ ಬಗ್ಗೆ ವೈದ್ಯರು ರೋಗಿಗಳಿಗೆ ಸರಿಯಾದ ತಿಳುವಳಿಕೆಯನ್ನು ಕೊಡಬೇಕು. ಅವರಿಗೆ ಪೌಷ್ಟಿಕವಾದ ಆಹಾರ ದೊರೆಯುವ ಹಾಗೆ ನೋಡಿಕೊಳ್ಳಬೇಕು. ಆದರೆ ಎಷ್ಟೋ ಜನ ವೃತ್ತಿನಿರತರಿಗೆ ನಿತ್ಯ ಔಷಧ ಸೇವನೆ ಸಾಧ್ಯವಾಗುವುದಿಲ್ಲ. ಸಾಧ್ಯವಾದರೂ ದೀರ್ಘಕಾಲದವರೆಗೆ ಅದನ್ನು ಸೇವಿಸುವುದು ಬೇಸರದ ಸಂಗತಿಯಾಗಿ ಪರಿಣಮಿಸುತ್ತದೆ.

ಇದಕ್ಕಾಗಿಯೇ ವಿಜ್ಞಾನಿಗಳು ಇನ್ನೂ ಹಲವಾರು ಬಗೆಯ ಕ್ಷಯನಿರೋಧಕಗಳನ್ನು ಸಂಶೋಧಿಸಿದ್ದಾರೆ. ಇವುಗಳನ್ನು ವಾರಕ್ಕೆ ಎರಡು ಬಾರಿ ತೆಗೆದುಕೊಂಡರೆ ಸಾಕು. ಕ್ಷಯರೋಗದಿಂದ ಪೀಡಿತರಾದವರು ಆರೋಗ್ಯಧಾಮಗಳಲ್ಲಿದ್ದು ಚಿಕಿತ್ಸೆ ಪಡೆದರೆ ಮಾತ್ರ ಸಂಪೂರ್ಣವಾಗಿ ಗುಣಮುಖರಾಗುವರೆಂಬ ಭಾವನೆ ಸಾರ್ವತ್ರಿಕವಾಗಿ ಪ್ರಚಲಿತವಾಗಿತ್ತು. ಆದರೆ ಪೌಷ್ಟಿಕ ಆಹಾರ, ಒಳ್ಳೆಯ ವಾತಾವರಣ ಹಾಗೂ ಯುಕ್ತವಾದ ಚಿಕಿತ್ಸೆಗಳು ಆರೋಗ್ಯಧಾಮಗಳಿಗೆ ಹೋಗುವುದಕ್ಕಿಂತ ಎಷ್ಟೋ ಮೇಲು ಎಂಬುದು ಮದ್ರಾಸಿನಲ್ಲಿ ಭಾರತೀಯ ವಿಜ್ಞಾನಿಗಳು ನಡೆಸಿದ ಸಮೀಕ್ಷೆಯಿಂದ ವೃಥೆಪಟ್ಟಿದ್ದು ಜಗತ್ತಿನಾದ್ಯಂತ ಬಹುತೇಕ ವಿಜ್ಞಾನಿಗಳು ಅದನ್ನು ಅನುಮೋದಿಸಿದ್ದಾರೆ.

ಕ್ಷಯರೋಗ ನಿರೋಧಕವಾಗಿ ಈಗ ಬಳಕೆಯಲ್ಲಿರುವ ಔಷಧಿಗಳ ಪೈಕಿ ೧೯೬೬ ರಲ್ಲಿ ಸಂಶೋಧಿಸಲ್ಪಟ್ಟ ರಿಫಾಂಪಿಸಿನ್ ಎಂಬ ಔಷಧಿಯೇ ಎಲ್ಲಕ್ಕಿಂತ ಪ್ರಭಾವಶಾಲಿಯಾಗಿದ್ದು ಇದನ್ನು ವಾರಕ್ಕೊಂದಾವರ್ತಿಯಾಗಿ ಒಂದು ವರ್ಷದ ವರೆಗೆ ಸೇವಿಸಿದರೆ ಕ್ಷಯ ಗುಣವಾಗುತ್ತದೆ.

ಇಷ್ಟೆಲ್ಲ ಆದರೂ ಹಿಂದುಳಿದ ದೇಶಗಳಲ್ಲಿ ಪ್ರತಿ ವರ್ಷ ಸುಮಾರು ಎಂಭತ್ತು ಲಕ್ಷ ಜನ ಈ ರೋಗಕ್ಕೆ ತುತ್ತಾಗುತ್ತಿದ್ದಾರೆ. ಸರಿಯಾದ ವೈದ್ಯಕೀಯ ತಿಳುವಳಿಕೆ, ಸ್ವಚ್ಛತೆಯತ್ತ ಗಮನ ಹಾಗೂ ಪೌಷ್ಟಿಕ ಆಹಾರಗಳು ಲಭ್ಯವಾಗುವ ವರೆಗೆ ಈ ದೇಶಗಳಲ್ಲಿ ಕ್ಷಯರೋಗ ಅಕ್ಷಯವಾಗಿಯೇ ಉಳಿಯುವುದೇನೊ! 

ಪ್ರತಿಕ್ರಿಯೆ

# ರಾಮಾಯಣದಲ್ಲಿ ರಾಜಕಾರಣ?

**ಚಿದಂಬರಾನಂದ**

ಸಂಶೋಧನೆಯ ಹೆಸರಿನಲ್ಲಿ, ವಿಮರ್ಶೆಯ ಹೆಸರಿನಲ್ಲಿ ನಮ್ಮ ಸಂಸ್ಕೃತಿಯಲ್ಲಿರುವ ಉತ್ತಮಾಂಶಗಳನ್ನು ಸಮರ್ಥವಾದ ರೀತಿಯಲ್ಲಿ ಅಭಿವ್ಯಕ್ತಗೊಳಿಸುವ ಪ್ರಾಚೀನ ಕೃತಿಗಳಿಗೆ ಮಸಿ ಬಳಿಯಲು ಯತ್ನಿಸುವುದು ಇಂದು ಒಂದು "ಫ್ಯಾಶನ್" ಅಥವಾ "ಫ್ಯಾಡ್" ಆಗಿಬಿಟ್ಟಿದೆ. ಕಳೆದ ತಿಂಗಳ "ಕಸ್ತೂರಿ" ಯಲ್ಲಿ ಪ್ರಕಟವಾದ ಪಂಡಿತ್ ಗಣಪಯ್ಯಭಟ್ಟರು ಬರೆದ ರಾಮಾಯಣದಲ್ಲಿ ರಾಜಕಾರಣ, ಎಂಬ ಲೇಖನವೂ ಒಂದು ಉತ್ತಮವಾದ ಉದಾಹರಣೆಯಾಗಿದೆ.

ರಾಮಾಯಣವು ಭಾರತೀಯ ಸಂಸ್ಕೃತಿಯಲ್ಲಿರುವ ಉತ್ತಮವಾದ ಆದರ್ಶಗಳನ್ನು ಉಜ್ವಲವಾದ ಧರ್ಮವನ್ನು, ನ್ಯಾಯಸಮ್ಮತವಾದ ರಾಜ್ಯಾಡಳಿತವನ್ನು ಪ್ರತಿಬಿಂಬಿಸುವ ಒಂದು ಶ್ರೇಷ್ಠವಾದ ಮಹಾಕಾವ್ಯವಾಗಿದೆ. ಇಂಥ ಶ್ರೇಷ್ಠ ಕಾವ್ಯವು ಜಗತ್ತಿನ ಇನ್ನಾವ ಸಾಹಿತ್ಯದಲ್ಲಿಯೂ ಇಲ್ಲ. ರಾಮಾಯಣವು ಬರೀ ಕಾವ್ಯವಲ್ಲ, ಓದುಗರನ್ನು ಪಾವನಗೊಳಿಸುವ ಪವಿತ್ರವಾದ ಗಂಗಾನದಿ. ಇಂಥ ಪವಿತ್ರ ಕಾವ್ಯದಲ್ಲಿ ಹೊಲಸು ರಾಜಕಾರಣವನ್ನು ಹುಡುಕುವುದು ವಿವೇಕವಲ್ಲ.

ಪಂಡಿತ್ ಗಣಪಯ್ಯಭಟ್ಟರು ಪೂರ್ವಾಗ್ರಹದೋಷಿತ ದೃಷ್ಟಿಯಿಂದ ಈ ಲೇಖನ ಬರೆದಿದ್ದಾರೆಂಬುದಕ್ಕೆ ಕೆಳಗಿನ ಸಂಗತಿಗಳೇ ಸಾಕ್ಷಿಯಾಗಿವೆ.

(೧) ರಾಮಾಯಣದಂಥ ಬೃಹತ್ ಕಾವ್ಯವು ಕೇವಲ ಒಬ್ಬ ಕವಿಯಿಂದ ರಚಿತವಾದದ್ದೆಂಬುದು ಸಂದೇಹಾಸ್ಪದವಾದ ವಿಚಾರ ಎಂದು ಲೇಖಕರು ಹೇಳುತ್ತಾರೆ. ಇದು ಅತ್ಯಂತ ನಿರಾಧಾರವಾದ ವಿಷಯವಾಗಿದೆ. ಏಕೆಂದರೆ ರಾಮಾಯಣದಲ್ಲಿ ಸುಮಾರು ೨೪೦೦೦ದಿಂದ ೨೫೦೦೦ ದ ವರೆಗೆ ಅನುಷ್ಟುಪ್ ಶ್ಲೋಕಗಳಿವೆ. ಈ ಶ್ಲೋಕಗಳು ಬರೀ ಎರಡು ಸಾಲಿನ ಪದ್ಯಗಳು. ವಾಲ್ಮೀಕಿಯಂಥ ಪ್ರತಿಭಾಶಾಲಿಯಾದ, ಋಷಿಯಾದ ಕವಿ ತನ್ನ ಜೀವಮಾನದಲ್ಲಿ ಒಂದು ಐವತ್ತು ಸಾವಿರ ಸಾಲುಗಳ ಕಾವ್ಯವನ್ನು ಬರೆಯಲಾರ ಎಂದು ತರ್ಕ ಮಾಡುವುದೇ ತಪ್ಪು. ಒಬ್ಬ ಲೋಕೋತ್ತರ ಸಾಮರ್ಥ್ಯವುಳ್ಳ ವ್ಯಕ್ತಿಗೆ ಇದು ಅಸಾಧ್ಯವಾದ ಕಾರ್ಯವೇನೂ ಅಲ್ಲ. ವಾಲ್ಮೀಕಿರಾಮಾಯಣದಲ್ಲಿ ಸ್ವಲ್ಪ ಪ್ರಕ್ಷಿಪ್ತ ಭಾಗವಿರಬಹುದು. ಆದರೆ ಇಂಥ ಮಹಾಕಾವ್ಯವನ್ನು ಒಬ್ಬ ವ್ಯಕ್ತಿ ಬರೆಯಲಾರ ಎಂಬುದು ತಪ್ಪು ಸಿದ್ಧಾಂತವಾಗಿದೆ.

(೨) ಪುರಾಭ್ರಾತಃ ಪಿತಾನಃ
ಸಮಾತರಂ ತೇ ಸಮುದ್ವಹನ್
ಮಾತಾಮಹೇ ಸಮಾಶ್ರೌಷೀದ್ರಾಜ್ಯ
ಶುಲ್ಕ ಮನುತ್ತಮಮ್॥
(ರಾ. ೨, ೧೦೭, ೩)

ಎಂಬ ಶ್ಲೋಕವು ಕೈಕೇಯಿಯನ್ನು ವಿವಾಹವಾಗುವ ಪೂರ್ವದಲ್ಲಿ ರಾಮನ ಜನನವಾಗಿತ್ತೆಂಬುದನ್ನು ಸೂಚಿಸುವುದೇ ಇಲ್ಲ.

ಈ ಶ್ಲೋಕವನ್ನು ರಾಮನು ಭರತನಿಗೆ ಹೇಳುತ್ತಾನೆ. ದಶರಥನು ಕೈಕೇಯಿಯನ್ನು ಮದುವೆಯಾಗಲು ಬಯಸಿದಾಗ ಅವನಿಗೆ ಕೌಸಲ್ಯೆ ಮತ್ತು ಸುಮಿತ್ರಾ ಎಂಬ ಇಬ್ಬರು ಹೆಂಡಂದಿರು ಇರುತ್ತಾರೆ. ಆದುದರಿಂದ ಕೈಕೇಯಿಯ ತಂದೆಯಾದ ಅಶ್ವಪತಿಯು ಕೈಕೇಯಿಯನ್ನು ದಶರಥನಿಗೆ ಕೊಡುವ ಮೊದಲು ಕನ್ಯಾಶುಲ್ಕವನ್ನು ಕೇಳುತ್ತಾನೆ. ಕೈಕೇಯಿಗೆ ಹುಟ್ಟುವ ಮಗನೇ ಅಯೋಧ್ಯೆಯ ರಾಜನಾಗಬೇಕೆಂಬುದೇ ಈ ಕನ್ಯಾಶುಲ್ಕ. ಈ ಕನ್ಯಾಶುಲ್ಕವನ್ನು ಕೊಡಲು ದಶರಥನು ಒಪ್ಪಿ ಕೈಕೇಯಿಯನ್ನು ಮದುವೆಯಾಗುತ್ತಾನೆ.

ಈ ವಾಗ್ದಾನದಿಂದ ಕೈಕೇಯಿಯ ವಿವಾಹ ಪೂರ್ವದಲ್ಲಿ ಕೌಸಲ್ಯೆಗಾಗಲಿ ಸುಮಿತ್ರೆಗಾಗಲಿ ಮಕ್ಕಳಿದ್ದರು ಎಂಬುದು ಸಿದ್ಧವಾಗುವದಿಲ್ಲ. ಕೈಕೇಯಿಯ ವಿವಾಹ ಮೊದಲೇ ಕೌಸಲ್ಯೆಯಿಂದ ರಾಮನು ಹುಟ್ಟಿದ್ದರೆ ದಶರಥನು ಈ ಕನ್ಯಾಶುಲ್ಕಕ್ಕೆ ಒಪ್ಪುತ್ತಿರಲಿಲ್ಲ. ಇದಕ್ಕೆ ಮಹಾಭಾರತದಲ್ಲಿ ಬರುವ ಶಂತನು ಮಹಾರಾಜನ ಚರಿತ್ರೆಯೇ ಸಾಕ್ಷಿಯಾಗಿದೆ. ದಶರಥನೂ ಶಂತನು ಮಹಾರಾಜನಂತೆ ವಿವೇಕಶಾಲಿ. ಈಗಾಗಲೇ ರಾಮನಂಥ ಮಗನಿರುವಾಗ ಅಶ್ವಪತಿಯು ಬೇಡುವ ಕನ್ಯಾಶುಲ್ಕಕ್ಕೆ ಅವನು ಎಂದೂ ಒಪ್ಪುತ್ತಿರಲಿಲ್ಲ. ಮತ್ತು ರಾಮನಿಗೆ ಈ ವಿಷಯ ತಿಳಿದು ಪಿತೃಭಕ್ತನಾದ ರಾಮನು ದೇವವ್ರತನಂತೆ ಆಜನ್ಮ ಬ್ರಹ್ಮಚರ್ಯದ ವ್ರತವನ್ನು ಕೈಕೊಂಡು ಇನ್ನೊಬ್ಬ ಭೀಷ್ಮನಾಗುತ್ತಿದ್ದ. ಕೌಸಲ್ಯೆ ಹಾಗೂ ಸುಮಿತ್ರೆ ಇಬ್ಬರಿಗೂ ಮಕ್ಕಳು ಆಗದೇ ಇರುವುದರಿಂದ ದಶರಥನು ಕೇಕಯ ರಾಜನಾದ ಅಶ್ವಪತಿಯ ಮಗಳಾದ ಕೈಕೇಯಿಯನ್ನು ಅಶ್ವಪತಿಯು ಕೇಳುವ ಕನ್ಯಾಶುಲ್ಕಕ್ಕೆ ಸರಾಗವಾಗಿ ಒಪ್ಪಿ ಮದುವೆಯಾಗುತ್ತಾನೆ. ನಿಜ ಸಂಗತಿ ಹೀಗಿರುವಾಗ ಇದನ್ನು ಉದ್ದೇಶಪೂರ್ವಕವಾಗಿ ತಿರುಚಿ ಅಪಾರ್ಥ ಮಾಡುವದು ನಿಜವಾದ ವಿಮರ್ಶೆಯಲ್ಲ.

(೩) ಕೌಸಲ್ಯಾ ಬಿಭೃಯಾದಾರ್ಯಾ
ಸಹಸ್ರಮಪಿ ಮದ್ವಿಧಾನ್।
ಯಸ್ಯಾಃ ಸಹಸ್ರಂ ಗ್ರಾಮಾಣಾಂ
ಸಂಪ್ರಾಪ್ತಮುಪಜೀವಿನಾಮ್॥
(ರಾ. ೨, ೩೧, ೨೨)

ಎಂಬ ಶ್ಲೋಕದಿಂದ ಕೈಕೇಯಿಯು ಕೌಸಲ್ಯೆಗೆ ಉಪಜೀವನಕ್ಕೆ ಸ್ವಲ್ಪ ಭೂಮಿಯನ್ನು ಕೊಟ್ಟು ರಾಮನು ಪಟ್ಟಾಧಿಕಾರಿಯಾಗಬಾರದೆಂಬ ದುರುದ್ದೇಶದಿಂದ ಅವಳನ್ನು ದೂರವಿಟ್ಟಿದ್ದಳು ಎಂದು ಅರ್ಥವಾಗುವುದೇ ಇಲ್ಲ. ಹೇಗೆಂದರೆ ಈ ಶ್ಲೋಕವನ್ನು ಲಕ್ಷ್ಮಣನು ಹೇಳುತ್ತಾನೆ. ಆ ಸಂದರ್ಭವು ಹೀಗಿದೆ:

ತನ್ನ ಸಂಗಡ ಕಾಡಿಗೆ ಹೊರಟ ಲಕ್ಷ್ಮಣನನ್ನು ತಡೆಯಲು ಶ್ರೀರಾಮನು, "ಲಕ್ಷ್ಮಣ, ನನ್ನ ಸಂಗಡ ನೀನೂ ಕಾಡಿಗೆ ಬಂದು ಬಿಟ್ಟರೆ ಕೌಸಲ್ಯೆಯನ್ನಾಗಲಿ, ಸುಮಿತ್ರೆಯನ್ನಾಗಲಿ ನೋಡಿಕೊಳ್ಳುವವರಾರು? ಕೈಕೇಯಿಯ ವಶಕ್ಕೆ ರಾಜ್ಯವು ಬಂದ ಮೇಲೆ ಅವಳು ಸವತಿಯರಿಗೆ ಒಳ್ಳೆಯದನ್ನು ಮಾಡುವ ಸಂಭವವಿಲ್ಲ. ಭರತನಿಗೆ ರಾಜ್ಯಾಧಿಕಾರವು ಬಂದಾಗ ಅವನು ಕೈಕೇಯಿಯ ಮಾತಿನಂತೆ ನಡೆಯಬೇಕಾಗುತ್ತದೆ. ಆದ್ದರಿಂದ ನೀನು ಇಲ್ಲಿಯೇ ಇದ್ದು ಅವರ ಯೋಗಕ್ಷೇಮವನ್ನು ನೋಡಿಕೋ," ಎಂದು ಹೇಳುತ್ತಾನೆ.

ಆಗ ಲಕ್ಷ್ಮಣ, "ಹೇ ವೀರಾಗ್ರಣಿ, ನಿನ್ನ ತೇಜೋಮಹಿಮೆಯಿಂದಲೇ ಭರತನು ಕೌಸಲ್ಯೆಯನ್ನೂ ಸುಮಿತ್ರೆಯನ್ನೂ ಎಚ್ಚರಿಕೆಯಿಂದ ಗೌರವಿಸಿ ನೋಡಿಕೊಳ್ಳುವನು. ಇದರಲ್ಲಿ ಸಂದೇಹವೇ ಬೇಡ. ಒಂದು ವೇಳೆ ಅವನಿಗೆ ದೊಡ್ಡ ರಾಜ್ಯವು ಸಿಕ್ಕಿತೆಂಬ ಗರ್ವದಿಂದ ದುರ್ಬುದ್ಧಿ ಬಂದು ದುರ್ಮಾರ್ಗಕ್ಕಿಳಿದು ಅವರನ್ನು ಸರಿಯಾಗಿ ಪೋಷಿಸದೇಹೋದರೆ ಕ್ರೂರನಾದ ಆ ದುಷ್ಟನನ್ನು ನಿಸ್ಸಂದೇಹವಾಗಿ ಕೊಂದು ಹಾಕುತ್ತೇನೆ. ಅವನ ಪಕ್ಷವನ್ನು ವಹಿಸಿ ಮೂರು

ಲೋಕದವರೆಲ್ಲರೂ ಬಂದರೂ ಅವರ ಪುಟ್ಟಿಸ-ಗಿಸೇನು. ಆದರೆ ಕೌಸಲ್ಯಾದೇವಿಯು ನನ್ನಂಥ ಸಾವಿರ ಜನರನ್ನಾದರೂ ಸಾಕಬಲ್ಲಳು. ಆಕೆಗೆ ಜೀವನಾರ್ಥವಾಗಿ ಒಂದು ಸಾವಿರ ಗ್ರಾಮಗಳಿವೆ. ಆ ಮಾತೆಯು ತನ್ನ ಯೋಗಕ್ಷೇಮವನ್ನು ನೋಡಿಕೊಳ್ಳಲು ಸಮರ್ಥಳು. ನನ್ನ ತಾಯಿಯನ್ನೂ ನನ್ನಂಥ ಎಷ್ಟೋ ಜನರನ್ನೂ ಪೋಷಿಸಬಲ್ಲಳು."

(ತದಾತ್ಮ ಭರಣೇ ಚೈವ ಮಮ
ಮಾತುಸ್ತಥೈವ ಚ। ಪರ್ಯಾಪ್ತಾ ಮದ್ವಿ
ಧಾನಾಂ ಚ ಭರಣಾಯ ಮನಸ್ವಿನೀ॥
ರಾ. ೨, ೩೧, ೨೩)

ಲಕ್ಷ್ಮಣನ ಈ ಮಾತುಗಳಿಂದ ಕೈಕೇಯಿಯೇ ಕೌಸಲ್ಯೆಗೆ ಕೆಲವು ಗ್ರಾಮಗಳನ್ನು ಕೊಟ್ಟು ದೂರವಿಟ್ಟಿದ್ದಳೆಂದು ಸಿದ್ಧವಾಗುವುದೇ ಇಲ್ಲ. ಲಕ್ಷ್ಮಣನಂತೂ ಹಾಗೆ ಹೇಳುವುದೇ ಇಲ್ಲ. ಇನ್ನು ಊಹೆ ಮಾಡುವುದಾದರೆ ದಶರಥನೇ ತನ್ನ ರಾಣಿಯರಲ್ಲಿ ಹಿರಿಯಳಾದ ಕೌಸಲ್ಯೆ ಕೈಕೇಯಿಯ ವಿವಾಹದಲ್ಲಿ ತಾನು ಕೊಟ್ಟ ವಾಗ್ದಾನದಿಂದ ಅಸಮಾಧಾನಗೊಳ್ಳಬಾರದೆಂದು ತಾನೇ ಈ ವ್ಯವಸ್ಥೆಯನ್ನು ಮಾಡಿರಬಹುದು. ಇದು ಕೈಕೇಯಿಯ ವ್ಯವಸ್ಥೆಯಂತೂ ಸರ್ವಥಾ ಅಲ್ಲ.

ಏಕೆಂದರೆ ಕೈಕೇಯಿಗೆ ಶ್ರೀರಾಮನ ಮೇಲೆ ಯಾವ ದ್ವೇಷವೂ ಇರಲಿಲ್ಲ. ಇಷ್ಟೇ ಅಲ್ಲ, ಶ್ರೀರಾಮನಿಗೆ ಯುವರಾಜ್ಯಾಭಿಷೇಕವಾಗುವ ಸುದ್ದಿಯನ್ನು ಮಂಥರೆಯು ಕೈಕೇಯಿಗೆ ತಿಳಿಸಿದಾಗ ಆಕೆಯು ಅತ್ಯಂತ ಸಂತುಷ್ಟಳಾಗಿ ಮಂಥರೆಗೆ ಆಭರಣವೊಂದನ್ನು ಬಹುಮಾನವಾಗಿ ಕೊಟ್ಟು ಹೀಗೆ ನುಡಿಯುತ್ತಾಳೆ: "ಮಂಥರೆ, ರಾಮನ ಪಟ್ಟಾಭಿಷೇಕದ ವಿಷಯವು ನನಗೆ ಪರಮಾನಂದಕರವಾದ ಸುದ್ದಿ. ಈ ಸುದ್ದಿಯನ್ನು ತಿಳಿಸಿದ ನಿನಗೆ ಇನ್ನು ಪ್ರಿಯವಾದ ಯಾವ ಕಾರ್ಯವನ್ನು ಮಾಡಿಕೊಡಲಿ? ರಾಮನಲ್ಲಾಗಲಿ ಭರತನಲ್ಲಾಗಲಿ ನನಗೆ ಯಾವ ವಿಶೇಷವೂ ಕಾಣಲಿಲ್ಲ. ಮಹಾರಾಜನು ರಾಮನಿಗೆ ರಾಜ್ಯಾಭಿಷೇಕ ಮಾಡುವನೆಂಬುದನ್ನು ಕೇಳಿ ನನಗೆ ಆನಂದವಾಗಿದೆ. [illegible] ಕ್ಕಿಂತಲೂ ಹೆಚ್ಚು ಆನಂದಕರವಾದ ಇನ್ನೊಂದು ವಾರ್ತೆಯನ್ನು ಹೇಳಲು ನಿನಗೆ ಶಕ್ಯವಿಲ್ಲ. ರಾಮನ ಪಟ್ಟಾಭಿಷೇಕವು ನನಗೆ ಅತ್ಯಂತ ಪ್ರಿಯವಾದ ಶುಭವಾರ್ತೆ. ನಿನಗೆ ಇನ್ನೂ ಬೇಕಾದದ್ದನ್ನು ಕೇಳಿಕೋ, ಕೊಡುತ್ತೇನೆ."

(ರಾ. ೨, ೭, ೩೨ ರಿಂದ ೩೬)

ಆದರೆ ಮೂಲತಃ ಕೈಕೇಯಿಯು ರಾಮನನ್ನು ಬಹಳ ಪ್ರೀತಿಸುತ್ತಿದ್ದಳು. ಮಂಥರೆಯು ಮಾತ್ರ ಅವಳಲ್ಲಿ ತಾತ್ಪೂರ್ತಿಕವಾಗಿ ರಾಮದ್ವೇಷವನ್ನು ಹುಟ್ಟಿಸಿದಳು. ಅದೇ ಮುಂದಿನ ಎಲ್ಲ ಅನರ್ಥಗಳಿಗೆ ಕಾರಣವಾಯಿತು.

ಈ ಅನರ್ಥಕ್ಕೆಲ್ಲ ಮೂಲ ಕಾರಣವೆಂದರೆ ದಶರಥನಿಗೆ ಒಬ್ಬ ಋಷಿಯಿಂದ ದೊರೆತ ಶಾಪ. ವೃದ್ಧ ತಾಯಿ ತಂದೆಗಳಿಗೆ ನೀರು ತರಲು ಶರಯೂ ನದಿಗೆ ಬಂದಿದ್ದ ಮುನಿಕುಮಾರನನ್ನು ದಶರಥನು ಅಜ್ಞಾನದಿಂದ ಕೊಲ್ಲುತ್ತಾನೆ. ಮಗನ ಮರಣದ ದುಃಖದಿಂದ ಆ ಋಷಿಕುಮಾರನ ತಂದೆಯು ದಶರಥನಿಗೆ ಹೀಗೆ ಶಾಪವನ್ನು ಕೊಡುತ್ತಾನೆ.

ಪುತ್ರವ್ಯಸನಜಂ ದುಃಖಂ ಯದೇತ
ನ್ಮಮ ಸಾಂಪ್ರತಮ್।
ಏವಂ ತ್ವಂ ಪುತ್ರ ಶೋಕೇನ
ರಾಜನ್ ಕಾಲಂ ಗಮಿಷ್ಯಸಿ॥
(ರಾ. ೨, ೬೪, ೫೪)

ಈ ಶಾಪದ ವಿಷಯವನ್ನು ಸ್ವತಃ ದಶರಥನೇ ಕೌಸಲ್ಯೆಗೆ ಹೇಳುತ್ತಾನೆ. ಶ್ರೀರಾಮನು ಅರಣ್ಯಕ್ಕೆ ಹೋದಮೇಲೆ ಅವನಿಗೆ ತಾನು ಯೌವ್ವನದಲ್ಲಿ ಮಾಡಿದ ಈ ದುಷ್ಕೃತ್ಯದ ನೆನಪಾಗುತ್ತದೆ.

ಈ ಶಾಪವು ಫಲಿಸುವುದಕ್ಕಾಗಿ ಮಂಥರೆಯಿಂದ ಕೈಕೇಯಿಯಲ್ಲಿ ದುರ್ಬುದ್ಧಿ ಹುಟ್ಟಿ ಮುಂದಿನ ಅನರ್ಥಕ್ಕೆ ಕಾರಣವಾಗುತ್ತದೆ.

ರಾಮಾಯಣದಲ್ಲಿ ಈ ಕಥೆಯು ಸ್ಪಷ್ಟವಾಗಿ ನಿರೂಪಿಸಲ್ಪಟ್ಟಿರುವಾಗ ಇದನ್ನೆಲ್ಲ ಕಡೆಗಣಿಸಿ ಅಲ್ಲಿ ರಾಜಕಾರಣವನ್ನು ಕಾಣುವುದು

ಒಂದು ರೋಮಾಂಚಕ ಘಟನೆ

# ಹಾವುಗಳೊಡನೆ ಹೋರಾಟ!

ಮೂಲ: **ಜೆರಾಲ್ಡ್ ಡ್ಯೂರೆಲ್**
ಕನ್ನಡಕ್ಕೆ: **ಗೀತಾ ಮುರಳಿ**

ನಾನೊಬ್ಬ ಪ್ರಾಣಿಸಂಗ್ರಾಹಕನೆಂದು ಜನರಿಗೆ ತಿಳಿದೊಡನೆ, ಅವರು ಕೇಳುವ ಮೊದಲನೆ ಪ್ರಶ್ನೆ ಏನೆಂದರೆ, "ಅದು ಭಾರೀ ಅಪಾಯಕರ ಕಾರ್ಯ ಅಲ್ಲವೆ?" ಅದಕ್ಕೆ ನಾನು ಉತ್ತರಿಸುವುದು, "ಜಾಗ್ರತೆಯಿಂದ ಕಾರ್ಯಾಚರಣೆ ನಡೆಸಿದರೆ, ಎಳ್ಳಷ್ಟು ಅಪಾಯಕರ ಅಲ್ಲ," ಎಂದು. "ನಿನಗೆ ಪ್ರಾಣಿಗಳ ಮೇಲೆ ಇಷ್ಟೇಕೆ ಮೋಹ?" ಎಂದೂ ಅವರು ಕೇಳುವುದುಂಟು. ಇದಕ್ಕೆ ಮಾತ್ರ ನನಗೇನು ಉತ್ತರಿಸಬೇಕೋ ತಿಳಿಯುವುದಿಲ್ಲ. ನನಗೆ ಊಟ ಮಾಡುವುದು ಹೇಗೆ ಇಷ್ಟವೋ ಅಷ್ಟೇ ಪಶು-ಪಕ್ಷಿಗಳೆಂದರೆ ಪ್ರೇಮ ಹಾಗೆಯೆ." ಎಂದಿಷ್ಟೇ ಹೇಳಬಲ್ಲೆ. ವನ್ಯಮೃಗಗಳನ್ನು ಹಿಡಿದು ಸಾಕುವುದು ಅತ್ಯಂತ ಕಠಿಣ ಕಾರ್ಯವೇ ಸರಿ. ಆದರೆ ನನಗದು ತುಂಬಾ ಸಂತೋಷಕರ, ಹವ್ಯಾಸ. ಕಾಡು ಪ್ರಾಣಿಗಳನ್ನು ಶೋಧಿಸಲು ನಾನು ಜಗತ್ತಿನ ನಿಬಿಡಾರಣ್ಯಗಳನ್ನೂ ಛೇದಿಸಿದ್ದೇನೆ. ಒಂದೊಂದು ಅಪರೂಪ ಪ್ರಾಣಿಯನ್ನು ಕಾದುಹಿಡಿದಾಗ ಪರಮಾನಂದಪಟ್ಟಿದ್ದೇನೆ.

ಪಶ್ಚಿಮ ಆಫ್ರಿಕಕ್ಕೆ ನಾನು ಎರಡನೆ ಬಾರಿ ಪ್ರಯಾಣ ಬೆಳೆಸಿದ್ದೆ. ಹಡಗಿನಲ್ಲಿ ಮ್ಯಾಕ್-ಟ್ಯೂಟಲ್ ಎಂಬ ಐರಿಷ್ ಯುವಕನ ಭೇಟಿಯಾಯಿತು. ಆತ ಅಲ್ಲಿಯ ಬಾಳೆ ತೋಟವೊಂದರಲ್ಲಿ ಉದ್ಯೋಗಸ್ಥನಾಗಿರಲು ಹೊರಟಿದ್ದ. [illegible]

ದವನಲ್ಲವಂತೆ. ಆಫ್ರಿಕ ಭಾರೀ ಭಯಂಕರ ದೇಶವೆಂದು ಆತನ ನಿಶ್ಚಿತ ಅಭಿಪ್ರಾಯವಾಗಿತ್ತು. ಆ ಭೂಖಂಡದಲ್ಲಿದ್ದ ಸರ್ಪಗಳೆಲ್ಲವೂ ತನ್ನ ಸ್ವಾಗತಕ್ಕಾಗಿ ಬಂದರುಕಟ್ಟೆಯ ಮೇಲೆ ಹಾಜರಿರುವವೆಂದು ಭಾವಿಸಿದ್ದನೇನೋ! ಆತನ ಭಯ ನಿವಾರಣೆ ಮಾಡಲು, ನಾನು ಹೋದ ಸಲ ಬಂದಾಗಿನ ಕಥೆ ಹೇಳಿದೆ. ಅಲ್ಲಿನ ಅರಣ್ಯದಲ್ಲಿ ಐದು ಹಾವುಗಳನ್ನು ಮಾತ್ರ ಕಂಡಿದ್ದು, ಅವೂ ಸರಸರನೆ ನುಸುಳಿಕೊಂಡು ಹೋಗಿದ್ದರಿಂದ ನನಗೆ ಅವುಗಳನ್ನು ಹಿಡಿಯಲಿಕ್ಕೆ ಆಗಲಿಲ್ಲವೆಂದೂ ವಿವರಿಸಿದೆ. "ಹಾವು ಹಿಡಿಯುವುದು ಬಲು ಅಪಾಯಕರವಲ್ಲವೆ?" ಎಂದಾತ ಪ್ರಶ್ನಿಸಿದ. "ಹಾವಿನ ಜಾತಿ ಯಾವುದೆಂದು ಅರಿತುಕೊಂಡು ಶಾಸ್ತ್ರರೀತಿಯಿಂದ ಅದನ್ನು ಹಿಡಿಯಲು ಹೋದರೆ ತುಂಬ ಸುಲಭ," ಎಂದು ಹೇಳಿದೆ. ನನ್ನ ಮಾತಿನಿಂದ ಆತನಿಗೆ ಸಾಕಷ್ಟು ಧೈರ್ಯ ಬಂತು. ನಾವು ಹಡಗಿನಿಂದ ಇಳಿಯುವಾಗ, ಆತ ನಾನು ಇಂಗ್ಲೆಂಡಿಗೆ ಮರಳುವ ಮುಂಚೆ, ಕೆಲವು ಅಪರೂಪ ಹಾವುಗಳನ್ನು ದೊರಕಿಸಿಕೊಡುವೆನೆಂದು ಮಾತು ಕೊಟ್ಟ. ನಾನವನಿಗೆ ಧನ್ಯವಾದ ಹೇಳಿದೆ.

ಐದು ತಿಂಗಳ ನಂತರ ನಾನು ಇಂಗ್ಲೆಂಡಿಗೆ ಮರಳಲು ಸಿದ್ಧನಾಗಿದ್ದೆ. ಚಿಕ್ಕ ಮಿಡತೆಗಳಿಂದ ಹಿಡಿದು ಭಾರೀ ಚಿಂಪಾಂಜಿಗಳ ವರೆಗೆ ವಿವಿಧ [illegible]

ಹಡಗು ಹೊರಡುವ ರಾತ್ರಿ. ನನ್ನ ಶಿಬಿರದ ಎದುರು ಒಂದು ಚಿಕ್ಕ ವ್ಯಾನು ಕಿರುಗುಟ್ಟುವ ಬ್ರೇಕಿನ ಶಬ್ದದೊಡನೆ ಬಂದು ನಿಂತಿತು. ಅದರಿಂದ ನನ್ನ ಐರಿಶ್ ಮಿತ್ರ ಇಳಿದ. ಅವನ ಜೊತೆ ಅನೇಕ ಸ್ನೇಹಿತರೂ ಇದ್ದರು. ನನಗೆ ವಚನ ಕೊಟ್ಟಂತೆ, ತನಗೆ ಆ ಹಾವುಗಳು ಲಭಿಸಿದವೆಂದು ಭಾರೀ ಹಿಗ್ಗಿನಿಂದ ತಿಳಿಸಿದ. ತಾನು ಕೆಲಸಕ್ಕಿದ್ದ ಬಾಳೆ ತೋಟದಲ್ಲಿ ಎಲ್ಲಿಯೋ ಒಂದು ದೊಡ್ಡ ತೂತೊ ತಗ್ಗಿನಲ್ಲಿಯೋ, ತುಂಬ ಹಾವುಗಳು ಇದ್ದು ನಾವು ಹೋಗಿ ಅವುಗಳನ್ನು ಹಿಡಿದುಕೊಂಡರೆ ಅವೆಲ್ಲವೂ ನನ್ನ ಸ್ವತ್ತಾಗುವವೆಂದು ಸ್ಪಷ್ಟಪಡಿಸಿದ.

ನಾನೊಬ್ಬ ಉತ್ಸಾಹಿ ಪ್ರಾಣಿಶಾಸ್ತ್ರಜ್ಞ ನಾದರೂ ಮಧ್ಯರಾತ್ರಿಯಲ್ಲಿ ಅಸಂಖ್ಯಾತ ಹಾವು ಗಳು ಹರಿದಾಡುವ ಕಂದಕದಲ್ಲಿ ಇಳಿಯುವದು ಸುಲಭವಲ್ಲವೆಂದು ಆತನಿಗೆ ಹೇಳಬೇಕೆಂದೆ. ಆದರೆ ಆತನ ಅಪರಿಮಿತ ಉತ್ಸಾಹವನ್ನು ಗಮನಿಸಿ ಹಾಗೆ ಹೇಳಲು ಮನಸ್ಸಾಗಲಿಲ್ಲ. ಮೇಲಾಗಿ ತನ್ನ ಸ್ನೇಹಿತರ ಮುಂದೆಲ್ಲ ನನ್ನ ಕೈಚಳಕದ ಬಗ್ಗೆ ಜಂಬಕೊಚ್ಚಿ, ಅವರನ್ನೆಲ್ಲ ನಾನು ಹಾವು ಹಿಡಿ ಯುವ ದೃಶ್ಯವನ್ನು ನೋಡಲು ಕರೆದು ತಂದಿದ್ದ. ನಾನು ಅನುಮಾನಿಸುತ್ತಲೆ ಆತನ ಪ್ರಸ್ತಾಪವನ್ನು ಒಪ್ಪಿದೆ. ಆದರೆ ಆ ನಿರ್ಧಾರಕ್ಕಾಗಿ ನಾನು ಪಟ್ಟ ಪಶ್ಚಾತ್ತಾಪ ಅಷ್ಟಿಷ್ಟಲ್ಲ.

ನನ್ನ ಸಾಮಗ್ರಿಗಳನ್ನು ಸಜ್ಜುಗೊಳಿಸಿದೆ. ಒಂದು ದೊಡ್ಡ ಕ್ಯಾನ್ವಾಸ್ ಚೀಲ, ಒಂದು ತುದಿಗೆ ಹಿತ್ತಾಳೆಯ ಕೊಕ್ಕೆಗಳಿರುವ ಕವಲು ಕಟ್ಟಿಗೆ ತೆಗೆದುಕೊಂಡು ವ್ಯಾನಿನೊಳಗೆ ಹೋಗಿ ಕುಳಿತೆ. ಅರ್ಧ ಗಂಟೆಯ ನಂತರ ನನ್ನ ಮಿತ್ರನ ಬಂಗಲೆ ತಲುಪಿದೆವು. ಅಲ್ಲಿಂದ ಬಾಳೆತೋಟದ ವರೆಗೆ ನಡೆದುಕೊಂಡು ಹೋಗುವದಿತ್ತು.

ಎಲ್ಲರೂ ಒಂದು ಗ್ಲಾಸು ಮದ್ಯ ಗುಟುಕರಿಸಿ ಹೊರಡುವಾಗ,

"ನಿನಗೆ ಹಗ್ಗವೊಂದು ಬೇಕಲ್ಲವೆ?" ಎಂದು ಐರಿಶ್ ಮಿತ್ರ ಕೇಳಿದ.

"ಹಗ್ಗ ಯಾವಕ್ಕೆ?" ಎಂದೆ.

"ನಿನ್ನನ್ನು ತಗ್ಗಿನಲ್ಲಿ ಇಳಿಸಲಿಕ್ಕೆ," ಆತ ಉತ್ಸಾಹದಿಂದ ಉತ್ತರಿಸಿದ.

ನನ್ನ ಹೊಟ್ಟೆಯಲ್ಲಿ ತಳಮಳ. ಆ ಕಂದಕ ಹೇಗಿದೆ? ಎಂದು ಕೇಳಿದೆ. ಇಪ್ಪತ್ತೈದು ಅಡಿ ಉದ್ದ, ನಾಲ್ಕು ಅಡಿ ಅಗಲ, ಹನ್ನೆರಡು ಅಡಿ ಆಳ ಎಂದ. ಒಳಗೆ ಇಳಿಯಲು ನನಗೆ ಹಗ್ಗ ವೊಂದು ಬೇಕೇಬೇಕು ಎಂದು ಎಲ್ಲರೂ ಸಮರ್ಥಿ ಸಿದರು. ನನ್ನ ಮಿತ್ರ ಹಗ್ಗ ಹುಡುಕಾಡಲು ಹೋದ. ಅದು ಆತನಿಗೆ ಸಿಗದಿರಲಿ ಎಂದು ಪ್ರಾರ್ಥಿಸುತ್ತ ಮತ್ತೊಂದು ಗ್ಲಾಸು ಮದ್ಯ ಕುಡಿದೆ.

ಈ ಸಾಹಸದಲ್ಲಿ ನಾನು ಸಿಕ್ಕುಬಿದ್ದದ್ದು ದುರ್ದೈವದ ಸಂಗತಿ. ಹಾದಿಯ ಮೇಲೆ, ನೆಲದ ಮೇಲೆ ಆಳವಿಲ್ಲದ ಮಡುವಿ ನಲ್ಲಿ ಹಾವುಗಳನ್ನು ಹಿಡಿಯುವುದು ಅಷ್ಟೇನೂ ಕಠಿಣವಲ್ಲ. ಆದರೆ ಅಂಥ ಆಳವಾದ ತಗ್ಗಿನಲ್ಲಿ ಲೆಕ್ಕವಿಲ್ಲದಷ್ಟು ಸರ್ಪಗಳು ಹರಿದಾಡುವಲ್ಲಿ ಹಗ್ಗದಿಂದ ಇಳಿಸಿಕೊಂಡು ಹೋಗುವುದು ಯಾರಾದರೂ ಹಿಂಜರಿಯುವಂಥ ಪ್ರಸಂಗವೇ.

ಅಷ್ಟರಲ್ಲಿ ಬೆಳಕಿನ ಬಗ್ಗೆ ಸಮಸ್ಯೆ ತಲೆ ದೋರಿತು. ಯಾರ ಹತ್ತಿರವೂ ಟಾರ್ಚ್ ಲೈಟು ಇರಲಿಲ್ಲ. ಈಗಲಾದರೂ ನಾನು ಜಾರಿಕೊಳ್ಳ ಬಹುದೆಂಬ ನಿರೀಕ್ಷಣೆಯಲ್ಲಿದ್ದೆ. ಆದರೆ ಹಗ್ಗವನ್ನು ತೆಗೆದುಕೊಂಡು ಬಂದ ನನ್ನ ಮಿತ್ರ ತನ್ನ ಯೋಜನೆಯಲ್ಲಿ ಯಾವ ಆತಂಕವೂ ಬಾರದಂತೆ ಮಾಡಿದ್ದ. ಬೇಗನೆ ಒಂದು ಲಾಂದ್ರವನ್ನು ತಂದು ಅದಕ್ಕೆ ಸಾಕಷ್ಟು ಉದ್ದ ಹುರಿದಾರ ಬಿಗಿದ. ಅದನ್ನು ಕಂದಕದಲ್ಲಿ ತಾನೇ ಸ್ವತಃ ಇಳಿಬಿಡುವೆನೆಂದೂ ಭರವಸೆ ನೀಡಿದ. ಉಪಾಯ ವಿಲ್ಲದೆ ನಡುಗುವ ಧ್ವನಿಯಲ್ಲಿ ಆತನಿಗೆ ಧನ್ಯವಾದ ಹೇಳಿದೆ.

ಅನಂತರ ಆತನ ಸೋದರ ಆವನ ಪತ್ನಿಯ ದಾರಿ ನೋಡಿದೆವು. ಹಾವು ಹಿಡಿಯುವುದನ್ನು ನೋಡುವ ಸುಯೋಗ ಇನ್ನೆಂದೂ ಸಿಗಲಿಕ್ಕಿಲ್ಲ: ಅದರಿಂದ ನೀನಾದರೂ ತಪ್ಪಿಸಿಕೊಳ್ಳಬಾರದೆಂದು ಬರಹೇಳಿದ್ದನಂತೆ!

ಕೊನೆಗೆ ನಾವು ಎಂಟು ಜನ ಬಾಳೆತೋಟದ ಕಡೆಗೆ ಹೊರಟೆವು. ಏಳು ಜನ ಮಾತ್ರ ನಗುತ್ತ ಹರಟುತ್ತ ಮುಂದಿನ ದೃಶ್ಯದ ನಿರೀಕ್ಷೆಯಲ್ಲಿ

ಕಚ್ಚಿಗೆಯಿಂದ ಅದರ ತಲೆಯನ್ನು ನೆಲದ ಮೇಲೆ ಒತ್ತಿಹಿಡಿದೆ. ಕುತ್ತಿಗೆಯನ್ನು ಗಕ್ಕನೆ ಹಿಡಿದೆತ್ತಿ ಚೀಲದಲ್ಲಿ ಹಾಕಿದೆ. ಹೀಗೆ ಒಂದೊಂದು ಹಾವು ಹಿಡಿಯುತ್ತಿರುವಾಗ, ಉಳಿದೆಲ್ಲವೂ ನನ್ನ ಸುತ್ತಲೂ ಬುಸುಗುಟ್ಟುತ್ತ ಹರಿದಾಡುತ್ತಿದ್ದವು. ನಾನು ಅವುಗಳ ಮೇಲೆ ತಪ್ಪಿ ಹೆಜ್ಜೆ ಇಡದಂತೆ ಜಾಗ್ರತೆ ವಹಿಸಬೇಕಾಗಿತ್ತು.

ಒಂದು ಭೀಕರ ಕ್ಷಣದಲ್ಲಿ ನನ್ನ ಕಿವಿಯ ಹತ್ತಿರವೇ ಬುಸ್ಸೆಂದ ಶಬ್ದ ಕೇಳಿ ಆಘಾತವಾಯಿತು. ತಿರುಗಿ ನೋಡಿದಾಗ ನನ್ನ ಕಣ್ಣುಗಳು ಒಂದು ಅಡಿಯಷ್ಟೇ ಅಂತರದಲ್ಲಿರುವ ಕ್ರುದ್ಧ ನೇತ್ರಗಳನ್ನು ಸಂಧಿಸಿದವು. ಬಲು ಕಷ್ಟಪಟ್ಟು ಆ ಹಾವನ್ನು ನೆಲಕ್ಕೆ ಕೆಡವಿ ತಲೆಯನ್ನು ಕವಲು ಕಟ್ಟಿಗೆಯಲ್ಲಿ ಬಂಧಿಸಿ ವಶಪಡಿಸಿಕೊಂಡೆ. ಒಟ್ಟಿನಲ್ಲಿ ನಾನು ಹಾವುಗಳಿಗೆ ಎಷ್ಟು ಹೆದರಿದ್ದೆನೋ, ಅವೂ ಸಹ ನನಗೆ ಅಷ್ಟೇ ಹೆದರಿದಂತಿತ್ತು.

ಅಂತೂ ಕಂದಕದಲ್ಲಿ ಅರ್ಧಗಂಟೆ ಕಳೆದು, ಹನ್ನೆರಡು ಹಾವುಗಳನ್ನು ಹಿಡಿದೆ. ಇನ್ನೂ ಹೆಚ್ಚು ಹಿಡಿಯಬಹುದಾಗಿತ್ತು. ಆದರೆ ಅತಿ ಆಸೆ ಒಳ್ಳೆಯದಲ್ಲವೆಂದುಕೊಂಡೆ. ಮಿತ್ರರು ಮತ್ತೆ ನನ್ನನ್ನು ಮೇಲಕ್ಕೆ ಎಳೆದರು. ಮೈಯೆಲ್ಲ ಬೆವೆತು. ಜೋರಾಗಿ ಕೈಯಲ್ಲಿ ಬುಸುಗುಟ್ಟುವ ಸರ್ಪಗಳ ಚೀಲವನ್ನು ಭದ್ರವಾಗಿ ಹಿಡಿದುಕೊಂಡು ಅವರ ಮುಂದೆ ಬಂದು ನಿಂತೆ.

ನಾನಿನ್ನೂ ನಿಟ್ಟುಸಿರು ಬಿಡುತ್ತಿರುವಾಗ ಐರಿಶ್ ಮಿತ್ರ, "ನೋಡಿದೆಯಾ! ನಿನಗೆ ನಾನು ಉತ್ತಮ ಹಾವುಗಳನ್ನು ಖಂಡಿತ ದೊರಕಿಸಿಕೊಡುವೆನೆಂದು ಹೇಳಿದ್ದೆನಲ್ಲವೆ!" ಎಂದ.

ನಾನು ಸುಮ್ಮನೆ ಗೋಣು ಹಾಕಿದೆ. ಆ ಕ್ಷಣ ನಾನು ಮಾತನಾಡಲೂ ಅಸಮರ್ಥನಾಗಿದ್ದೆ. ನೆಲದ ಮೇಲೆ ಕುಳಿತು, ಸಿಗರೇಟು ಹೊತ್ತಿಸಿ, ಕಂಪಿಸುವ ಕೈಗಳನ್ನು ಸ್ಥಿರವಾಗಿರಿಸಲು ಪ್ರಯತ್ನಿಸಿದೆ. ಗಂಡಾಂತರದಿಂದ ಪಾರಾದ ಮೇಲೆ ನಾನು ಆ ಕಂದಕದಲ್ಲಿ ಇಳಿದದ್ದೇ ಮೂರ್ಖತನ; ಅಲ್ಲಿಂದ ಬದುಕಿ ಬಂದದ್ದೇ ನನ್ನ ಸುದೈವ ಎಂದು–ಕೊಂಡೆ.

ಸ್ವಲ್ಪ ಸಾವರಿಸಿಕೊಂಡು ಸುತ್ತಲೂ ಕಣ್ಣು ಹಾಯಿಸಿದಾಗ, ಪ್ರೇಕ್ಷಕರಲ್ಲಿ ಒಬ್ಬ ಕಡಿಮೆ ಇರುವುದನ್ನು ಗಮನಿಸಿದೆ.

"ನಿನ್ನ ಸೋದರ ಎಲ್ಲಿ?" ಎಂದು ಮಿತ್ರನನ್ನು ಕೇಳಿದೆ.

"ಓಹ್, ಅವನೇ? ಅವನಿಗೆ ಅದೆಲ್ಲ ನೋಡುವುದು ಅಸಾಧ್ಯವಾಯಿತು. ತಲೆ ಸುತ್ತತೊಡಗಿತಂತೆ. ಅದಕ್ಕೇ ದೂರ ಹೋಗಿ ನಮ್ಮ ದಾರಿ ನೋಡುತ್ತ ನಿಂತಿದ್ದಾನೆ. ನೀನು ಅವನನ್ನು ಕ್ಷಮಿಸಬೇಕು. ನಿಜಕ್ಕೂ ಆ ಆಳದಲ್ಲಿ ಆ ದರಿದ್ರ ಸರ್ಪಗಳ ಮಧ್ಯೆ ನಿನ್ನನ್ನು ನೋಡುವುದಕ್ಕೆ ತುಂಬಾ ಧೈರ್ಯ ಬೇಕಪ್ಪಾ!" ಎಂದ. ●



ಪ್ರಪಂಚದಲ್ಲಿ, ನಟನೆಗಾಗಿ ಅತಿ ಹೆಚ್ಚು ಹಣ ಪಡೆಯುವಾತ ಚಾರ್ಲ್ಸ್ ಬ್ರೋನ್‌ಸನ್. ಇವನು ಪ್ರತಿದಿನ ಸರಾಸರಿ ೧೦,೦೦೦ ಪೌಂಡುಗಳಿಗೂ ಹೆಚ್ಚು ಹಣ ಪಡೆಯುತ್ತಿರುತ್ತಾನೆ. (ಸುಮಾರು ದಿನಕ್ಕೆ ೨ ಲಕ್ಷ ರೂಪಾಯಿಗಳು!)— ಅವರು ಕ್ಯಾಮೆರಾದ ಎದುರಿಗಿದ್ದರೂ ಅಷ್ಟೆ; ಎದುರಿಗಿಲ್ಲದಿದ್ದರೂ ಅಷ್ಟೆ! ಇವರಿಗೆ 'ಓವರ್ ಟೈಂ' ಗಳಿಕೆ ಕೂಡ ಸಿಗುತ್ತದೆ. ಅವರ ಚಿತ್ರಗಳ ಬಾಕ್ಸ್ ಆಫೀಸ್ ಗಳಿಕೆಗಳಲ್ಲೂ ಕೂಡ ಇವರಿಗೆ ಶೇಕಡಾವಾರು ಹಣ ಸಿಗುತ್ತದೆ.

ಸಂಗ್ರಹ: ಎಸ್. ವಿಶ್ವನಾಥ

## ಇದು ದೇಶಪ್ರೇಮಿಗಳೆಲ್ಲ ಕಣ್ತೆರೆದು ನೋಡಬೇಕಾದ ಪ್ರಶ್ನೆ

# ಆಸಾಮು: ಒಡೆಯಲಾಗದ ಒಗಟಾಗಿದೆಯೇಕೆ?

### ಡಾ. ಸರೋಜಿನಿ ಮಹಿಷಿ

ಭಾರತದ ಈಶಾನ್ಯ ವಿಭಾಗದಲ್ಲಿ ಹಿಮಾಚ್ಛಾದಿತ ಪರ್ವತಗಳಿಂದಲೂ, ಅತಿ ದೊಡ್ಡ ನದಿ ಕಾಡುಗಳಿಂದಲೂ ಆಸಾಮು ಪ್ರದೇಶ ಕೂಡಿದೆ. ಬಂಗ್ಲಾದೇಶದ ಸೀಮಾರೇಷೆಗೆ ಆಸಾಮಿನ ಕೆಲವು ಭಾಗ ಸೀಮಾರೇಷೆ ಕೂಡಿದೆ. ಈ ಸೀಮಾರೇಷೆಯನ್ನು ದಾಟಿ ಹೋಗದಂತೆ ಪ್ರತಿಬಂಧಿಸಲು ಯಾವ ಕ್ರಮವೂ ಅಲ್ಲಿಲ್ಲ. ಸಲೀಸಾಗಿ ಒಂದು ರಾಷ್ಟ್ರದ ಗೆರೆಯನ್ನು ದಾಟಿ ಇನ್ನೊಂದು ರಾಷ್ಟ್ರಕ್ಕೆ ಹೋಗಿ ಬಿಡಬಹುದು. ಆಸಾಮನ್ನು ಮೇಲ್ಭಾಗದಲ್ಲಿ ಸುತ್ತುವರಿದು ಸ್ವಾಯತ್ತ ಆಸಾಮು ಪರ್ವತೀಯ ಜಿಲ್ಲೆಗಳಿವೆ. ಅರುಣಾಚಲ, ಮೇಘಾಲಯ ಇವೆಲ್ಲ ಈ ತರಹದ ಪ್ರದೇಶಗಳು. ಆರ್ಥಿಕ ದೃಷ್ಟಿಯಿಂದ ಇವು ಬಡ ಹಿಂದುಳಿದ ಪ್ರದೇಶಗಳು. ಸಾರಿಗೆ ಸಂಪರ್ಕಗಳ ಅನುಕೂಲ ಈ ಪ್ರದೇಶಗಳಲ್ಲಿಲ್ಲ. ಚಳಿಗಾಲದಲ್ಲಿ ಮೂರು ನಾಲ್ಕು ತಿಂಗಳು ಹಿಮಾಚ್ಛಾದಿತವಾಗಿರುತ್ತದೆ. ಆಸಾಮಿನ ಪೂರ್ವ ದಂಡೆಯು ಅರುಣಾಚಲ ನಾಗಾಲ್ಯಾಂಡ್ ಮಣಿಪುರಗಳಿಂದ ಸುತ್ತುವರಿಯಲ್ಪಟ್ಟಿದ್ದರೆ, ದಕ್ಷಿಣದ ದಂಡೆಯು ಮಿಝೋರಾಂ, ತ್ರಿಪುರಾ, ಬಂಗ್ಲಾದೇಶ ಹಾಗೂ ಮೇಘಾಲಯಗಳಿಂದ ಸುತ್ತುವರಿಯಲ್ಪಟ್ಟಿದೆ. ಗುಡ್ಡಗಾಡು ಪ್ರದೇಶವಾದುದರಿಂದ ಜನಸಂಖ್ಯೆ ಬೆಳೆಯಲು ಹೆಚ್ಚಿನ ಅವಕಾಶವಿಲ್ಲವೆಂದು ತಿಳಿದರೂ ಆಸಾಮಿನ ಚಹದ ತೋಟಗಳು ಹಾಗೂ ಅಲ್ಲಿಯ ಉತ್ಪಾದನೆ ಜನರನ್ನು ಇಲ್ಲಿಗೆ ಕರೆತಂದವು.

ಹಿಂದಿನ ಜನಗಣತಿಯ ವರದಿಗಳನ್ನು ನೋಡಿದರೆ, ಭಾರತದ ಇನ್ನುಳಿದ ಪ್ರದೇಶಗಳಲ್ಲಿ ಸಾಮಾನ್ಯವಾಗಿ ಹೆಚ್ಚಿದ ಜನಸಂಖ್ಯೆಗಿಂತಲೂ ಆಸಾಮಿನಲ್ಲಿ ಹೆಚ್ಚಿದ ಸರಾಸರಿ ಜನಸಂಖ್ಯೆ ಅಧಿಕವಾಗಿದೆ. ಇದು ಹೊರಗಿನಿಂದ ಬಂದವರ ಸಂಖ್ಯೆಯೇ ಹೊರತು ಆಸಾಮಿನಲ್ಲಿ ಹುಟ್ಟಿದವರ ಸಂಖ್ಯೆಯಲ್ಲ. ಹೀಗೆ ಒಳಬಂದವರ ಸಂಖ್ಯೆಯಲ್ಲಿ ಹಿಂದುಗಳೂ ಇದ್ದಾರೆ, ಮುಸ್ಲಿಮರೂ ಇದ್ದಾರೆ. ಮುಸ್ಲಿಮರ ಸಂಖ್ಯೆ ಹಿಂದುಗಳಿಗಿಂತ ಹೆಚ್ಚಾಗಿದೆ. ೧೯೬೧ರ ಜನಗಣತಿಯ ಮೇಲಧಿಕಾರಿಗಳು ರಿಪೋರ್ಟಿನಲ್ಲಿ, "ಜನ್ಮಸ್ಥಳವನ್ನು ಜನ ಸರಿಯಾಗಿ ಬರೆದಿದ್ದಾರೆಂದು ನಂಬುವುದು ಅಸಾಧ್ಯ

ವಾಗಿದೆ." ಎಂದಿದ್ದಾರೆ.

೧೯೬೧ ರಲ್ಲಿ ಜನಗಣತಿಯ ಅಧಿಕಾರಿಗಳು ಅಸ್ಸಾಮಿನ ಬಗ್ಗೆ ಸ್ಪಷ್ಟ ಉಲ್ಲೇಖ ಮಾಡಿದ್ದಾರೆ. ಈ ಜನಗಣತಿಯ ವೇಳೆಗೆ ಹೊರಗಿನಿಂದ ಅಸ್ಸಾಮಿನಲ್ಲಿ ಒಳಬಂದವರ ಸಂಖ್ಯೆ ೧೫,೦೬,೫೯೩. ಈ ಸಂಖ್ಯೆಯ ಆಧಾರದಿಂದ ಅಸ್ಸಾಮಿನಲ್ಲಿ ಒಳಗಿನ ಜನಸಂಖ್ಯೆ ಬೆಳೆದಿದೆಯೋ ಅಥವಾ ಹೊರಗಿನಿಂದ ಬಂದವರ ಸಂಖ್ಯೆಯೇ ಬೆಳೆದು ಒಟ್ಟು ಜನಸಂಖ್ಯೆ ಬೆಳೆದಿದೆಯೋ ಹೇಳುವುದು ಕಷ್ಟ. ೧೯೦೧ ರಲ್ಲಿ ಅಸ್ಸಾಮಿನ ಜನಸಂಖ್ಯೆ ೩೨.೯ ಲಕ್ಷ ಇತ್ತು. ೧೯೦೧ ರಿಂದ ೧೯೭೧ರ ವರೆಗೆ ಭಾರತದ ಇತರ ಭಾಗಗಳ ಜನಸಂಖ್ಯೆಯ ಸರಾಸರಿ ಹೆಚ್ಚಳವನ್ನು ನೋಡಿದರೆ ಅಸ್ಸಾಮಿನ ಜನಸಂಖ್ಯೆಯು ೭೫.೬ ಲಕ್ಷ ಆಗಬೇಕಾಗಿತ್ತು. ಆದರೆ ಸದ್ಯ (ಅಂದರೆ ೧೯೭೧ರಲ್ಲಿ) ಅದು ೧ ಕೋಟಿ ೪೬.೩ ಲಕ್ಷ ಇದೆ.

ಅಸ್ಸಾಮಿನ ಮೂಲ ಜನಕ್ಕೆ ಸದ್ಯ ಒಂದು ಬಗೆಯ ಭೀತಿಯುಂಟಾಗಿದೆ. ಹೊರಗಿನಿಂದ ಬಂದ ಜನ ಅವರನ್ನು ಕಬಳಿಸಿಬಿಡಬಹುದೆಂಬ ಭೀತಿ! ಅಸ್ಸಾಮಿನ ಎಲ್ಲ ಜಿಲ್ಲೆಗಳಲ್ಲಿಯೂ ಕ್ರಮಬದ್ಧವಾಗಿ ಜನಸಂಖ್ಯೆ ಬೆಳೆಯುತ್ತಿದೆ. ಹತ್ತು ವರ್ಷಗಳ ಅವಧಿಯಲ್ಲಿ ಲಖಿಮ ಪುರ ಜಿಲ್ಲೆಯಲ್ಲಿ ನೂರಕ್ಕೆ ೫೨ ರಷ್ಟು ಬೆಳೆದಿದ್ದರೆ ಗೋಲಪಾರಾ, ಕಾಮರೂಪ, ದರಂಗ, ನೌಗಾಂಗ್, ದಿಬ್ರುಗಡ, ಕಚಾರ ಜಿಲ್ಲೆಗಳಲ್ಲಿ ಸರಾಸರಿ ನೂರಕ್ಕೆ ೩೮ ರಂತೆ ಬೆಳೆದಿದೆ. ಅದರಲ್ಲಿಯೂ ೧೯೫೧ ರ ನಂತರದ ಜನಸಂಖ್ಯೆಯ ಬೆಳವಣಿಗೆ ಯಾವ ವಿಚಿತ್ರವನ್ನು ಸೃಷ್ಟಿಸುತ್ತಿದೆ. ಹಿಂದೂಸ್ಥಾನದ ವಿಭಜನೆಯೂ ಇದಕ್ಕೆ ಕಾರಣ. ಅಂದಿನ ಪೂರ್ವ ಪಾಕಿಸ್ತಾನ (ಇಂದಿನ ಬಂಗ್ಲಾದೇಶ) ಹಾಗೂ ಭಾರತದ ನಡುವೆ ಗುರುತಿನ ಯಾವ ರೇಷೆಯೂ ಅಂದು ಇರಲಿಲ್ಲ, ಇಂದಿಗೂ ಇಲ್ಲ.

ಹಿಂದೂಸ್ಥಾನದ ವಿಭಜನೆಯಾಗುವ ಮೊದಲೇ, ಇಂದು ಪೂರ್ವ ಪಾಕಿಸ್ತಾನವೆನ್ನಿಸಿಕೊಂಡಿರುವ ಭಾಗದಿಂದ ಜನ ಗುಳೇ ಕಟ್ಟಿಕೊಂಡು ಇಂದಿನ ಭಾರತಕ್ಕೆ ಬರುತ್ತಿದ್ದರು. ಅಸ್ಸಾಮು, ತ್ರಿಪುರಾಗಳ ಅನೇಕ ಕ್ಷೇತ್ರಗಳನ್ನು ಆಕ್ರಮಿಸಿದರು. ವಿಭಜನೆಯುಂಟಾದಾಗ ಅಂತಾರಾಷ್ಟ್ರೀಯ ಗಡಿರೇಷೆಯೊಂದು ಭಾರತದಲ್ಲಿ ಸೃಷ್ಟಿಯಾಯಿತು.

ಪೂರ್ವ ಪಾಕಿಸ್ತಾನ ಹಾಗೂ ಭಾರತದ ಗಡಿ ರೇಷೆ ೨೫೦೦ ಮೈಲುಗಳಷ್ಟು ಸುದೀರ್ಘವಾಗಿದೆ. ಹೆಚ್ಚು ಕಡಿಮೆ ಎಲ್ಲ ಬಯಲು ಪ್ರದೇಶ ಇಂದಿಗೂ ಅಲ್ಲಿ ಯಾವ ತರಹದ ಗೋಡೆಯಾಗಲಿ ಗುರುತಾಗಲಿ ಇಲ್ಲ; ತೆರೆದಿಟ್ಟ ಗಡಿರೇಷೆ ಈ ಅಂತರಾಷ್ಟ್ರೀಯ ಗಡಿರೇಷೆಯು ಇಕ್ಕೆಲ್ಲಗಳಲ್ಲೂ ಇದ್ದ ಜನಕ್ಕೆ ಅದೊಂದು ಸಾಮಾನ್ಯ ರೇಷೆ. ಈ ಗಡಿರೇಷೆ ಗಡಿ ರಕ್ಷಣೆಗಾಗಿ ಎರಡು ಕಡೆಗಳಲ್ಲಿಯೂ ಯಾರೂ ಇರಲಿಲ್ಲ; ವಿಭಜನೆಯಿಂದ ಪೂರ್ವ ಪಾಕಿಸ್ತಾನದ ಜನರ ಸಂಚಾರ ಕಟ್ಟಾಗಲಿಲ್ಲ. ಅಲ್ಲಿಂದ ಅಸ್ಸಾಮು, ತ್ರಿಪುರಾ, ಪಶ್ಚಿಮ ಬಂಗಾಲಗಳಲ್ಲಿ ವಲಸೆ ಬರುವದು ನಡೆದೇ ಇತ್ತು.

"ಬೇಸಾಯದ ಕೂಲಿಯಾಳುಗಳೆಂದು ಪೂರ್ವ ಪಾಕಿಸ್ತಾನದಿಂದ ವಲಸೆ ಬರುವ ಜನಗಳು ಭೂಮಿಯ ಮಾಲೀಕರಾದರು. ಅಸ್ಸಾಮಿನ ಮೂಲಭೂತ ಜನಾಂಗವಾದ ಗುಡ್ಡಗಾಡು ಜನರೊಡನೆ ಹೇಗೋ ವ್ಯವಹಾರ ಮಾಡಿ ಅವರ ಭೂಮಿಯನ್ನು ವಶಪಡಿಸಿಕೊಂಡರು.

"ಕೆಲವರು ಚಿಕ್ಕ ಚಿಕ್ಕ ವ್ಯಾಪಾರೋದ್ದಿಮೆಗಳಲ್ಲಿ ತೊಡಗಿದರು. ತಾವು ಬಹಳ ದಿನಗಳಿಂದ ಭಾರತದ ಈ ಭಾಗದಲ್ಲಿ ಇದ್ದವರೆಂಬುದಕ್ಕೆ ಬೇಕಾದ ಕಾಗದ ಪತ್ರ ಪುರಾವೆಗಳನ್ನೆಲ್ಲ ಸಂಗ್ರಹ ಮಾಡಿಕೊಂಡರು. ಕೆಲವರು ಕೃಷಿಯಿಂದ ಸರಕಾರೀ ಜಮೀನನ್ನು ಸಾಗುವಳಿ ಮಾಡಲಾರಂಭಿಸಿದರು." ಭಾರತ ಸರಕಾರದಿಂದ ಪ್ರಕಟವಾಗಿರುವ ಕೆಲವು ವರದಿಗಳು ಈ ರೀತಿ ಅಂದಿನ ಪರಿಸ್ಥಿತಿಯನ್ನು ವಿವರಿಸಿವೆ.

ಅಂದಿನ ಪೂರ್ವ ಪಾಕಿಸ್ತಾನದಿಂದ ಜನ ವಲಸೆ ಬಂದು ಅಸಾಮು, ತ್ರಿಪುರಾ, ಪಶ್ಚಿಮ ಬಂಗಾಲಗಳಲ್ಲಿ ನೆಲಸತೊಡಗಿದರು, ಅಂದರೆ ಹೊರ ಹೊರಟ ಈ ಜನಸಂಖ್ಯೆಯಿಂದ ಪೂರ್ವ ಪಾಕಿಸ್ತಾನದ ಮೇಲೆ ಜನಸಂಖ್ಯೆಯ ಮಟ್ಟಕ್ಕೆ ಯಾವ ಪರಿಣಾಮವಾಗಿದೆಯೆಂಬುದನ್ನು ನೋಡಬಹುದಾಗಿದೆ. ಅಂದಿನ ಪೂರ್ವ ಪಾಕಿಸ್ತಾನದ ಬೋಗ್ರಾ, ಮೈಮೆನ್‌ಸಿಂಗ್, ಖುಲ್ನಾ, [illegible], ಕೋಮಿಲ್ಲಾ, ಸಿಲ್ಹೆಟ್ ಹಾಗೂ ನೋಆಖಾಲಿ

ಜಿಲ್ಲೆಗಳಲ್ಲಿ ಜನಸಂಖ್ಯೆಯ ಬೆಳವಣಿಗೆ ತೀರ ಕಡಿಮೆಯಾಗಿದೆ. ಅಲ್ಲಿಯ ಜನಗಳು ಭಾರತದ ಭಾಗಗಳಲ್ಲಿ ವಲಸೆ ಹೋಗಿದ್ದಾರೆ ಎಂಬುದಕ್ಕೆ ಜನಸಂಖ್ಯೆಯ ಈ ಅಂಕಿ ಸಂಖ್ಯೆಗಳೇ ಸಾಕ್ಷಿಯಾಗಿವೆ.

ಇವೆಲ್ಲ ವಿವರಗಳು ಅಂದಿನ ಭಾರತ ಸರಕಾರಕ್ಕೆ ಗೊತ್ತಿದ್ದರೂ, ಸರಕಾರವು ಯಾವ ಕ್ರಮವನ್ನಾದರೂ ಈ ಸಂಬಂಧದಲ್ಲಿ ಕೈಕೊಂಡಿತೇ? ವಲಸೆ ಬಂದ ಜನರನ್ನು ಸರಕಾರವು ತಿರುಗಿ ಅವರ ದೇಶಕ್ಕೆ ಕಳಿಸಿದ ಉದಾಹರಣೆಗಳು ಇಲ್ಲವೆಂದರೂ ಸರಿಯೇ! ೧೯೬೪ರಲ್ಲಿ ಒಂದು ಸಲ ಮಾತ್ರ ತ್ರಿಪುರಾದಲ್ಲಿ ವಲಸೆ ಬಂದ ೩೦೦೦ ಜನರು ತಿರುಗಿ ಹೋಗಬೇಕೆಂದು ಸರಕಾರ ಹೇಳಿತು. ಆದರೆ ಅವರೆಲ್ಲ ಹೋದರೆ? ಎಂಬುದು ಪ್ರಶ್ನಾರ್ಥಕವಾಗಿಯೇ ಉಳಿಯಿತು.

ಮತ್ತೊಂದು ರಾಷ್ಟ್ರದ ಜನ ಇಷ್ಟೊಂದು ಸಂಖ್ಯೆಯಲ್ಲಿ ನಮ್ಮ ರಾಷ್ಟ್ರದಲ್ಲಿ ಪ್ರವೇಶ ಮಾಡಿದರೆ, ನಮ್ಮ ದೇಶದ ಪ್ರಜಾಪ್ರಭುತ್ವ ಸುರಕ್ಷಿತವಾಗಿ ಉಳಿದೀತೆ?

ಈ ವಿದೇಶೀಯರು ನಮ್ಮ ಮತದಾರರ ಯಾದಿಗಳಲ್ಲಿಯೂ ತಮ್ಮ ಹೆಸರುಗಳನ್ನು ಸೇರಿಸಿಬಿಟ್ಟರು. ಮತದಾರರ ಸಂಖ್ಯೆಯನ್ನು ಹೆಚ್ಚಿಸುವಲ್ಲಿ ಆಸಕ್ತಿಯುಳ್ಳ ರಾಜಕೀಯ ಪಕ್ಷಗಳು ಹಾಗೂ ವ್ಯಕ್ತಿಗಳು ಈ ಕಾರ್ಯದಲ್ಲಿ ಸಹಾಯಕರಾದರು. ಮತದಾರರ ಯಾದಿಯಲ್ಲಿ ಹೆಸರು ಬಂದಿದೆಯೆಂದಾದರೆ ಆ ವ್ಯಕ್ತಿ ಭಾರತದ ರಾಷ್ಟ್ರೀಯತ್ವವನ್ನು ಪಡೆಯಬಹುದೇ? ಇಲ್ಲ. ಮತದಾರರ ಯಾದಿಯಲ್ಲಿ ಹೆಸರು ಬರುವದು ರಾಷ್ಟ್ರೀಯತ್ವಕ್ಕೆ ಮುಖ್ಯ ಆಧಾರವಲ್ಲ, ಎಂದು ಭಾರತದ ವರಿಷ್ಠ ನ್ಯಾಯಾಲಯವು ಸ್ಪಷ್ಟಪಡಿಸಿದೆ. ಆದ್ದರಿಂದ ಪೂರ್ವ ಪಾಕಿಸ್ತಾನದಿಂದ ವಲಸೆ ಬಂದ ವಿದೇಶೀಯರು ಭಾರತೀಯ ರಾಷ್ಟ್ರೀಯತ್ವವನ್ನು ಸಿದ್ಧಮಾಡಲು ಬೇಕಾದ ಪುರಾವೆಗಳನ್ನು ಕಲೆ




ಭಾರತ-ಬಂಗ್ಲಾ ದೇಶಗಳ ಗಡಿಯನ್ನು ಗುರುತಿಸಿದ ಬಗೆ. ಈ ಗುರುತಿನ ಕಂಬದ ಮೇಲೆ ಇದರ ಹಿಂದಿನ ನೆಲವು ಭಾರತವೆಂದು ಸೂಚಿಸುವ ಗುರುತು ಮಾತ್ರ ಇದೆ.

ಮಾಡಲು ಪ್ರಾರಂಭಿಸಿದರು.

ಹಿತಾಸಕ್ತಿಯುಳ್ಳ ರಾಜಕೀಯ ಪಕ್ಷಗಳು, ಇಂಥ ವಿದೇಶೀಯರಿಗೆ ಬಲ ಕೊಟ್ಟವು. ಅಸಾಮಿನ ಇಂದಿನ "ವಿದೇಶೀಯರ ಪ್ರಶ್ನೆ" ಉದ್ಭವವಾಗಲು ಏನು ಕಾರಣವಾಗಿದೆ ಎಂಬುದನ್ನು ಇದರಿಂದ ಸ್ಥೂಲವಾಗಿ ಅರಿಯಬಹುದು.

ಅಸಾಮಿನಲ್ಲಿ ಮತದಾರರ ಯಾದಿಗಳಲ್ಲಿ ಇಂದಿನ ಬಂಗ್ಲಾದೇಶದಿಂದ ಬಂದ ವಿದೇಶೀಯರ ಹೆಸರುಗಳಿವೆ ಎಂಬುವನ್ನು ೧೯೭೮ರಲ್ಲಿಯೇ ಭಾರತದ ಚುನಾವಣಾ ಆಯೋಗದ ಅಧಿಕಾರಿಗಳು ಒಪ್ಪಿಕೊಂಡಿದ್ದಾರೆ. ಕೆಲ ರಾಜಕೀಯ ಪಕ್ಷಗಳು ಈ ವಿದೇಶೀಯರ ಹೆಸರನ್ನು ಮಣಿಪುರ, ತ್ರಿಪುರಾ ಮೇಘಾಲಯ ಸ್ಥಳಗಳ ಮತದಾರರ ಪಟ್ಟಿಗಳಲ್ಲಿ ಸೇರಿಸಬೇಕೆಂದು ಚುನಾವಣಾ ಆಯೋಗದ ಮೇಲೆ ಒತ್ತಡವನ್ನೂ ತಂದರು. ಅದಕ್ಕೆ ಒಳಗಾಗದೆ ಚುನಾವಣಾ ಆಯೋಗವು ಪ್ರತಿಯೊಬ್ಬ ಮತದಾರನಿಗೂ ಗುರುತಿನ ಕಾರ್ಡ್ ಕೊಡಬೇಕೆಂದು ಸೂಚಿಸಿದರೂ ಸರಕಾರ ಆ ದಿಕ್ಕಿನಲ್ಲಿ ಯಾವುದೇ ಕ್ರಮವನ್ನು ಕೈಕೊಂಡಿಲ್ಲ.

೧೯೭೯ರಲ್ಲಿ ಅಸಾಮಿನ ಮಂಗಲದಾಯಿ ಮತದಾರ ಕ್ಷೇತ್ರದಲ್ಲಿ ಉಪಚುನಾವಣೆ ಬಂತು. ಅದರ ಮತದಾರ ಯಾದಿಯಲ್ಲಿ ೭೦,೦೦೦ ಹೆಸರುಗಳು ವಿದೇಶೀಯರ ಹೆಸರುಗಳೆಂದು ಆಕ್ಷೇಪಣೆ ಮಾಡಲಾಯಿತು. ಅಧಿಕೃತ ನ್ಯಾಯಾಲಯಗಳು, ೭೦,೦೦೦ ಅಲ್ಲ ಕೇವಲ ೪೫,೦೦೦ ಮಾತ್ರ ವಿದೇಶಿಯರ ಹೆಸರುಗಳೆಂದು ಸಾರಿದವು. ಈ ೪೫,೦೦೦ ಹೆಸರುಗಳನ್ನು ಕೂಡ ಮತದಾರರ ಯಾದಿಯಿಂದ ಕಿತ್ತು ಹಾಕಲು ಸಾಧ್ಯವಾಗಲಿಲ್ಲ. ಈ ವಿದೇಶೀ ಹೆಸರುಗಳ ಹಿಂದೆ ಕೆಲವು ರಾಜಕೀಯ ಪಕ್ಷಗಳ ಹಿತಾಸಕ್ತಿಗಳು ಅಡಗಿದ್ದವು. ವಿದೇಶೀಯರ ಹೆಸರುಗಳು ಹಾಗೇ ಉಳಿದವು. ಮುಂದೆ ಮಧ್ಯಂತರ ಚುನಾವಣೆ ಬಂತು. ಮಂಗಲದಾಯಿಯ ಮತದಾರ ಯಾದಿಗಳ ಆಧಾರದ ಮಧ್ಯಂತರ ಲೋಕಸಭೆಯ ಚುನಾವಣೆಯ ಸಂದರ್ಭದಲ್ಲೂ ಬಂತು. ಈ ಲಕ್ಷಾಂತರ ವಿದೇಶೀಯರು ಅಸಾಮಿನ ಮತದಾರರಾಗಿ ಪ್ರತಿನಿಧಿಗಳಾಗಿ ಅಸಾಮಿನ ಭವಿಷ್ಯವನ್ನು ನಿರ್ಧರಿಸುವವರಾದರೇ?

ಚುನಾವಣಾ ಆಯೋಗವು ಹಿಂದೆ ಕೊಟ್ಟ ಹೇಳಿಕೆಗಳಿಗಿಂತ ಬೇರೆಯಾದ ಹೇಳಿಕೆಯನ್ನೇ ಈ ಸಂದರ್ಭದಲ್ಲಿ ಕೊಟ್ಟಿತು. "ಮತದಾರ ಯಾದಿಯಲ್ಲಿ ಹೆಸರಿದ್ದ ಪ್ರತಿಯೊಬ್ಬ ವ್ಯಕ್ತಿಯೂ ಭಾರತದ ನಾಗರಿಕನೆಂದು ಪರಿಗಣಿಸಲಾಗುತ್ತದೆ. ಮತದಾರ ಯಾದಿಗಳ ಪರೀಕ್ಷೆಯು ಚುನಾವಣೆಯ ನಂತರವೂ ನಡೆಯಬಹುದು," ಎಂದು.

ಅಸಾಮಿನ ಯುವ ಜನಾಂಗಕ್ಕೆ ಈ ಹೇಳಿಕೆ ನುಂಗಲಾರದ ತುತ್ತಾಯಿತು. ಸಂವಿಧಾನದ ನಿಯಮಗಳನ್ನೇ ಉಲ್ಲಂಘಿಸಬಹುದೇ? ವಿದೇಶೀಯರು ಭಾರತದ ಮತದಾರರ ಯಾದಿಯಲ್ಲಿ ಬಂದು ಇಲ್ಲಿಯ ರಾಜಕೀಯದಲ್ಲಿ ನೇರವಾಗಿ ಭಾಗವಹಿಸುವುದೇ? ಅಸಾಮಿನ ಮೂಲ ನಾಗರಿಕರು ಈ ವಿದೇಶೀಯರ ವಿರುದ್ಧ ಆಕ್ಷೇಪವೆತ್ತಿ, ಮತದಾರರ ಯಾದಿಯಿಂದ ನ್ಯಾಯಾಲಯಗಳ ಆಜ್ಞೆಯ ಮೇರೆಗೆ ಹೆಸರುಗಳನ್ನು ತೆಗೆದುಹಾಕಿಸಬಹುದೆಂದು ಚುನಾವಣಾ ಆಯೋಗವು ನಂಬಿತ್ತು. ಆದರೆ ಅದು ಹೇಗೆ ಸಾಧ್ಯ? ಆಕ್ಷೇಪಗಳ ಸಂಖ್ಯೆ ಮೂರುವರೆ ಲಕ್ಷ. ಆದರೆ ವಿದೇಶೀಯರ ಸಂಖ್ಯೆಗೆ ಅಳತೆಯೇ ಇರಲಿಲ್ಲ: ಮತದಾರ ಯಾದಿಯಲ್ಲಿ ಪ್ರವೇಶ ಪಡೆಯದಿದ್ದ ವಿದೇಶೀಯರೂ ಅಸಾಮಿನಲ್ಲಿ ಅನೇಕರು!

ಈ ಪ್ರಶ್ನೆ ಗಾತ್ರದಲ್ಲಿ ಬೆಳೆಯಿತು. ಈ ಪ್ರಶ್ನೆಯನ್ನು ಬಿಡಿಸಲು ಸರಕಾರವು ಅಸಮರ್ಥವಾಗಿರುವಂತೆ ತೋರಿತು. ಈಗಲೂ ಸರಕಾರ ಹಾಗೂ ಛಾತ್ರ ಆಂದೋಲನಕಾರರ ನಡುವೆ ಅರ್ಥವತ್ತಾದ ಮಾತುಕತೆಗಳು ಮುಂದುವರಿಯುತ್ತಿಲ್ಲ.

ಆಲ್ ಅಸಾಮ ಸ್ಟೂಡಂಟ್ಸ್ ಯೂನಿಯನ್ (ಆಸೂ) ತಲೆಯೆತ್ತಿ ಅಸಾಮಿನ ಚಳವಳಿಯನ್ನು ಕಳೆದ ಎರಡು ವರುಷಗಳಿಂದಲೂ ನಡೆಸಿಕೊಂಡು ಬಂದಿದೆ. ಸ್ವಾತಂತ್ರ್ಯಾನಂತರದ ಚರಿತ್ರೆಯಲ್ಲಿ ಅಸಾಧಾರಣವಾದುದು ಈ ಆಂದೋಲನ! ವಿದೇಶೀಯರ ಹೆಸರೆತ್ತಿ ನಡೆದಿದೆ. ಕೇಂದ್ರ ಸರಕಾರ, ಪ್ರಾದೇಶಿಕ ಸ

ಕಾರ, ರಕ್ಷಣಾ ಮಂತ್ರಾಲಯ. ಚುನಾವಣಾ ಆಯೋಗ ಎಲ್ಲರಿಗೂ ಈ ಸಮಸ್ಯೆ ವಿದಿತವಾಗಿದೆ! ಭಾರತದ ರಕ್ಷಣೆಯ ಪ್ರಶ್ನೆ ಇಲ್ಲಿ ಅಡಕವಾಗಿದೆ. ತೆರೆದ ಗಡಿಯಿಂದ ಯಾರ್‍ಯಾರು ಬರಬಹುದೆಂದು ಹೇಳಬಹುದೇ? ವಿದೇಶಗಳು ಯಾವ ಹಿತಾಸಕ್ತಿಗಳನ್ನು ಈ ತೆರೆದ ಗಡಿಯಿಂದ ಭಾರತದ ಒಳಗೆ ನೂಕಬಹುದೆಂದು ತಿಳಿಯಬಹುದೇ?

ಅಧಿಕೃತ ಗೂಢ ಸಮಾಚಾರ ಸಂಸ್ಥೆಯ ವರದಿಯ ಮೇರೆಗೆ ೧೯೭೪ ರ ವರೆಗೆ ಎರಡೂವರೆ ಲಕ್ಷ ವಿದೇಶೀ ಜನ ಭಾರತದೊಳಗೆ ಕಾನೂನಿಗೆ ವಿರೋಧವಾಗಿ ಪ್ರವೇಶಿಸಿದ್ದಾರೆ. ಅಲ್ಲಿಂದೀಚೆಗೆ ಬಂದವರ ಸಂಖ್ಯೆ ತುಂಬ ಹೆಚ್ಚಿದೆ. ಖಾಸೀ ಗಾರೋ ಹಾಗೂ ಜಯಂತಿಯಾ ಪರ್ವತಗಳ ಕಣಿವೆಗಳಿಂದ ಒಳಬರಲು ಅಷ್ಟು ಸುಲಭವಾಗಿಲ್ಲ. ಗೋಲಪಾರಾ. ಪಾಕಿಸ್ತಾನ (ಬಂಗ್ಲಾದೇಶ) ಗಡಿ ಹಾಗೂ ಕಚಾರ ಜಿಲ್ಲೆಯ ಗಡಿ ಇವು ವಿದೇಶೀಯರು ಒಳಬರಲು ಸುಗಮವಾಗಿದೆ. ಗಡಿಯ ಅಕ್ಕಪಕ್ಕಗಳಲ್ಲಿ ಹೊಲ ಸಾಗುವಳಿ, ದನಗಳನ್ನು ಮೇಯಿಸುವುದು, ಜನವಸತಿ ಎಲ್ಲವೂ ಇವೆ. ಇದರಿಂದ ವಿದೇಶೀಯರಿಗೆ ಒಳಬರಲು ಇನ್ನೂ ಅನುಕೂಲವಾಗುತ್ತದೆ. ಮುಳ್ಳು ತಂತಿಯ ಎತ್ತರವಾದ ಬೇಲಿಯನ್ನು ಕಟ್ಟಿ, ಅದರ ರಕ್ಷಣೆಗಾಗಿ ಸಶಸ್ತ್ರ ಪೋಲೀಸ್ ದಳವನ್ನಿಡುವುದು ಅತ್ಯಂತ ಅವಶ್ಯವಾಗಿದೆ.

ಆಸಾಮದಲ್ಲಿಯ ಸರಕಾರೀ ಜಮೀನು ಅರಣ್ಯ ಹಾಗೂ ಹುಲ್ಲು ಬನ್ನಿ ಸ್ಥಳ ಇವೆಲ್ಲವುಗಳ ಯೋಗ್ಯ ಲೆಕ್ಕಪತ್ರಗಳಿದ್ದರೆ ಹೊರಗಿನವರು ಬಂದು ಸ್ಥಳವನ್ನಾಕ್ರಮಿಸುವುದು ಕಷ್ಟವಾಗುತ್ತದೆ. ಇವೆಲ್ಲ ಇಂದು ಇಲ್ಲದಿರುವುದರಿಂದ ಯಾರು ಬಂದು ಸ್ಥಳವನ್ನು ಆಕ್ರಮಿಸಿದರು ಎಂಬುದೇ ತಿಳಿಯದಾಗುತ್ತದೆ.

ನ್ಯಾಶನಲ್ ರಜಿಸ್ಟರ್ ಬಂದನ್ನಿಡುವುದು, ಹೆಸರುಗಳನ್ನು ನೋಂದಾಯಿಸುವುದು ಹಾಗೂ ಅವರಿಗೆ ಗುರುತಿನ ಕಾರ್ಡುಗಳನ್ನು ಕೊಡುವುದು ಇವೆಲ್ಲ ಆದರೆ ಅನಧಿಕೃತವಾಗಿ ಬರುವ




ಚಿತ್ರದಲ್ಲಿಯ ಮನುಷ್ಯ ನಿಂತಿರುವುದು ಭಾರತದಲ್ಲಿ. ಅವನ ಕಾಲ ಬಳಿ ಅರ್ಧ

ವಲಸೆಗಾರರ ಸಂಖ್ಯೆ ಕಡಿಮೆಯಾಗಬಹುದು. ದೇಶದ ರಕ್ಷಣೆಯ ದೃಷ್ಟಿಯಿಂದ ಹಾಗೂ ಪ್ರಜಾಪ್ರಭುತ್ವದ ರಕ್ಷಣೆಯ ದೃಷ್ಟಿಯಿಂದ ಇದು ಅವಶ್ಯ ಎಂಬುದನ್ನೂ ಜನಕ್ಕೆ ತಿಳಿಯ ಹೇಳಬೇಕಾಗಬಹುದು. ಬಂದಿರುವ ಹಾಗೂ ಬರುವ ವಲಸೆಗಾರರಲ್ಲಿ ಭಾಷೆ ಧರ್ಮಗಳ ದೃಷ್ಟಿಯಿಂದ ಯಾವ ಭೇದವನ್ನೂ ಮಾಡದೇ ಒಂದೇ ರೀತಿಯಾಗಿ ವ್ಯವಹರಿಸಬೇಕು ಎಂಬುದು ಅತ್ಯವಶ್ಯವಾದ ವಿಷಯ.

ಎರಡು ರಾಷ್ಟ್ರಗಳ ನಡುವಿನ ಗಡಿಯನ್ನು ಭದ್ರಪಡಿಸಲು ಗೂಢಸಮಾಚಾರ ಸಂಸ್ಥೆ ಹಾಗೂ ಸಂಪರ್ಕ ದಳಗಳು ವರದಿ ಮಾಡಿದಾಗಲೂ ಸರಕಾರವು ಆ ಕಡೆಗೆ ಅಷ್ಟು ಲಕ್ಷ್ಯವನ್ನು ವಹಿಸಲಿಲ್ಲ. ೧೯೬೪–೬೫ ರಲ್ಲಿ ಗಡಿಯ ಪರಿಸ್ಥಿತಿ ಏನಿತ್ತೋ ಅದೇ ಇನ್ನೂ ಇದೆ. ಅಸಾಮಿನ ಜನರು ಕೇಂದ್ರ ಸರಕಾರಕ್ಕೆ, ಪ್ರಧಾನ ಮಂತ್ರಿಗಳಿಗೆ ಮನವಿಯನ್ನು ಅರ್ಪಿಸುತ್ತಲೇ ಬಂದಿದ್ದಾರೆ. ತಮ್ಮ ಸಂಸ್ಕೃತಿ–ಇತಿಹಾಸಗಳನ್ನು ರಕ್ಷಣೆ ಮಾಡಿಕೊಳ್ಳಲು ವಿದೇಶೀಯರ ಪ್ರವೇಶವನ್ನು ನಿಯಂತ್ರಿಸುವದು ಅವಶ್ಯವೆಂದು ಮನವಿಯಲ್ಲಿ ಹೇಳಿದ್ದಾರೆ.

ಪರಿಸ್ಥಿತಿಯ ಗಂಭೀರತೆಯನ್ನು ಅರಿವು ಮಾಡಿಕೊಳ್ಳಲು ವಿದ್ಯಾರ್ಥಿ ಸಂಸ್ಥೆಗಳು ಗಣತಂತ್ರ ಪರಿಷತ್ತು, ಪೂರ್ವಾಚಲ ಸಮಿತಿ ಎಲ್ಲವುಗಳೂ ಸೇರಿ ಹೋರಾಡಿದವು. ಜನತೆಯ ಸಹಕಾರವನ್ನು ಕೋರಿದವು. ಅಸಾಮಿನ ಜನತೆ ಅಸಾಮಿಗೂ ದೇಶದ ರಕ್ಷಣೆಗೂ ಬಂದಿರುವ ಗಂಡಾಂತರವನ್ನು ಗುರುತಿಸಿ ಆಂದೋಲನದಲ್ಲಿ ದೊಡ್ಡ ಸಂಖ್ಯೆಯಲ್ಲಿ ಭಾಗವಹಿಸಿತು. ಕೇಂದ್ರ ಹಾಗೂ ಪ್ರಾಂತೀಯ ಸರಕಾರದ ಅನೇಕ ಅಧಿಕಾರಿಗಳು ಈ ಆಂದೋಲನದಲ್ಲಿ ಭಾಗವಹಿಸಿದ್ದರು. ಅಸಾಮ ಸಮಸ್ಯೆಯ ಬಗ್ಗೆ ನಡೆದ ವಿಚಾರ ಸಂಕಿರಣ ಒಂದರಲ್ಲಿ ಮಾತನಾಡುತ್ತ ಕೆಲ ವಿದ್ಯಾರ್ಥಿಗಳು, "ನಮಗೆ ಕಾಲೇಜಿನ ಶಿಕ್ಷಣ ಬೇಡ; ಕಾರ್ಯಕ್ಷೇತ್ರದಲ್ಲಿ ಅದಕ್ಕಿಂತ ಹೆಚ್ಚಿನ ಶಿಕ್ಷಣ ನಮಗೆ ಈಗ ದೊರೆಯುತ್ತಿದೆ," ಎಂದರು.

ಅಸಾಮಿನಲ್ಲಿ ಶಾಂತಿಯುತವಾದ ಆಂದೋಲನ ನಡೆಯಬೇಕೆಂದು ವಿದ್ಯಾರ್ಥಿಗಳು ನೇತೃತ್ವ ವಹಿಸಿ ಪ್ರಯತ್ನಿಸುತ್ತಿರುವಾಗ ಅಕ್ಕಪಕ್ಕದ ರಾಜ್ಯಗಳಲ್ಲಿ ಹಿಂಸಾತ್ಮಕ ಚಟುವಟಿಕೆಗಳು ಪ್ರಾರಂಭವಾದವು. ಮೂರು ಜನ ಸಂಸತ ಸದಸ್ಯರೊಡನೆ ನಾನೂ ಆ ಸಂದರ್ಭದಲ್ಲಿ ಅಸಾಮ್ ಹಾಗೂ ಸುತ್ತುಮುತ್ತಲಿನ ಪ್ರದೇಶಗಳಲ್ಲಿ ಸಂಚರಿಸಿ ಬಂದೆ. ಅಸಾಮಿನಲ್ಲಿ ವಿದ್ಯಾರ್ಥಿ ಮುಖಂಡರು ಅಡಗಿದ್ದುಕೊಂಡೇ ಸಂಘಟನೆ ಮಾಡುತ್ತಿದ್ದರು. ವಿದ್ಯಾರ್ಥಿ ಮುಖಂಡರು ಎಷ್ಟು ಸುಸಂಘಟಿತವಾಗಿ ಆಂದೋಲನ ನಡೆಸಿದ್ದಾರೆ, ಒಂದು ವರುಷದ ವರೆಗೆ ನಡೆಸಿ ಸರಕಾರದ ಮೇಲೆ ಒತ್ತಡವನ್ನು ತರುತ್ತಿದ್ದಾರೆ ಎಂದು ಅವರನ್ನು ಅಭಿನಂದಿಸಿದವರು ಅನೇಕರು. ವಿದ್ಯಾರ್ಥಿ ಮುಖಂಡರೂ ದಣಿದುಕೊಂಡಿದ್ದಾರೆ. ದಿಲ್ಲಿಗೆ ಬರಲು ಸರಕಾರವು ಆಮಂತ್ರಣ ಕೊಟ್ಟು ಅವರನ್ನು ಒಳ್ಳೆಯ ಸ್ಥಳದಲ್ಲಿ ಇರುವಂತೆ ನೋಡಿಕೊಂಡು ಎಲ್ಲ ಉಪಚಾರವನ್ನೂ ಮಾಡಿ, ಕಡೆಗೆ ಗಂಭೀರವಾಗಿ ಮಾತನಾಡದೆ ಅವರನ್ನು ವಾಪಸ್ಸು ಕಳಿಸಿ ಬಿಟ್ಟಿತ್ತು. ವಿದ್ಯಾರ್ಥಿ ಮುಖಂಡರು, ಯುವಕರು ಎಲ್ಲ ಪರಿಷತ್ತಿನ ಪ್ರತಿನಿಧಿಗಳು ಸೇರಿ, ಇನ್ನೊಂದು ಸಲ ನಾವು ದಿಲ್ಲಿಗೆ ಬರುವದಿಲ್ಲ, ಬೇಕಾದರೆ ಕೇಂದ್ರ ಸರಕಾರದ ಪ್ರತಿನಿಧಿಗಳೇ ಗೌಹಾತಿಗೆ ಬರಲಿ, ಎಂದರು. ಹಾಗೆ ಹೀಗೆ ವಿಲಂಬವಾಗಿ ಮತ್ತೆ ವಿದ್ಯಾರ್ಥಿ ಪ್ರಮುಖರು ದಿಲ್ಲಿಗೆ ಆಗಮಿಸಿದರು. ಅಲ್ಲಲ್ಲೆ ಸಂಘ ಸಂಸ್ಥೆಗಳಲ್ಲಿ ಅಸಾಮಿನ ಸಮಸ್ಯೆಯನ್ನು ಕುರಿತು ಮಾತನಾಡಿದರು. ಪ್ರಶ್ನೆಗಳಿಗೆ ಉತ್ತರ ಕೊಟ್ಟರು. ಜನಬಲವನ್ನೂ ಜನಮತವನ್ನೂ ಗಳಿಸಬೇಕೆಂದು ವಿರೋಧಿಪಕ್ಷಗಳ ಸಂಪರ್ಕವನ್ನು ಬೆಳೆಸಿಕೊಂಡು ಅವರವರಿಗೆ ಅಸಾಮಿನ ಸಮಸ್ಯೆಯನ್ನು ಕುರಿತು ಹೇಳತೊಡಗಿದರು.

ಆರ್ಥಿಕ ಹಾಗೂ ಸಾಮಾಜಿಕ ದೃಷ್ಟಿಯಿಂದ ಅಸಾಮಿನ ಹಾಗೂ ಸುತ್ತುಮುತ್ತಲಿನ ಪ್ರದೇಶಗಳ ಮೇಲೆ. ಅಪರಿಮಿತ ಸಂಖ್ಯೆಯಲ್ಲಿ ಬರುವ ವಲಸೆಗಾರರಿಂದ ತುಂಬ ಪರಿಣಾಮವಾಗಿದೆ. ಅಸಾಮಿನ ಜನರು [illegible]

ಸುತ್ತುಮುತ್ತಲಿನ ಪ್ರದೇಶಗಳಲ್ಲಿ ಇರುವವರು ಬೇಸಾಯದ ಭೂಮಿಯ ಮೇಲೆ ಹಾಗೂ ಆರ್ಥಿಕ ಪರಿಸ್ಥಿತಿಯ ಮೇಲೆ ಬರುತ್ತಿರುವ ಒತ್ತಡವನ್ನು ತಡೆದುಕೊಳ್ಳಲು ಅಸಮರ್ಥರಾಗಿದ್ದಾರೆ.

ರಾಜಕೀಯ ದೃಷ್ಟಿಯಿಂದ ಕಳೆದ ವಿಧಾನ ಸಭೆ ಚುನಾವಣೆಗಳ ಸಂದರ್ಭದಲ್ಲಿ ಸ್ಟೇಟ್ಸ್‌ಮನ್ ಪತ್ರಿಕೆ ವರದಿ ಮಾಡಿತ್ತು. "ಗೋಲಪಾರಾ ಜಿಲ್ಲೆಯ ೧೯ ವಿಧಾನ ಸಭೆ ಸ್ಥಳಗಳಲ್ಲಿ ಏಳರಲ್ಲಿ ಈ ವಿದೇಶೀಯರಿಗೆ ನಿಶ್ಚಿತವಾದ ಬಹುಮತವಿದೆ. ಇನ್ನು ಐದು ಸ್ಥಳಗಳಲ್ಲಿ ಚುನಾವಣೆಯ ಮೇಲೆ ಪರಿಣಾಮ ಬೀರಿ ತಮಗೆ ಬೇಕಾದ ಪಕ್ಷದವರನ್ನು ಆರಿಸಿ ತರಬಲ್ಲರು: ಕಚಾರ ಜಿಲ್ಲೆಯಲ್ಲಿ ೧೫ ವಿಧಾನಸಭೆ ಸ್ಥಳಗಳಿದ್ದು, ಅಲ್ಲಿಯೂ ವಲಸೆಗಾರರ ಬಹುಮತವಿದೆ." ವಿದೇಶೀ ಶಕ್ತಿಯ ಕೈಗೊಂಬೆಗಳಾಗಿ ಯಾರು ಕೆಲಸ ಮಾಡುತ್ತಿದ್ದಾರೋ ಹೇಳುವದು ಕಷ್ಟ. ವಿದೇಶೀ ವಲಸೆಗಾರರು ಆಸಾಮಿನ ಪ್ರತಿನಿಧಿಗಳಾಗಿ ವಿಧಾನಸಭೆಗೂ ಲೋಕಸಭೆಗೂ ಹೋದರೆ ಆಸಾಮಿನ ಜನರ ಗತಿಯೇನು! ರಾಷ್ಟ್ರದ ರಕ್ಷಣೆಯ ಗತಿಯೇನು!!

ಆಸಾಮಿನ ಗುಡ್ಡಗಾಡು ಜನರು ಒಳಬಂದ ವಿದೇಶೀಯರಿಂದ ವಂಚಿತರಾಗಿ ಈಗಾಗಲೇ ತಮ್ಮ ಭೂಮಿಯನ್ನು ಕಳೆದುಕೊಂಡಿದ್ದಾರೆ. ಪಟ್ಟಣಗಳ ಜನರೂ ಈಗ ಭಯಭೀತರಾಗಿದ್ದಾರೆ. ಆಸಾಮು ಸರಕಾರವು ವಿದೇಶೀಯರೆಂದು ಪರಿಗಣಿಸಿ ರಾಷ್ಟ್ರದಿಂದ ಹೊರಗೆ ಹಾಕಬೇಕೆಂದು ಆಜ್ಞೆ ಹೊರಡಿಸಿದ್ದರೂ ಅಂತಹ ಕೆಲವರಿಗೆ ತ್ರಿಪುರಾ ಹಾಗೂ ಪಶ್ಚಿಮ ಬಂಗಾಲ ಸರಕಾರಗಳು ನಾಗರಿಕತೆಯನ್ನು ದಯಪಾಲಿಸಿವೆ. ಇಂತಹ ಸಂದರ್ಭದಲ್ಲಿ ಆಸಾಮು ಸರಕಾರವು ಅಸಹಾಯಕವಾಗಿದೆ. ಕೇಂದ್ರ ಸರಕಾರವೇ ಈ ನಾಗರಿಕತೆಯನ್ನು ರದ್ದುಗೊಳಿಸಬಲ್ಲದು. ಆದರೆ ಕೇಂದ್ರ ಸರಕಾರವು ಈ ದಿಕ್ಕಿನಲ್ಲಿ ತೀವ್ರ ಕ್ರಮ ಕೈಕೊಳ್ಳುತ್ತಿಲ್ಲ: ಈ ಕಾರಣಗಳಿಂದ ಪ್ರಶ್ನೆ ಇನ್ನೂ ಜಟಿಲವಾಗುತ್ತಿದೆ.

ಆಸಾಮಿನ ವಿದ್ಯಾರ್ಥಿ ಒಕ್ಕೂಟವು (ಆಸೂ) ತನ್ನ ಅನೇಕ ಬೇಡಿಕೆಗಳನ್ನು ಕೇಂದ್ರ ಸರಕಾರದ ಮುಂದೆ ಇಡುತ್ತಲೇ ಬಂದಿದೆ.

(೧) ಎರಡು ರಾಷ್ಟ್ರಗಳ ಗಡಿಗುಂಟ ಎತ್ತರವಾದ ಗೋಡೆಯನ್ನು ಕಟ್ಟುವದು.
(೨) ಚೆಕ್‌ಪೋಸ್ಟುಗಳ ಸಂಖ್ಯೆಯನ್ನು ಹೆಚ್ಚು ಮಾಡುವದು.
(೩) ಸಶಸ್ತ್ರ ಗಡಿರಕ್ಷಕದಳವನ್ನು ಬಲಪಡಿಸುವದು.
(೪) ೮೦೦ ಕಿ. ಮೀ. ಉದ್ದದ ಬ್ರಹ್ಮಪುತ್ರಾ ಹಾಗೂ ಅದರ ಶಾಖೆಗಳ ಗುಂಟ ಸಶಸ್ತ್ರ ಪಡೆಯನ್ನಿಟ್ಟು ಅವರಿಗೆ ವೇಗದ ನೌಕೆಗಳನ್ನು ಕೊಟ್ಟು ಗಡಿಯನ್ನು ಭದ್ರಪಡಿಸುವದು.
(೫) ಗಡಿರಕ್ಷಕ ದಳ ಹಾಗೂ ರಾಜ್ಯದ ಪೋಲೀಸ್ ಪಡೆ ಒಂದೇ ಸರಕಾರದ ಅಧೀನದಲ್ಲಿ ಸಮನ್ವಯದಿಂದ ಕಾರ್ಯಮಾಡುವದು.
(೬) ರೇಲ್ವೆಯ ಇಕ್ಕೆಲಗಳಲ್ಲಿ ವಿದೇಶೀಯರು ಗುಡಿಸಲು ಕಟ್ಟಿಕೊಂಡಿದ್ದಾರೆ. ಅವನ್ನು ಅಲ್ಲಿಂದ ಹೊರಗೆ ಹಾಕುವದು.
(೭) ತ್ರಿಪುರಾ ಹಾಗೂ ಪಶ್ಚಿಮ ಬಂಗಾಲ ಸರಕಾರಗಳು ಕೊಟ್ಟ ನಾಗರಿಕತ್ವದ ಸರ್ಟಿಫಿಕೇಟನ್ನು ರದ್ದುಗೊಳಿಸಲು ಆಸಾಮು ಸರಕಾರಕ್ಕೆ ಅಧಿಕಾರ ಕೊಡುವದು.

ಈ ಬೇಡಿಕೆಗಳನ್ನು ಈಡೇರಿಸಿಕೊಳ್ಳಲು 'ಆಸೂ' ಹಾಗೂ ಉಳಿದ ಸಂಸ್ಥೆಗಳು ಸಾಮಾಜಿಕ ಸತ್ಯಾಗ್ರಹವನ್ನು ಪ್ರಾರಂಭಮಾಡಿದವು. ಆ ಮಾತಿಗೀಗ ಎರಡು ವರುಷಗಳು ಕಳೆದುಹೋಗಿವೆ.

ಸ್ವಾತಂತ್ರ್ಯ ದೊರೆತಾಗಿನಿಂದ ಕಾನೂನಿಗೆ ವಿರುದ್ಧವಾಗಿ ಆಸಾಮಿನಲ್ಲಿ ಬಂದು ನೆಲೆಸಿದ ವಿದೇಶೀಯರೆಲ್ಲರನ್ನೂ ಗುರುತಿಸಿ ಹೊರಗೆ ಕಳಿಸಬೇಕು ಎಂಬ ಆಸಾಮಿನ ಜನರ ಬೇಡಿಕೆಯನ್ನು ಅಕ್ಷರಶಃ ಕೇಂದ್ರಸರಕಾರವು ಯಾವಾಗಲಾದರೂ ಒಪ್ಪಿತ್ತೇ? ಕೇಂದ್ರದ ಗೃಹಮಂತ್ರಿ ೧೯೮೦ರ ಫೆಬ್ರುವರಿ ೨೨ ರಂದು ಈ ಮಾತಿಗೆ ಒಪ್ಪಿಕೊಂಡು ಆ ಮೇರೆಗೆ ಘೋಷಣೆ ಮಾಡುವದಾಗಿ ಹೇಳಿದರು. ಮರುದಿನ ಬೇರೆ ಘೋಷಣೆಯನ್ನೇ ಮಾಡಿದರೆಂದು 'ಆಸೂ' ಆಕ್ಷೇಪ. ೧೯೭೧ ರ ತರುವಾಯ ಬಂದು ನೆಲೆಸಿದ ವಿದೇಶೀಯರನ್ನು ಹೊರಗೆ ಕಳಿಸುತ್ತೇವೆ ಎಂದು ಗೃಹಮಂತ್ರಿ

ಘೋಷಣೆ ಮಾಡಿದ್ದರು: ವಿದೇಶೀಯರು ಎಂಬುದಕ್ಕೆ ಅವರು ರಾಜಕೀಯ ವ್ಯಾಖ್ಯೆಯನ್ನು ಕೊಟ್ಟಿದ್ದರೆ? ರಾಜಕೀಯ ದೃಷ್ಟಿಯಿಂದ ಈ ಪ್ರಶ್ನೆಯನ್ನು ಬಿಡಿಸುವದಿಲ್ಲ, ಎಂಬ ಆಶ್ವಾಸನೆಯನ್ನು ಪ್ರಧಾನ ಮಂತ್ರಿಗಳು ಕೊಟ್ಟಿದ್ದರು! ೧೯೭೧ ರ ತರುವಾಯ ಬಂದ ವಿದೇಶೀಯರನ್ನು ಹೊರಗೆ ಕಳಿಸುವದಾಗಿ ಸರಕಾರವು ಹೇಳಿದರೆ ಈ ಸಮಸ್ಯೆಯನ್ನು ಆಸಾಮದ ಜನತೆಗೆ ಸಮಾಧಾನವಾಗುವಂತೆ ಬಿಡಿಸುವದು ಸಾಧ್ಯವೇ ಇಲ್ಲ.

'ಕಟ್ ಆಫ್' (cut off) ವರ್ಷ ಎಂಬ ಪದಪ್ರಯೋಗವನ್ನು ಸರಕಾರ ಹೊಸದಾಗಿ ಮಾಡಿತು. ಸಂವಿಧಾನದ ೫, ೬, ೭ನೆಯ ಕಲಮುಗಳ ಮೇರೆಗೇ ಆಗಲಿ, ಇಲ್ಲವೆ ನಾಗರಿಕತ್ವ ಅಧಿನಿಯಮದ ಮೇರೆಗೇ ಆಗಲಿ ಯಾರೊಬ್ಬರಿಗೆ ಭಾರತದ ನಾಗರಿಕತ್ವ ದೊರೆಯಬೇಕು. ಹಾಗಾದಲ್ಲಿ ೧೯೭೧ ರವರೆಗೆ ಒಳಬಂದ ವಿದೇಶೀಯರೆಲ್ಲ ನಾಗರಿಕತ್ವವನ್ನು ಪಡೆಯುವ ಬಗೆ ಹೇಗೆ?

೧೯೫೧ ರಲ್ಲಿ ಸಿದ್ಧಗೊಳಿಸಲ್ಪಟ್ಟ "ನ್ಯಾಶನಲ್ ರಜಿಸ್ಟರ್ ಆಫ್ ಸಿಟಿಝನ್ಸ್" ಹಲವು ರೀತಿಗಳಲ್ಲಿ ಉಪಯುಕ್ತವಾಗಿದೆ.

"ಭಾರತೀಯ ನಾಗರಿಕತ್ವ" ಉಳ್ಳವನೆಂಬ ವರ್ಣನೆಯಿಲ್ಲದ ವ್ಯಕ್ತಿ ವಿದೇಶೀಯನೆ. ೧೯೫೧ರ ರಾಷ್ಟ್ರೀಯ ರಜಿಸ್ಟರು ಆಸಾಮಿನ ಜನಗಣತಿಯನ್ನು ೮೦ ಲಕ್ಷವೆಂದು ನಮೂದಿಸಿದೆ.

೧೯೫೧ರಲ್ಲಿ ಆಸಾಮು, ಮಣಿಪುರ, ತ್ರಿಪುರಾಗಳಲ್ಲಿ ಜನಗಣತಿ ಅಧಿಕಾರಿಯಾಗಿದ್ದ ಶ್ರೀ ವಘಾಯಿವಾಲಾ ರಾಷ್ಟ್ರೀಯ ಜನಗಣತಿ ರಜಿಸ್ಟರನ್ನು ಕುರಿತು ಹೇಳಿದ್ದರು.

"Thus the National Register of Citizens will maintain continuity, will be useful for electoral and various other administrative purposes."

ಇವತ್ತು ಈ ನ್ಯಾಶನಲ್ ರಜಿಸ್ಟರನ್ನೇ ಆಧಾರವಾಗಿಟ್ಟುಕೊಂಡು ಅದರಲ್ಲಿ ಹೆಸರಿಲ್ಲದ ಜನರೆಲ್ಲ ವಿದೇಶೀಯರು ಎಂದು ಪರಿಗಣಿಸಬಹುದೇ? 'ಆಸೂ' ಹೇಳುವದು ಇದನ್ನೇ! ೧೯೫೧ ನ್ನು ಕಟ್ ಆಫ್ ವರ್ಷವೆಂದು ಇಟ್ಟುಕೊಳ್ಳಿ, ಉಳಿದವರನ್ನು ವಿದೇಶೀಯರೆಂದು ಹೊರಗೆ ಕಳಿಸಿ ಎಂದು ೧೯೬೪ ರಲ್ಲಿ ಭಾರತದ ಗೃಹಮಂತ್ರಿಯಾಗಿದ್ದ ಶ್ರೀ ಗುಲಜಾರಿಲಾಲ ನಂದಾ, ಈ ೧೯೫೧ರ ರಜಿಸ್ಟರನ್ನೇ ಆಧಾರವಾಗಿಟ್ಟು, ಆಸಾಮಿನ ವಿಧಾನಸಭಾ ಸದಸ್ಯ ಶ್ರೀ ಶರತ್ ಚಂದ್ರ ಗೋಸ್ವಾಮಿಯವರಿಗೆ ಒಂದು ಕಾಗದವನ್ನು ಬರೆದಿದ್ದರು:

"What is actually being done in Assam is not the preparation of any new register but copying out from the National Register of Citizens of 1951 census, the names and other details to verify whether an individual suspected to be a Pakistani infiltrant was in fact, a resident of India at the time of 1951 census.

"The question of the creation of a belt along the Assam–East Pakistan border to prevent infiltration is already under consideration in consultation with the Government of Assam."

ಈ ಮಾತಿಗೆ ಸುಮಾರು ಮೂವತ್ತು ವರುಷಗಳು ಕಳೆದು ಹೋಗಿವೆ. ಬೇರೆ ಪರಿಸ್ಥಿತಿಯು ಒತ್ತಡ ಉಂಟಾಗಿದೆ. ರಾಷ್ಟ್ರ ರಾಷ್ಟ್ರಗಳ ಇತಿಹಾಸ ಬದಲಾಗಿದೆ. ಇಂದು ೧೯೫೧ನ್ನು 'ಕಟ್ ಆಫ್' ವರ್ಷವೆಂದು ಪರಿಗಣಿಸುವದು ಸರಕಾರಕ್ಕೆ ಕಠಿಣವಾಗಿದೆ. ಇದುವರೆಗೆ ಎರಡು ರಾಷ್ಟ್ರಗಳ ನಡುವೆ ಬೆಲ್ಟ್ ಆಗಲಿ, ಯಾವದೇ ಗಡಿ ಸಂರಕ್ಷಣೆಯ ಗೋಡೆಯಾಗಲಿ ಇಲ್ಲ. ಇತ್ತೀಚಿನವರೆಗೆ ಆಸಾಮಿನ ಮುಖ್ಯಮಂತ್ರಿಯಾಗಿದ್ದ ಶ್ರೀ ಗೊಗೈ ೨೨-೨-೧೯೮೨ರಂದು ಹೇಳಿಕೆ ಈ ರೀತಿ ಕೊಟ್ಟಿದ್ದಾರೆ.

"The 250 km long Indo-Bangla Desh border was now 'almost sealed', and no fresh influx had been reported. There are 79 outposts now against 49 in 1979; of there 35 were in the Golpara Sector, and 44 in the Kachar Sector."

ಈ ಗಡಿಯ ಬಗ್ಗೆ 'almost sealed' ವೆಂದು ಹೇಳಿದ್ದರೂ ಚೆಕ್‌ಪೋಸ್ಟುಗಳನ್ನು ಬಿಟ್ಟು ಬೇರೆ ಯಾವ ವಿಧವಾದ ಸಂರಕ್ಷಣೆ ಅಲ್ಲಿಲ್ಲ!

೧೯೫೨ ರಲ್ಲಿ ಆಸಾಮಿನ ಚುನಾವಣೆಗಳಲ್ಲಿ ಮತದಾರರ ಯಾದಿಯನ್ನು ಸಿದ್ಧಗೊಳಿಸುವಾಗ ೧೯೫೧ ರ ರಾಷ್ಟ್ರೀಯ ಜನಗಣತಿ ಯಾದಿಯನ್ನೇ ಆಧಾರವೆಂದು ಪರಿಗಣಿಸಲಾಗಿತ್ತು.

೧೯೬೨ ರಲ್ಲಿ ಪಾರ್ಲಿಮೆಂಟಿನಲ್ಲಿ ಈ ಸಂಬಂಧದ ಪ್ರಶ್ನೆಗೆ ಉತ್ತರ ಕೊಡುವಾಗ ಶ್ರೀ ನೆಹರೂ ಹೇಳಿದರು:

"ಕಳ್ಳತನದಿಂದ ವಿದೇಶೀಯರು ವಲಸೆ ಬರುವದನ್ನು ನಿಲ್ಲಿಸಬೇಕು. ೧೯೫೦ ಕ್ಕಿಂತ ಮೊದಲು ಬಂದಂಥ ವಿದೇಶೀಯರನ್ನು ಈಗ ಗುರುತಿಸುವದು ಅಸಾಧ್ಯವಾಗಬಹುದು. ೧೯೫೦ನ್ನೇ ನಾವು ವಿದೇಶೀಯರ ಪ್ರವೇಶದ ದೃಷ್ಟಿಯಿಂದ ಕೊನೆಯ ವರ್ಷವೆಂದು ಹೇಳಬಹುದು."

ರಾಷ್ಟ್ರೀಯ ಜನಗಣತಿ ಯಾದಿಯಲ್ಲಿ ಹೆಸರು ಬಂದರೆ ಅವನು (ಅಥವಾ ಅವಳು) ನಾಗರಿಕತ್ವವನ್ನು ಪಡೆದವನೆಂದು ತಿಳಿಯಬೇಕು. ಯಾರಾದರೂ ವಿಶಿಷ್ಟ ವ್ಯಕ್ತಿಯ ಹೆಸರು ರಜಿಸ್ಟರಿನಲ್ಲಿದ್ದಾಗಲೂ ಅವನು ನಾಗರಿಕತ್ವವನ್ನು ಪಡೆದಿಲ್ಲವೆಂದು ಸಿದ್ಧಮಾಡಬೇಕಿದ್ದರೆ ಹಾಗೆ ಸಿದ್ಧಮಾಡುವ ಹೊಣೆ ಅವನದು.

ಜನಗಣತಿಯ ರಾಷ್ಟ್ರೀಯ ರಜಿಸ್ಟರು ಒಂದು ಸಾರ್ವಜನಿಕ ಕರಡೆಂದು (ಪಬ್ಲಿಕ್ ಡ್ಯಾಕುಮೆಂಟ್) ಪರಿಗಣಿಸಲಾಗುತ್ತಿತ್ತೆಂಬುದು ಆಂದಿನ ರಾಜಕೀಯ ಪಕ್ಷಗಳು ಹಾಗೂ ಸರಕಾರದ ನಡುವೆ ನಡೆದ ಪತ್ರವ್ಯವಹಾರದಿಂದ ವಿದಿತವಾಗುತ್ತದೆ. ವಿದೇಶೀಯರನ್ನು ಕಂಡುಹಿಡಿದು ಹೊರಗೆ ಕಳಿಸಲು ರಚಿತವಾದ ಟ್ರಿಬ್ಯುನಲ್ ಈ ರಜಿಸ್ಟರನ್ನೇ ನಂಬಿ ಕಾರ್ಯ ಮಾಡಿದೆ. ಆಗಾಗ ಈ ರಜಿಸ್ಟರು ಈಗ ಸಿಕ್ಕುವದಿಲ್ಲವೆಂದೂ ಅದು ಅಷ್ಟು ಅಧಿಕೃತವಾದ ಕರಡಲ್ಲವೆಂದೂ ಹೇಳಲಾಗುತ್ತದೆ. ಕ್ರಮೇಣ ಭಾರತ-ಪಾಕಿಸ್ತಾನಗಳ ನಡುವಿನ ಒಪ್ಪಂದವೂ ಈ ವಿದೇಶೀಯರ ಸಂಬಂಧದಲ್ಲಿ ಮೂಡಿಬಂತು. ಅದೇ ಎಪ್ರಿಲ್ ೧೯೫೦ರಲ್ಲಾದ ನೆಹರೂ-ಲಿಯಾಖತ್ ಒಪ್ಪಂದ. ಅದರಲ್ಲಿಯ ಸಂದರ್ಭ ಈ ಕೆಳಗಿನಂತಿದೆ.

"Rights of ownership in or occupancy of immovable property of a migrant shall not be disturbed. If during his absence, such property is occupied by another person, it shall be returned to him provided that he comes back by the 31st Dec. 1950."

ನೆಹರೂ – ಲಿಯಾಕತ್ ಒಪ್ಪಂದವಾಗಲಿ ಅಥವಾ ೧೯೭೨ ರಲ್ಲಿ ನಡೆದ ಭಾರತ-ಬಂಗ್ಲಾದೇಶ ಮೈತ್ರಿ ಒಪ್ಪಂದವಾಗಲಿ ವಿದೇಶೀಯರನ್ನು ಗುರುತಿಸುವಲ್ಲಿ ಅಥವಾ ಭಾರತದ ರಾಷ್ಟ್ರೀಯತ್ವವನ್ನು ಪ್ರದಾನ ಮಾಡುವಲ್ಲಿ ಹೇಗೆ ಸಹಾಯ ಮಾಡಬಲ್ಲವು!

೧೯೮೦ರ ಮಾರ್ಚ್ ೧೩ ರಂದು ಸರಕಾರವು ಪಾರ್ಲಿಮೆಂಟಿನಲ್ಲಿ ಈ ಸಂಬಂಧದಲ್ಲಿ ಒಂದು ಉತ್ತರವನ್ನಿತ್ತಿದ್ದನ್ನು ಗಮನಿಸಬಹುದು.

"The term 'Indian Citizen', is not defined in the Nehru- Liaquat agreement of April, 8, 1950, or in Treaty of Friend ship, Co-operation and Peace of 19th March 1872 between India and Bangla Desh."

ಆಸಾಮಿನ ವಿದೇಶೀಯರ ಪ್ರಶ್ನೆಯ ಬಗ್ಗೆ ಯೇ ಉತ್ತರ ಕೊಡುತ್ತ ಇನ್ನೊಂದು ಸಲ

೧೯೮೦ ರ ಮಾರ್ಚಿನಲ್ಲಿಯೇ ಸರಕಾರ ಈ ರೀತಿ ಉತ್ತರವಿತ್ತಿತು.

Question : Whether there is any other criteria, to decide the question of Indian citizenship apart from the relevent provisions of the Constitution, Citizenship Act and the Foreginers, Act, 1955 ?

Answer: No Sir.

ಸರಕಾರವು ಇಂತಹ ಮಾತುಗಳನ್ನು ಅನೇಕ ಸಲ ಹೇಳಿದ್ದರೂ. ಪುನಃ ಅದಕ್ಕೆ ಅಂಟಿಕೊಳ್ಳುವ ದೆಂದು ಹೇಳುವುದು ಕಠಿಣ. ಸರಕಾರದ ಪರವಾಗಿ ಏಪ್ರಿಲ್ ೧೯೮೦ ರಲ್ಲಿ ಮಾತನಾಡಿದ ಅಸಾಮು ರಾಜ್ಯಪಾಲರು ೧೯೬೭ರ ವಿದೇಶೀಯರನ್ನು ಕಂಡು ಹಿಡಿಯಲು ನಿರ್ದಿಷ್ಟ ವರ್ಷವು ಹಾಗೂ ೧೯೬೧ ವಿದೇಶೀಯರನ್ನು ಹೊರಗೆ ಕಳಿಸಲು ನಿರ್ದಿಷ್ಟಪಡಿಸಲಾಗುವ ವರ್ಷವೆಂದು ಅಸಾಮು ವಿದ್ಯಾರ್ಥಿ ಸಂಘಕ್ಕೆ (ಆಸೂ) ಹೇಳಿದರು. 'ಆಸೂ' ಅದನ್ನು ಒಪ್ಪಿಕೊಳ್ಳಲಿಲ್ಲ. ೧೯೬೧-೭೧ ರಲ್ಲಿ ಭಾರತದ ಎಲ್ಲ ಭಾಗಗಳಲ್ಲಿ ೨೪.೮೦% ಹೆಚ್ಚು ಜನಸಂಖ್ಯೆಯಾಗಿದ್ದರೆ ಅಸಾಮಿನಲ್ಲಿ ೩೪.೯೦ % ಹೆಚ್ಚು ಜನಸಂಖ್ಯೆ ಕಂಡುಬರುತ್ತದೆ. ಇದಕ್ಕೆ ಕಾರಣ ಒಳಬಂದ ವಿದೇಶೀಯರೆಂದು ಬೇರೆ ಹೇಳಬೇಕಾಗಿಲ್ಲ. ೧೯೫೧-೭೧ ರಲ್ಲಿ ೨,೪೦,೦೦೦ ವಿದೇಶೀಯರನ್ನು ಪತ್ತೆ ಹಚ್ಚಲಾಗಿದ್ದರೂ ಅವರಲ್ಲಿ ಬಹುಸಂಖ್ಯಾತರನ್ನು ಹಿಂದೆ ಕಳಿಸಲಾಗಲಿಲ್ಲ ಹೀಗಾಗಿ ಸುಮಾರು ಐದು ಲಕ್ಷ ವಿದೇಶೀಯರು ಅಸಾಮಿನಲ್ಲಿ ಉಳಿದುಕೊಂಡುಬಿಟ್ಟಿದ್ದಾರೆ. ಕಾನೂನಿಗನುಸಾರವಾಗಿ ಭಾರತೀಯ ನಾಗರಿಕತ್ವವನ್ನು ಪಡೆಯುವುದಿದ್ದ

ವರೆಲ್ಲ ವಿದೇಶೀಯರೆಂದು ಅಸ್ಸಾಮಿನ ಜನ ಪರಿಗಣಿಸುತ್ತಾರೆ.

ರಾಜ್ಯಪಾಲರು, "೧೯೭೧ ಕಟ್ ಆಫ್ ವರ್ಷ"ವೆಂದು ಹೇಳಿದರು. ತಕ್ಷಣವೇ ಪ್ರಧಾನ ಮಂತ್ರಿಗಳು ಇದು ಅಧಿಕೃತವಲ್ಲವೆಂದು ಹೇಳಿ ಕೊಟ್ಟರು.

ಜೂನ್ ೧೯೮೦ ರಲ್ಲಿ ಪ್ರಧಾನ ಮಂತ್ರಿಗಳು ತೆರೆದ ಮನಸ್ಸಿನಿಂದ ಅಸ್ಸಾಮಿನ ಸಮಸ್ಯೆಯನ್ನು ಕುರಿತು ಯೋಚಿಸುವರೆಂದು ಪತ್ರಿಕೆಗಳಲ್ಲಿ ಓದಿ ಪುನಃ 'ಆಸೂ' ಪ್ರಧಾನ ಮಂತ್ರಿಗಳಿಗೆ ಪತ್ರ ಬರೆಯಿತು. ೧೯೫೧ ರ ರಾಷ್ಟ್ರೀಯ ಜನಗಣತಿ ರಜಿಸ್ಟರು ೧೯೫೨ರ ಚುನಾವಣಾ ಮತದಾರ ಯಾದಿ ಹಾಗೂ ನೆಹರೂ-ಲಿಯಾಕತ್ ಒಪ್ಪಂದದ ಮೇರೆಗೆ ಕಾಯಮ್ಮಾಗಿ ಅಸ್ಸಾಮಿನಲ್ಲಿ ನೆಲಸಿದಂಥವರು ತಾತ್ಕಾಲಿಕವಾಗಿ ಪೂರ್ವ ಪಾಕಿಸ್ತಾನಕ್ಕೆ ಹೋಗಿದ್ದರೂ, ೧೯೫೧ ರೊಳಗಾಗಿ ತಮ್ಮ ಕಾಗದಪತ್ರಗಳನ್ನು ಅಸ್ಸಾಮಿನಲ್ಲಿ ಅಧಿಕಾರಿಗಳೆದುರು ಹಾಜರ ಮಾಡದೆ ಹೋದವರೂ ನಾಗರಿಕತ್ವವನ್ನು ನಿರ್ಧರಿಸಲು ಆಧಾರವಾಗಬೇಕೆಂದು.

'ಆಸೂ' ಬರೆದ ಈ ಪತ್ರಕ್ಕೆ ಪ್ರಧಾನ ಮಂತ್ರಿಗಳು ರಾಜ್ಯಪಾಲರ ಸಲಹೆಗಾರರ ಮೂಲಕ ಕಳಿಸಿದ ಉತ್ತರ ಬಂತು. ಅದರಲ್ಲಿ ಸ್ಪಷ್ಟವಾಗಿ ನಮೂದಿಸಲ್ಪಟ್ಟ ಮಾತುಗಳಿವು:

(೧) ೧೯೭೧ ರ ತರುವಾಯ ಅಸ್ಸಾಮಿನಲ್ಲಿ ಬಂದ ವಿದೇಶೀಯರೆಲ್ಲ ಹೊರಗೆ ಹೋಗಬೇಕು.

(೨) ಒಂದು ಸಲ ಹೊರದೂಡಲ್ಪಟ್ಟು ಮತ್ತೆ ಒಳಗೆ ಬಂದವರೂ ಹೊರಗೆ ಹೋಗಬೇಕು.

೧೯೭೧ರ ಮೊದಲು ಬಂದವರ ಬಗ್ಗೆ ಸರಕಾರವು ಯಾವ ಕ್ರಮ ಕೈಕೊಳ್ಳುವದೆಂಬುದು ನಿಶ್ಚಿತವಾಗಿರಲಿಲ್ಲ. ಭಾರತದಲ್ಲಿ ಎಲ್ಲ ಭಾಗಗಳಲ್ಲಿ ಅವರನ್ನು ನೆಲೆಗೊಳಿಸುವದೇ? ಅದಕ್ಕೆ ಉಳಿದ ಪ್ರಾಂತಗಳ ಪ್ರತಿಕ್ರಿಯೆ ಏನು?

ಪ್ರಧಾನ ಮಂತ್ರಿಗಳ ಪರವಾಗಿ ೧೯೮೦ರ ಜುಲೈ ೩ ರಂದು ಬಂದ ಕಾಗದ 'ಆಸೂ' ವಶದಲ್ಲಿತ್ತು. 'ಆಸೂ' ಆಂದೋಲನವನ್ನು ಹಿಂತೆಗೆದುಕೊಳ್ಳಬೇಕೆಂಬುದು ಅದರಲ್ಲಿ ಮುಖ್ಯವಾಗಿತ್ತು. ಉಳಿದ ಯಾವ ಬೇಡಿಕೆಗಳಿಗೂ ಉತ್ತರ ದೊರಲಿಲ್ಲ.

ಆಸೂ' ಹಾಗೂ ಅಸ್ಸಾಮು ಗಣಸಂಗ್ರಾಮ ಪರಿಷತ್ತಿನವರು ಒಟ್ಟಾಗಿಯೇ ಸರಕಾರಕ್ಕೆ ಈ ಬಗ್ಗೆ ತಮ್ಮ ಪ್ರತಿಕ್ರಿಯೆಯನ್ನು ತಿಳಿಸಿದರು. "ಆಂದೋಲನದ ಮುಖ್ಯಾಂಶಗಳನ್ನೆಲ್ಲ ಹಿಂತೆಗೆದುಕೊಳ್ಳುತ್ತೇವೆ ಆದರೆ ಒಂದು ಕರಾರಿನ ಮೇಲೆ" ಎಂದು ಕೆಳಗಿನ ಅಂಶವನ್ನು ಸರಕಾರದ ಎದುರು ಇಟ್ಟರು.

"The foreigners would be detected on the basis of the Constitution and the laws, as exist to-day, including the citizenship, and the Foreigners' Acts framed and adopted under it. In doing so the N. R. C. (National Register of Citizens) 1951, the 1952 electoral rolls, and other relevent public documents shall be made use of."

ಜೊತೆಗೆ ಅಸ್ಸಾಮಿನ ಸರಕಾರಿ ನೌಕರರ ಮೇಲೆ ಇಟ್ಟಿರುವ ವಿಶೇಷ ನಿರ್ಬಂಧಗಳನ್ನೂ ತೆಗೆದು ಹಾಕಬೇಕೆಂದು ಕೇಳಿಕೊಂಡರು. ಅಸ್ಸಾಮಿಗೆ ವಲಸೆ ಬಂದವರನ್ನು ಧರ್ಮದ ಹೆಸರಿನಲ್ಲಿ ತಾವು ಬೇರೆಯೆಂದು ಪರಿಗಣಿಸುತ್ತಿಲ್ಲವೆಂಬುದನ್ನು ಆಸು ಹಾಗೂ ಗಣಸಂಗ್ರಾಮ ಪರಿಷತ್ತು ಸ್ಪಷ್ಟವಾಗಿ ವ್ಯಕ್ತಪಡಿಸಿದವು.

ಹಲವು ರಾಜಕೀಯ ಪಕ್ಷಗಳು ಅಸ್ಸಾಮದ ಈ ಸಮಸ್ಯೆಯನ್ನು ಧರ್ಮದ ತಳಹದಿಯ ಮೇಲೆ ವಿವರಿಸಲು ಯತ್ನಿಸುತ್ತವೆ. ಇನ್ನು ಹಲವು ಜಾತ್ಯಾತೀತ ಪಕ್ಷಗಳು ವಿದೇಶಿಯರನ್ನು ಶರಣಾಗತರು ಹಾಗೂ ಕಾನೂನನ್ನು ಮುರಿದು ಒಳ ಬಂದವರು ಎಂದು ಎರಡು ವಿಧವಾಗಿ ವಿಂಗಡಿಸಲು ಯತ್ನಿಸುತ್ತಿವೆ. ಆದರೆ 'ಆಸೂ' ಹಾಗೂ ಗಣಸಂಗ್ರಾಮ ಪರಿಷತ್ತು ಇವುಗಳನ್ನು ಒಪ್ಪುತ್ತಿಲ್ಲ.

ಸರಕಾರಕ್ಕೆ ಬಹಳೇ ತೊಂದರೆಯಾದರೆ ೧೯೫೧-೬೧ ರಲ್ಲಿ ಒಳಬಂದ ವಿದೇಶೀಯರನ್ನು ಹೇಗೋ ಆಸಾಮು ಪ್ರಾಂತವು ಒಳಕೊಳ್ಳಬಹುದು. ಆದರೆ ೧೯೬೧ರಿಂದ ಈಚೆಗೆ ಒಳಬಂದವರನ್ನು ಹಿಂದೆ ಕಳಿಸಲೇಬೇಕು, ಎಂಬುದು ಆಂದೋಲನಕಾರರ ಆಗ್ರಹ. ಒಂದು ಸಂದರ್ಭದಲ್ಲಿ ಸರಕಾರದ ಪರವಾಗಿ ಗೃಹಮಂತ್ರಿಗಳು ಇದನ್ನು ಒಪ್ಪಿಕೊಳ್ಳುವದಾಗಿ ಹೇಳಿದರೂ ಪುನಃ ಪರಿಶೀಲನೆ ಮಾಡಿ ೧೯೭೧ ರವರೆಗೆ ಬಂದವರನ್ನು ಒಳಗೆ ಇರಲು ಬಿಡಬೇಕೆಂಬ ತಮ್ಮ ಧೋರಣೆಯನ್ನು ಪುನರುಚ್ಚರಿಸಿದರು.

೧೯೮೦ ರ ಕೊನೆಗೆ ಸರಕಾರವು ಮೂರೂ ಪಕ್ಷಗಳ ಸಭೆಯನ್ನು ಕರೆಯಬೇಕೆಂದು ಯೋಚಿಸಿ, 'ಆಸೂ' ಹಾಗೂ ಆಂದೋಲನಕಾರರು ಮತ್ತು ರಾಜಕೀಯ ವಿರೋಧಿ ಪಕ್ಷಗಳು ಇವುಗಳನ್ನು ಆ ಸಮಸ್ಯೆಯ ಕುರಿತಾದ ಚರ್ಚೆಗೆ ಆಮಂತ್ರಿಸಿತು.

'ಆಸೂ' ಹಾಗೂ ಆಂದೋಲನಕಾರರು ಇದಕ್ಕೆ ಒಪ್ಪದೆ ಸರಕಾರವು ತನ್ನ ಹಿಂದಿನ ಧೋರಣೆಯಲ್ಲೇನಾದರೂ ವ್ಯತ್ಯಾಸ ಮಾಡಿದ್ದರೆ ಹಾಗೂ ಯಾವ ಆಧಾರದ ಮೇಲಿಂದ ನಾಗರಿಕತ್ವವನ್ನು ನಿರ್ಧರಿಸಬೇಕೆಂಬುದನ್ನು ನಾವು ಹೇಳುವಾತ ಒಪ್ಪದಿದ್ದರೆ ಮಾತನಾಡಿ ಪ್ರಯೋಜನವೇನು? ಎಂಬ ಆಶಯದ ಸಂದೇಶವನ್ನು ಸರಕಾರಕ್ಕೆ ತಲುಪಿಸಿದರು.

ಜನೇವರಿ ೧೯೮೧ ರಲ್ಲಿ ಆಸಾಮು ಸಮಸ್ಯೆಯನ್ನು ಕುರಿತು ಒಂದು ರಾಷ್ಟ್ರೀಯ ಮಟ್ಟದ ಸಮ್ಮೇಲನವನ್ನು ಆಂದೋಲನಕಾರರು ಸಂಘಟಿಸಿದರು. ಅದರಲ್ಲಿ ಅನೇಕ ರಾಜಕೀಯ ಪಕ್ಷಗಳ ಪ್ರತಿನಿಧಿಗಳೂ ಗಣ್ಯ ವ್ಯಕ್ತಿಗಳೂ ಭಾಗವಹಿಸಿದ್ದರು.

ಸಮಸ್ಯೆಯ ಪರಿಹಾರಕ್ಕೆ ಮೂಲಭೂತವಾದ ಅಂಶಗಳೆಂದರೆ:

(೧) ವಿದೇಶೀಯರನ್ನು ಪತ್ತೆ ಹಚ್ಚುವದು: ವಿದೇಶೀಯರು ಯಾವಾಗ ಆಸಾಮಿನೊಳಗೆ ಬಂದರೆಂಬುದು ಮುಖ್ಯವಲ್ಲ.

(೨) ಮತದಾರರ ಯಾದಿಯಿಂದ ವಿದೇಶೀಯರ ಹೆಸರುಗಳನ್ನು ತೆಗೆದು ಹಾಕುವದು.

(೩) ವಿದೇಶೀಯರನ್ನು ಹಿಂದೆ ಅವರ ದೇಶಕ್ಕೆ ಕಳಿಸುವದು.

(೪) ಹೊರಗೆ ಕಳಿಸಲು ಸರಕಾರವು ಅಸಮರ್ಥವಾದರೆ ದೇಶದಲ್ಲಿ ಆ ವಿದೇಶೀಯರನ್ನು ವಿಕೇಂದ್ರೀಕರಣ ಮಾಡುವದು.

(೫) ಆಸಾಮಿನಿಂದ ಹೊರಗೆ ಹೋದವರು ಪುನಃ ಒಳಗೆ ಬರುವಂತಿಲ್ಲವೆಂಬುದನ್ನು ಭದ್ರಗೊಳಿಸುವದು.

(೬) ಗುಡ್ಡಗಾಡಿನ ಹಾಗೂ ಪರ್ವತೀಯ ಪ್ರದೇಶದಲ್ಲಿ ವಿದೇಶೀಯರು ಒಳಸೇರದಂತೆ ನೋಡಿಕೊಳ್ಳುವದು.

(೭) ಆಸಾಮು ಬಂಗ್ಲಾದೇಶ ಗಡಿಯಲ್ಲಿ ಭದ್ರವಾದ ಗಡಿಯ ಗೋಡೆಯನ್ನು ನಿರ್ಮಿಸುವದು.

(೮) ಆಸಾಮಿನಲ್ಲಿದ್ದವರಿಗೆ ಐಡೆಂಟಿಟಿ ಕಾರ್ಡುಗಳನ್ನು ಕೊಡುವದು.

ಆಸಾಮಿನಲ್ಲಿ ಸರಕಾರ ಹೋಯಿತು. ಮತ್ತೆ ಬಂತು! ಆದರೆ ಸಮಸ್ಯೆ ಮಾತ್ರ ಹೋಗಲಿಲ್ಲ. ಆಸಾಮಿನ ಜನ ಆಂದೋಲನದಿಂದ ದಣಿದಿದ್ದಾರೆ, ಹಾಗೆಂದು ಸರಕಾರ ಮಾಡಿದ ಅಲಕ್ಷ್ಯವನ್ನು ಒಪ್ಪುತ್ತಿಲ್ಲ! ವಿದ್ಯಾರ್ಥಿಗಳು, ಹಿರಿಯರು, ಸರಕಾರೀ ನೌಕರರು ಎಲ್ಲರೂ ಆಂದೋಲನದಲ್ಲಿ ಸೇರಿದ್ದಾರೆ. ಯಾಕೆಂದರೆ ಅದು ಆಸಾಮಿನ ಭವಿತವ್ಯದ ಪ್ರಶ್ನೆಯಾಗಿದೆ.

ಆಸಾಮಿನ ಪ್ರಶ್ನೆ ಕೇವಲ ಆಸಾಮಕ್ಕೆ ಮಾತ್ರ ಸಂಬಂಧಿಸಿದ್ದೇ? ವಿದೇಶೀ ಶಕ್ತಿಗಳ ಕೈವಾಡವಿದೆಯೆ? ಆಸಾಮಿನ ಸ್ವಾತಂತ್ರ್ಯ ಪ್ರದೇಶದ ಸುರಕ್ಷತೆ ಹೇಗೆ? ಭಾರತದ ಭವಿಷ್ಯತ್ತಿನಲ್ಲಿ ಆಸಾಮಿನ ಈ ಸಮಸ್ಯೆಯ ಸ್ಥಾನವೇನು? ಇದನ್ನೆಲ್ಲ ಇಂದು ನಾವು ಗಂಭೀರವಾಗಿ ಯೋಚಿಸಬೇಕಾಗಿದೆ.

✡

## ನಿಮ್ಮ ಮಗು ಹುಟ್ಟಿದಾಗಲೇ 3 ತಿಂಗಳ ಕಬ್ಬಿಣ ಸತ್ವದ ಕೊಡುಗೆ ಪಡೆದಿರುತ್ತಾನೆ



## 3 ತಿಂಗಳ ನಂತರ, ಅವನಿಗೆ ಬೇಕಾಗುವಷ್ಟು ಕಬ್ಬಿಣ ಸತ್ವವನ್ನು ಹಾಲು ಮಾತ್ರ ಕೊಡಲು ಶಕ್ತವಾಗಿಲ್ಲ

ಕಬ್ಬಿಣ ಸತ್ವದಿಂದ ಸಮೃದ್ಧವಾದ

# ಫೆರೆಕ್ಸ್

ಅವನಿಗೆ ಕೊಡಿರಿ

"ಮಗು ಜನಿಸಿದಾಗ ತಾಯಿಯಿಂದ ಬಹಳಷ್ಟು ಕಬ್ಬಿಣ ಸತ್ವದ ಸಂಗ್ರಹ ಪಡೆದಿರುತ್ತದೆ. ಆದರೆ ಈ ಸಂಗ್ರಹವು ಜನನದ ನಂತರ ಕಡಿಮೆಯಾಗುತ್ತ ಹೋಗುತ್ತದೆ. ಹಾಲು ಮಗುವಿಗೆ ಒಳ್ಳೆಯ ಆಹಾರವಾದರೂ, ಇದು ಸಂಪೂರ್ಣ ಆಹಾರವಾಗಿಲ್ಲ. ಯಾಕೆಂದರೆ ಇದರಲ್ಲಿ ಕಬ್ಬಿಣ ಸತ್ವ ಅಲ್ಪವಿದೆ. ಈ ಕಾರಣದಿಂದ ಮಗುವಿಗೆ ಕಬ್ಬಿಣ ಸತ್ವವುಳ್ಳ ಘನ ಆಹಾರದ ಅವಶ್ಯಕತೆ ಇದೆ."

ಡಾ ಸುಭಾಷ್ ಸಿ. ಆರ್ಯ
'ಇನ್‌ಫಂಟ್ ಆಂಡ್ ಚೈಲ್ಡ್ ಕೇರ್ ಫಾರ್ ದ ಇಂಡಿಯನ್ ಮದರ್.'

**ಡಾಕ್ಟರರು ಫೆರೆಕ್ಸ್ ಶಿಫಾರಸು ಮಾಡುತ್ತಾರೆ, ಏಕೆ?**



ಫೆರೆಕ್ಸ್ ಕಬ್ಬಿಣ ಸತ್ವದಿಂದ ಸಮೃದ್ಧವಾಗಿದೆ. ಅದು ನಿಮ್ಮ ಮಗುವಿನ ರಕ್ತಕ್ಕಾಗಿ, ಅವನ ಸಾಮಾನ್ಯ ಆರೋಗ್ಯಕ್ಕಾಗಿ, ಅವನ ಬೆಳವಣಿಗೆ ಹಾಗೂ ವಿಕಾಸಕ್ಕಾಗಿ ಮಹತ್ವದ್ದಾಗಿದೆ.




**ಡಾಕ್ಟರರು ಶಿಫಾರಸು ಮಾಡುತ್ತಾರೆ–ಫೆರೆಕ್ಸ್**
**ಮಗುವಿನ ಆದರ್ಶ ಘನ ಆಹಾರ– ಶೀಘ್ರ ಸರ್ವಾಂಗೀಣ ಬೆಳವಣಿಗೆಗಾಗಿ**

CASGLF-30-173 Kan

# ಕಾಣಿಕೆ

ದೇವಾಲಯ. ಆ ದೇವಾಲಯದಲ್ಲಿ ಗಾಸ್ ಸೆಲ್ವ್ಯೋನ ಪ್ರತಿಮೆ ಕೆತ್ತಲು ಒಂದು ವಿಶಿಷ್ಟವಾದ ಪೀಠವನ್ನು ತಯಾರಿಸಲಾಗಿತ್ತು. ಸುತ್ತ ನಾಲ್ಕು ಕಡೆಯಿಂದ ಉತ್ಸವ ನೋಡಲು ಜನಜಾತ್ರೆ ನೆರೆದಿತ್ತು. ಗಾಳಿಯು ಬೀಸುವಿಕೆಯಿಂದ ದೇವಾಲಯದ ಕಿಟಕಿಗಳು ಖಣ ಖಣ ಧ್ವನಿಗೈಯುತ್ತಿದ್ದರೆ, ಒಳಭಾಗ ಹಾಲು ಮಡ್ಡಿಯ ಪರಿಮಳದಿಂದ ತುಂಬಿತ್ತು. ಸಂಗೀತವಾದ್ಯಗಳಿಂದ ಹೊರಟ ಧ್ವನಿ ಅಲ್ಲಲ್ಲಿ ನಿಂತು ಕಂಪು ಬೀರಿ, ಕೊನೆಗೆ ದೂರದಲ್ಲಿ ಎಲ್ಲೋ ಮಾಯವಾಗುತ್ತಿತ್ತು. ಇಂಥ ವಾತಾವರಣದಿಂದ ಪ್ರತ್ಯೇಕಗೊಂಡ ಅಷ್ಟು ದಿಗ್ಗಜಗಳು ಧರ್ಮಾಂಧತೆಯ



ಜಿಸುಪಿನಿಂದ ರೋಚಕಗೊಂಡು ಪ್ರತಿಮೆ ಹೊರಲು ಕೈಗಳನ್ನು ಸೆಟೆಸಿ ನಿಂತರು.

"ಮುಂದೆ ಬನ್ನಿ... ಒಂದು... ಎರಡು... ಮೂರು..." ಮಾಥ್ಯೂ ಅರಚಿದ. ಎಲ್ಲರೂ ಒಮ್ಮೆಲೇ ಶಕ್ತಿ ಹಾಕಿ ಪೀಠದಲ್ಲಿದ್ದ ಪ್ರತಿಮೆಯನ್ನು ಎತ್ತಿದರು. ಊಹೂಂ. ಪ್ರತಿಮೆ ಅಲ್ಲಾಡಲಿಲ್ಲ. ಮತ್ತೊಮ್ಮೆ ಶಕ್ತಿ ಒಗ್ಗೂಡಿಸಿ ಎತ್ತಿದರು. ಈಗಲೂ ಪ್ರತಿಮೆಯನ್ನು ಎತ್ತಲಾಗಲಿಲ್ಲ. ಬದಲಾಗಿ ಎಡಕ್ಕೆ ವಾಲಿ ಅಚಾತುರ್ಯವಾಯಿತು. ಪೀಠದ ಪಾದಪಟ್ಟಿಗೆಯ ಮೇಲೆ ನಿಂತು ತಮ್ಮ ಹಿಡಿತವಿಡಲು ಅವರಿಗೆ ಸಮಯದ ಅಭಾವವಿದ್ದುದರಿಂದ ಜೊತೆಗೆ ಪ್ರತಿಮೆ, ಪಕ್ಕಕ್ಕೆ ವಾಲಿದ್ದರಿಂದಲೂ ಎಂಟೂ ಜನರು ಸಮತೋಲನ ತಪ್ಪಿದರು. ಗಾಬರಿಯಾಗಿ ಇಬ್ಬರು ಕೈ ಬಿಟ್ಟಿದ್ದರಿಂದ ಪ್ರತಿಮೆ ಎಲ್ಲರ ಹಿಡಿತ ತಪ್ಪಿ ನೆಲಕ್ಕೆ ಜಾರಿತು. ಮಾಥ್ಯೂ ದೊಡ್ಡದಾಗಿ ಚೀತ್ಕರಿಸಿದ. ಸಂತ ಗಾನ್ಸೆಲ್ವೆಸ್‌ಗೆ ಅವಮಾನವಾದರೆ ತಮಗೇನು ಕೇಡು ಕಾದಿದೆಯೋ ಎಂದು ನೆರೆದಿದ್ದ ಜನ ಸಮೂಹ "ಹೋ! ಅಚಾತುರ್ಯವಾಯಿತು !" ಎಂದು ಕೂಗಿದರು. ಕ್ಷಣದಲ್ಲೇ ಗುಂಪಿನಿಂದ ಕಿವಿ ಗಡಚಿಕ್ಕುವ ಗೌಜು ಗುಜಾರೆದ್ದಿತು.

ಇತ್ತ ಮಾಥ್ಯೂ ಮೊಣಕಾಲುಗಳ ಮೇಲೆ ಕುಕ್ಕರಿಸಿದ್ದ. ಅವನ ಬಲಗೈ ಪ್ರತಿಮೆಯ ಕೆಳಭಾಗದಲ್ಲಿತ್ತು. ಪ್ರತಿಮೆಯ ಅಗಾಧ ಭಾರದಿಂದ ಕೈ ಜಜ್ಜಿ ಹೋಗಿತ್ತು. ಆದರೂ ಮಂಡಿಗೆ ಭಾರಹಾಕಿ ಕೈ ಹಿಂದಕ್ಕೆಳೆದುಕೊಳ್ಳಲು ಪ್ರಯತ್ನಿಸಿ ಸೋತ. ಅಸಾಧ್ಯ ನೋವಾಗಿ ಮುಖ ಕಿವುಚಿದ. ಕಣ್ಣುಗಳು ಯಾತನೆಯಿಂದ ಬಿಳಿ ಬಣ್ಣಕ್ಕೆ ತಿರುಗಿದವು. ಬಾಯಿ ವಿರೂಪಗೊಂಡಿತು. ಇಷ್ಟಾದರೂ ಮಾಥ್ಯೂನ ಬಾಯಿಂದ ಸಣ್ಣ ಶಬ್ದವೂ ಹೊರ ಬರಲಿಲ್ಲ. ಪೀಠದ ಪಾದಪಟ್ಟಿಗೆಯ ಮೇಲೆ ರಕ್ತ ಸೋರುತ್ತಿತ್ತು. ಕ್ಷಣದಲ್ಲಾದ ಈ ಅಚಾತುರ್ಯದಿಂದ ಕಂಗಾಲಾದ ಜೊತೆಗಾರರು ಲಗುಬಗೆಯಿಂದ ಪ್ರತಿಮೆಯನ್ನು ಸರಿಸಲು ಪ್ರಯತ್ನಪಟ್ಟರೂ ಅದು ಅಲ್ಲಾಡಲಿಲ್ಲ. ಭಯಂಕರ ಯಾತನೆಯಿಂದ ಮಾಥ್ಯೂ ನರಳಿದ. ಹತ್ತಿರ ನಿಂತ ಹೆಂಗಳೆಯರು ಭಯದಿಂದ ನಡುಗಿದರು. ಅಂತೂ ಕೊನೆಗೆ ಎಲ್ಲರ ಪ್ರಯತ್ನದಿಂದ ಪ್ರತಿಮೆ ಸರಿಯಿತು. ಆದರೆ ಮಾಥ್ಯೂನ ಕೈಗಳು ಅಷ್ಟರಲ್ಲಿ ಜಜ್ಜಿ ಹೋಗಿ ರಕ್ತದಿಂದ ತೊಯ್ದು ಹೋಗಿದ್ದವು. ಗಲಾಟೆ ಒಮ್ಮೆಲೇ ಸ್ತಬ್ಧವಾಗಿ ಮೌನ ಕವಿಯಿತು. "ತಕ್ಷಣ ಮಾಥ್ಯೂನನ್ನು ಮನೆಗೆ ಕಳಿಸಬೇಕು," ಹಲವಾರು ಅನುಕಂಪದ ಧ್ವನಿಗಳು ಆತನ ದುಃಸ್ಥಿತಿಗೆ ಮರುಗಿದವು. ಇನ್ನು ಹಲವರು ದಾರಿ ಬಿಡಿಸಿದರು. ಒಬ್ಬ ಹೆಂಗಸು ತನ್ನ ಮೇಲುಡುಗೆಯನ್ನು ಹರಿದು, ಕೈಗೆ ಕಟ್ಟಲು ಮುಂದಾದಳು. ಆದರೆ ಮಾಥ್ಯೂ ಎಲ್ಲವನ್ನೂ ನಯವಾಗಿ ತಿರಸ್ಕರಿಸಿದ. ಅಷ್ಟರಲ್ಲಿ ಪ್ರತಿಮೆಯ ಬಳಿ ಗಲಾಟೆ ಕೇಳಿಬಂದಿದ್ದರಿಂದ ಎಲ್ಲರ ಗಮನ ಅತ್ತಹೋಯಿತು.

"ಅದು ಈಗ ನನ್ನ ಪಾಲಿನದು", "ಅದು ನನ್ನದು...ನನ್ನದು...," "ಇಲ್ಲ ನಾನೇ..." ಮಾಥ್ಯೂನ ಜಾಗಕ್ಕಾಗಿ ಅಲ್ಲಿ ಸ್ಪರ್ಧೆ ನಡೆದಿತ್ತು. ವಾದ ವಿವಾದ ಜೋರಾಗಿ, ಒಬ್ಬರಿಗೊಬ್ಬರು ಶಕ್ತಿಯ ಪಟ್ಟು ಹಿಡಿಯುವವರೆಗೆ ಮುಂದುವರಿಯಿತು. ತಕ್ಷಣ ಮಾಥ್ಯೂ ಅಲ್ಲಿಗೆ ಧಾವಿಸಿದ. ಆಕಾರ ಕಳೆದುಕೊಂಡ ಆತನ ಬಲಗೈ ಜೋತಾಡುತ್ತಿತ್ತು. ಎಡಗೈಯಿಂದ ಜನಜಂಗುಳಿಯೊಳಗೆ ಜಾಗ ಬಿಡಿಸಿಕೊಳ್ಳುತ್ತಾ ಘೋಷಿಸಿದ. "ಆ ಜಾಗ ನನಗೇ ಸೇರಿದ್ದು." ಪ್ರತಿಮೆಗೆ ಭುಜ ಕೊಡಲು ತಯಾರಾದ. ಆದರೆ ದೈಹಿಕವಾಗಿ ಅನುಭವಿಸುತ್ತಿದ್ದ ನರಕ ಸದೃಶ ಯಾತನೆಯನ್ನು ಹತ್ತಿಕ್ಕಿಕೊಳ್ಳಲಾಗದೆ, ಅವನು ತನ್ನ ದವಡೆಗಳ ಮೊರೆ ಹೋದ. ಸುತ್ತುವರಿದ ಜನತೆಗೆ ಅವನ ಯಾತನೆಯ ತೀವ್ರತೆಯು ಅರಿವಾಗಲಿಲ್ಲ. ಅರಿವಾಗುವುದೂ ಅವನಿಗೆ ಬೇಡವಾಗಿತ್ತು.

"ನೀನೇನು ಮಾಡುತ್ತಿದ್ದೀ... ಛೀ...ಛೀ... ಬಿಡು," ಉಮ್ಮಾಲಿಡೋ ಕೂಗಿದ. "ಸಂತ ಗಾನ್ಸೆಲ್ವೆಸ್‌ನ ಇಚ್ಛೆ [illegible] ನಾನೆ," [illegible] ಮಾಥ್ಯೂ ಪ್ರತಿಮೆಗೆ [illegible] ಉಳಿದವರು ತಕ್ಷಣ ಭುಜ ಕೊಟ್ಟು ಪ್ರತಿಮೆ ಹೊತ್ತರು. ಮುಂದೆ ಪ್ರತಿಮೆ [illegible]

ಹಿಂದೆ ಜನ ಸಮೂಹ. ಮೆರವಣಿಗೆ ಸಾಗುತ್ತಿದ್ದ ಹಾಗೆ ಮಠಾವೊ ಕೈಯಿಂದ ರಕ್ತ ಸೋರುವುದು ನಿಂತು, ಹೆಪ್ಪುಗಟ್ಟಿ ಕಪ್ಪು ಬಣ್ಣಕ್ಕೆ ತಿರುಗುತ್ತಿತ್ತು. ಮಧ್ಯೆ ಮಧ್ಯೆ ಕೆಲವು ಸಾಂತ್ವನದ ಧ್ವನಿಗಳು, "ಈಗ ಹೇಗಿದೆ, ನೋವು? ತೀವ್ರವಾದರೆ ಸ್ಕಾರ್‌ಪುರೋಲಾನಿಗೆ ನಿನ್ನ ಸ್ಥಾನ ಬಿಟ್ಟುಕೊಡು" ಎನ್ನುತ್ತಿದ್ದವು. ಮಠಾವೊ ಉತ್ತರ ಕೊಡುವ ಗೋಜಿಗೆ ಹೋಗದೆ ವಾದ್ಯಕ್ಕನುಗುಣವಾಗಿ ಹೆಜ್ಜೆ ಹಾಕುತ್ತಿದ್ದ. ತಲೆ ಮೇಲೆ ಗದ್ದುಗೆಯ ಅಲಂಕಾರದ ಗರಿಗಣಿಗೆಯೊಂದು ತಣ್ಣಗೆ ಬೀಸುತ್ತಿದ್ದರೂ, ಮಠಾವೋನ ತಲೆ ಹೊರೆ ಹೊತ್ತ ತಲೆಯಂತೆ ಅಲ್ಲಾಡುತ್ತಿತ್ತು. ಜನ ತಂಡೋಪತಂಡವಾಗಿ ಇನ್ನೂ ಮೆರವಣಿಗೆಯನ್ನು ಕೂಡಿಸಿಕೊಳ್ಳುತ್ತಿದ್ದರು. ಒಂದು ಬೀದಿಯ ತಿರುವಿನಲ್ಲಿ ಮಠಾವೋ ಹಠಾತ್ತನೆ ಕುಸಿದ. ಪ್ರತಿಮೆ ವಾಲಿತು. ಮಿಂಚಿನ ವೇಗದಲ್ಲಿ ಪಕ್ಕದಲ್ಲೇ ಹೆಜ್ಜೆ ಹಾಕುತ್ತಿದ್ದ ಸ್ಕಾರ್‌ಪುರೋಲಾ ಪ್ರತಿಮೆಗೆ ಭುಜಕೊಟ್ಟ. ಜನ ಈಗ ನಿಜಕ್ಕೂ ಗಾಬರಿಯಾದರು. ಜೊತೆಗೆ ಇದ್ದ ಮಠಾವೋನ ಇಬ್ಬರು ಸಂಬಂಧಿಗಳು ಆತನನ್ನು ಹೊತ್ತು ಹತ್ತಿರದಲ್ಲಿ ಇರುವ ಒಂದು ಮನೆಯೊಳಗೆ ಕೊಂಡೊಯ್ದರು.

ಮೆರವಣಿಗೆ ನಿಲ್ಲುವ ಹಾಗಿರಲಿಲ್ಲ. ಮೌನವಾಗಿ ಮುಂದುವರಿಯಿತು. ಇತ್ತ ಮಠಾವೋನನ್ನು ಹೊತ್ತ ಜನ 'ಗೇಜೊ' ಎಂಬ ವೃದ್ಧೆಯ ಮನೆ ಹೊಕ್ಕರು. ಆಕೆ ಆ ಮನೆಯ ದೊರೆಸಾನಿಯರ ಪರಿಚಾರಿಕೆ. ಗಾಯಾಳುಗಳಿಗೆ ಶುಶ್ರೂಷೆ ಮಾಡುವುದರಲ್ಲಿ ಸದಾ ಮುಂದು. ಶ್ರೀಮಂತರೆಂದು ಹೆಚ್ಚುಗಾರಿಕೆಯಿಲ್ಲ. ಕೂಲಿಯಾಳೆಂದು ಕೀಳಿಲ್ಲ. ರಕ್ತಸಿಕ್ತವಾಗಿ ವಿರೂಪಗೊಂಡ ಮಠಾವೋನ ಕೈ ನೋಡಿ ತಲೆ ಅಲ್ಲಾಡಿಸಿದಳು. ಅವಳು ತನ್ನ ಬಿಳಿಮಂಡೆ ಅಲ್ಲಾಡಿಸಿದಳೆಂದರೆ ತಂದವನ ಸ್ಥಿತಿ ಬಹಳ ಕೆಟ್ಟಿದೆ ಎಂದೇ ಅರ್ಥ. ಕೈ ಪೂರ್ಣ ಜಜ್ಜಿಹೋಗಿದ್ದರಿಂದ ಅವಳು ಅಸಹಾಯಕಳಾಗಿ ಏನೂ ತೋರದೆ ಸುಮ್ಮನೆ ನಿಂತಳು. ಅಷ್ಟರಲ್ಲಿ ಮೂರ್ಛೆಯಿಂದ ತಿಳಿದೆದ್ದು ಕುಳಿತ ಮಠಾವೊ ಸಾವರಿಸಿಕೊಂಡು ತನ್ನ ಬಲಗೈ ಪರೀಕ್ಷಿಸಿಕೊಂಡ. ಮೊಳಕೈ ಪೂರ್ತಿ ಜಜ್ಜಿ [illegible] ಎಲುಬು ಪುಡಿ ಪುಡಿಯಾಗಿರುವುದು ಆತನಿಗೆ ಖಾತರಿಯಾಯಿತು. ತೀವ್ರ ಯಾತನೆಯಿಂದ ಆತನ ಕಟ್ಟುಮಸ್ತಾದ ದೇಹವೂ ಕಂಪಿಸುತ್ತಿತ್ತು. ಒಂದೆರಡು ಹಳ್ಳಿಯ ಬೋಳುತಲೆಗಳು ಮನೆಯೊಳಗೆ ಬಂದು, ಮೌನದಲ್ಲಿ ತಮ್ಮ ಸಂತಾಪ ಸೂಚಿಸಿ, ತಮ್ಮ ಕೆಲಸವಾಯಿತೆಂಬಂತೆ ಕೈಕಟ್ಟಿ ನಿಂತವು.

"ಯಾರು ಪ್ರತಿಮೆ ಹೊತ್ತರು?" ಮಠಾವೋ ನರಳುತ್ತ ಕೇಳಿದ.

"ಸ್ಕಾರ್‌ಪುರೋಲಾ," ಹಳೆಯ ತಲೆಗಳು ಉತ್ತರಿಸಿದವು.

"ಮೆರವಣಿಗೆ ಎಲ್ಲಿದೆ ಈಗ?"

"ಇಗರ್ಜಿಯೊಳಗೆ."

"ಏನು ನಡೆಯುತ್ತಿದೆ?"

"ಸಂಜೆಯ ಪ್ರಾರ್ಥನೆ ಮತ್ತು ವಾದ್ಯಗಳು." ಎಂದು ಉತ್ತರಿಸಿದವರೇ ಅವರೂ ಪ್ರಾರ್ಥನೆಗಾಗಿ ಹೊರಟು ಹೋದರು.

ಮುದುಕಿ ಗೇಜೋ, "ಓಹೋ ಸಂಜೆಯ

"ಭೂತ-ಭವಿಷ್ಯತ್ ಮತ್ತು ವರ್ತಮಾನ ಕಾಲಗಳಿಗೆ ಒಂದೊಂದು ಉದಾಹರಣೆ ಕೊಡಿ. ಅಂದ್ರೆ...ಪ್ರೇಮ-ಮದುವೆ-ವಿಚ್ಛೇದನ ಅಂತ ಕೊಡಲಿಯೇನೋ?"

ಪ್ರಾರ್ಥನೆಯ ಸೂಚನೆಯ ಘಂಟೆ ಹೊಡೆಯಿತು. ನಾನು ಹೊರಡುತ್ತೇನೆ," ಎಂದು ಹೇಳಿದವಳು ಒಂದು ಪಾತ್ರೆಯಲ್ಲಿ ತಣ್ಣೀರು, ಒಂದು ಬಟ್ಟೆಯನ್ನು ಆತನ ಎದುರಿಗಿಟ್ಟು ಹೊರಟು ಹೋದಳು. ಇಗರ್ಜಿಯ ಘಂಟಾನಾದ ಈಗ ಸ್ಪಷ್ಟವಾಗಿ ಕೇಳಿ ಬರುತ್ತಿತ್ತು.

ಹಗಲಿನ ಅಂತ್ಯ ಸಮೀಪಿಸುತ್ತಿತ್ತು. ಕತ್ತಲು ಕೊಂಚ ಕೊಂಚವಾಗಿ ಆವರಿಸುತ್ತಿತ್ತು. ಏಕಾಂಗಿಯಾದ ಮರಾವೋ ನಿಧಾನವಾಗಿ ತನ್ನ ಜಜ್ಜಿ ಹೋದ ಕೈಯನ್ನು ಬಕೆಟ್ಟಿನೊಳಗದ್ದಿ ತಣ್ಣೀರಿನಿಂದ ತೊಳೆಯತೊಡಗಿದ. ತೊಳೆದು ಶುಭ್ರವಾದ ಕೈಯನ್ನು ಮೇಲೆತ್ತಿದಾಗಲೇ ಗಾಯದ ಭೀಕರತೆ ಆತನಿಗೆ ಗೋಚರಿಸಿದ್ದು, ಕರಣೆ ಕರಣೆಯಾಗಿ ಹೆಪ್ಪುಗಟ್ಟಿದ್ದ ರಕ್ತವೆಲ್ಲಾ ನೀರಿನಲ್ಲಿ ಕರಗಿ ಈಗ ಗಾಯ ಲಕಲಕನೆ ಹೊಳೆಯುತ್ತಿತ್ತು.

"ಪ್ರಯೋಜನವಿಲ್ಲ: ಕೈಮೀರಿದೆ! ಸಂತ ಗಾನ್‌ಸೆಲ್ವೋ ಇದನ್ನು ನಿನಗರ್ಪಿಸುತ್ತೇನೆ," ಉದ್ಗಾರ ಹೊರಟಿತು ಮರಾವೋನ ಬಾಯಿಂದ ನಿರ್ಧಾರ ಮಾಡಿಕೊಂಡಂತೆ. ತಕ್ಷಣ ಹರಿತವಾದ ಚಾಕು ಒಂದನ್ನು ತೆಗೆದುಕೊಂಡು ಮರಾವೋ ಭಯಂಕರ ಯಾತನೆಯ ಕೊಳ್ಳಿದಿಯಲ್ಲೂ ಬೀದಿಗಿಳಿದ. ಬೀದಿ ನಿರ್ಜನವಾಗಿತ್ತು. ಅಖಂಡ ಜನಸ್ತೋಮ ಇಗರ್ಜಿಯಲ್ಲಿ ಸಂತ ಗಾನ್‌ಸೆಲ್ವೋನನ್ನು ಆರಾಧಿಸುತ್ತಿತ್ತು. ಪ್ರಾರ್ಥನೆಯ ನಂತರ ಪ್ರತಿಮೆ ಮೆರವಣಿಗೆಯೊಂದಿಗೆ ಹೊರಟು ಚೌಕದ ಸ್ತಂಭದಲ್ಲಿ ಪ್ರತಿಷ್ಠಾಪನಗೊಳ್ಳಬೇಕಾಗಿತ್ತು. ಸೂರ್ಯಾಸ್ತದ ಸಂಜೆಗೆ ಲಕಲಕನೆ ಹೊಳೆಯುತ್ತಿದ್ದ ರಕ್ತಾಂಬರ • ಮೋಡಗಳು ಹೊಳೆಗೆ ನೀರು ಕುಡಿಯಲು ಬಂದ ಆನೆಗಳ ಹಿಂಡಿನಂತೆ ನಿಧಾನವಾಗಿ ಚಲಿಸುತ್ತಿದ್ದ ದೃಶ್ಯ ಸಾಲು ಮನೆಗಳ ಮೇಲಿಂದ ತೋರುತ್ತಿತ್ತು. ಇಗರ್ಜಿಯನ್ನು ಸಮೀಪಿಸಿದ ಮರಾವೋನಿಗೆ ಇಗರ್ಜಿಯ ಪೂರ್ವ ಭಾಗದಲ್ಲಿ ವಾದ್ಯ ಸಂಗೀತದೊಂದಿಗೆ ಎತ್ತರದ ಸ್ಥಾಯಿಯಲ್ಲಿ ಧ್ವನಿಗೂಡಿಸುತ್ತಿದ್ದ ಜನಸ್ತೋಮ ಗೋಚರಿಸುತ್ತಿತ್ತು. ಸಾವಿರಾರು ಜನ ತುಂಬಿದ ಗುಂಪಿನಿಂದ ಉತ್ಪತ್ತಿಯಾಗುತ್ತಿದ್ದ ಶಾಖ, ಉರಿಯುತ್ತಿರುವ ಮೊಂಬತ್ತಿಗಳಿಂದ ಉಂಟಾದ ಹೊಗೆ ವಾತಾವರಣವನ್ನು ಕಲುಷಿತಗೊಳಿಸಿ, ಉಸಿರು ಕಟ್ಟಿಸುತ್ತಿತ್ತು. ಸಂತ ಗಾನ್‌ಸೆಲ್ವೋನ ಬೆಳ್ಳಿಯ ತಲೆ ಸಾವಿರಾರು ಮೊಂಬತ್ತಿಗಳ ಮೇಲಿಂದ ದ್ವೀಪ ಸ್ತಂಭದಂತೆ ದೂರದವರೆಗೆ ತೋರುತ್ತಿತ್ತು.

ಜನಜಂಗುಳಿಯ ಮಧ್ಯೆ ದಾರಿ ಬಿಡಿಸಿಕೊಂಡು ಮರಾವೋ ಪ್ರತಿಮೆಯ ಬಳಿಗೆ ಸಮೀಪಿಸಿ, "ಸಂತ ಗಾನ್‌ಸೆಲ್ವೋ ಇದನ್ನು ನಿನಗರ್ಪಿಸುತ್ತೇನೆ," ಎಂದು ನಿರ್ಧಾರದ ಧ್ವನಿಯಲ್ಲಿ ಹೇಳಿದ. ಎಡಗೈಯಲ್ಲಿ ಹರಿತವಾದ ಚಾಕು ಥಳಥಳನೆ ಹೊಳೆಯುತ್ತಿತ್ತು. ಸಂಗೀತದ ಅಪೂರ್ವ ನಾದದೊಂದಿಗೆ ಧ್ಯಾನಮಗ್ನರಾಗಿದ್ದ ಜನ 'ಮರಾವೋ'ನನ್ನು ಗಮನಿಸುವ ಸ್ಥಿತಿಯಲ್ಲಿರಲಿಲ್ಲ. ದೃಢ ಮನಸ್ಸಿನಿಂದ ಮರಾವೋ ತಕ್ಷಣ ತನ್ನ ಬಲಗೈ ಮಣಿಕಟ್ಟಿನ ಜಾಗದಲ್ಲಿ ಚಾಕುವನ್ನು ಆಳಕ್ಕೆ ಇಳಿಸಿ ಒಮ್ಮೆ 'ಹಾ' ಎಂದು ಚೀತ್ಕರಿಸಿದ. ಜನಸ್ತೋಮ ಧ್ಯಾನಸಮಾಧಿಯಿಂದ ಎಚ್ಚೆತ್ತುಕೊಳ್ಳುವುದರೊಳಗೆ ಅಚಾತುರ್ಯವಾಗಿತ್ತು. ಕೆಲವು ಕ್ಷಣಗಳು ಉಳಿದ ಒಂದೆರಡು ಸ್ನಾಯುಗಳಿಂದ ನೇತಾಡುತ್ತಿದ್ದ ಕೈ ಸ್ವಲ್ಪ ಸಮಯದ ನಂತರ ಸಂತ ಗಾನ್‌ಸೆಲ್ವೋನ ಪಾದಯುಗ್ಮಗಳ ಮೇಲೆ ಶಾಂತವಾಗಿ ಪವಡಿಸಿತು. ರಾಶಿರಾಶಿಯಾಗಿ ಭಕ್ತರ ಕಾಣಿಕೆ ಬೀಳುವ ಜಾಗದಲ್ಲಿ ಪರಮ ಭಕ್ತ ಮರಾವೋನ ರಕ್ತಸಿಕ್ತವಾದ ಅಪೂರ್ವ ಕಾಣಿಕೆಯೊಂದು ಒಂಟಿಯಾಗಿ ಬಿತ್ತು. ಇದನ್ನು ನಿರೀಕ್ಷಿಸದಿದ್ದ ಜನ ಹಠಾತ್ತನೆ ದಿಗ್ಭ್ರಮೆಗೊಂಡು ಮಾತು ಹೊರಡದೆ ಮೂಕರಾದರು.

ರಕ್ತದಿಂದ ತೊಯ್ದು ಭಯಂಕರವಾಗಿ ಕಾಣುತ್ತಿದ್ದ ಮೊಂಡು ತೋಳನ್ನು ಮೇಲೆತ್ತಿ ಮರಾವೋ ಕಂಚಿನ ಕಂಠದಿಂದ ಕೂಗಿದ– "ಸಂತ ಗಾನ್‌ಸೆಲ್ವೋ, ಅದೋ ನಿನಗಿದು ನನ್ನ ನಮ್ರ ಅರ್ಪಣೆ."

★

# ಒಬ್ಬ ಶ್ರೋತೃವಿನ ಕೆಲವು ಅನಿಸಿಕೆಗಳು

**ಜಿ. ಟಿ. ನಾರಾಯಣರಾವ್**

ಅಭಿಜಾತ ಸಂಗೀತ ಸಹೃದಯ ಶ್ರೋತೃವಿಗೆ ಮೂರು ಸ್ತರಗಳಲ್ಲಿ ಆನಂದದಾಯಕವಾಗಬೇಕು: ಲಯಸ್ತರ, ನಾದಸ್ತರ, ಲಯನಾದಾತೀತಸ್ತರ.

ಸಿನಿಮಾ ಪ್ರಪಂಚದ 'ಶಾಸ್ತ್ರೀಯ' ಸಂಗೀತವನ್ನು ಲಘುಸಂಗೀತ ಎನ್ನುವುದುಂಟು. ಲಯಪ್ರಧಾನವಾದ ಈ ಸಂಗೀತ ಕ್ಷಣಮಾತ್ರದಲ್ಲಿ ಕೇಳುಗನ ಗಮನ ಸೆಳೆದು ಅವನ ಸಹಭಾಗಿತ್ವವನ್ನು ಸಾಧಿಸಿಬಿಡುತ್ತದೆ. ಲಯದ ಸಹಜ ಮೋಡಿ ಇದು. ತಕಿಟ ತಕದಿಮಿಯ ಕ್ರಮಬದ್ಧತೆ ನಿದ್ದೆತೂಕಡಿಸುವವನ್ನೂ ಬಡಿದೆಬ್ಬಿಸುವ ನಗಾರಿ ಬಾಜಣೆಯಂತೆ. ತನನದ ಸ್ವತಂತ್ರ ವಿಹಾರವಾದರೋ ಯುಕ್ತ ವೇಳೆಯರಿತು ಉಸುರುವ ಕಾಂತಾಸಮ್ಮಿತದ ಮಧುರವಾಣಿಯಂತೆ.

ಸಿನಿಮಾದಲ್ಲಿ ಮುಖ್ಯ ಪರಿಕರ ಕತೆ. ಇದನ್ನು ವಾಕ್ಚಿತ್ರ ಮಾಧ್ಯಮದ ಮೂಲಕ ಚಿತ್ರಿಸುವುದು ಉದ್ದೇಶ. ಇಲ್ಲಿ ಸಂಗೀತ ಕೇವಲ ಪೂರಕ ಪರಿಕರ. ಇದರದು ದ್ವಿತೀಯಕ ಪಾತ್ರ. ಆದ್ದರಿಂದ ಇದು 'ಶುದ್ಧ' ಅಥವಾ 'ಅಮೂರ್ತ' ಆಗಿರಬಾರದು. ಇದರಲ್ಲಿ ಸಾಹಿತ್ಯಾಂಶ (ಮಾತು) ಪ್ರಧಾನ, ಸಂಗೀತಾಂಶ (ಧಾತು) ಗೌಣ. ಇದರ ನಡೆ ದೃಶ್ಯದ ಗತಿಗೆ ಅಧೀನವಾಗಿರಬೇಕು. ರಾಗ ಅಥವಾ ಭಾವವನ್ನು ಮನೋಧರ್ಮಾನುಸಾರ ವಿಸ್ತರಿಸಲು ಇದರಲ್ಲಿ ಅವಕಾಶವಿರುವುದಿಲ್ಲ. ಎಂದೇ ಸಿನಿಮಾದಲ್ಲಿ ವಿಶೇಷ ಅಂಗಸೌಷ್ಠವದಿಂದ ರಂಜಿಸುವ ಒಂದು ಹಾಡು ತನಿ ಕೇಳುವೆಯಲ್ಲಿ ನೀರಸವೆನಿಸುವುದಾಗಿದೆ. ಅದರ ಬಣ್ಣ ಬೆಡಗು ಬಿನ್ನಾಣ ಎಲ್ಲವನ್ನೂ ಕಳಚಿಹಾಕಿದ ಬಳಿಕ ಉಳಿಯುವುದೇನು? ಕಂಕಾಲವೊಂದೇ.

ಸಂಗೀತ ಕಚೇರಿಯಲ್ಲಿ ಅವಧಾರಣೆ ಎರಡನೆಯ ಸ್ತರಕ್ಕೇರುತ್ತದೆ. ಇಲ್ಲಿ ಸಂಗೀತ ಅನ್ಯಾಶ್ರಯಿಯಲ್ಲ – ಸಂಗೀತಕ್ಕಾಗಿ ಸಂಗೀತ. ಕಲಾವಿದ ರಾಗಾಲಾಪನೆ, ಕೃತಿಪೋಷಣೆ, ಸಾಹಿತ್ಯ ವಿಸ್ತಾರ, ಕಲ್ಪನಸ್ವರಪ್ರಸ್ತಾರ ಮುಂತಾದ ಬಗೆ ಬಗೆ ವರಸೆಗಳಿಂದ ಇಲ್ಲಿ ತನ್ನ ಮನೋಧರ್ಮಕ್ಕೆ ನಾದರೂಪಕೊಡುತ್ತಾನೆ. ಆದ್ದರಿಂದ ಕಚೇರಿ ಹಾಡುಗಾರಿಕೆಯಲ್ಲಿ ಧಾತು ಪ್ರಧಾನ, ಮಾತು ಗೌಣ. ಸಂಗೀತದ ಅಮೂರ್ತ ಭಾವಕ್ಕೆ ನೆಲೆಬಿಂದುವಾಗುವಷ್ಟರ ಮಟ್ಟಿಗೆ ಮಾತ್ರ ಸಾಹಿತ್ಯ. ಇದರ ಗತಿಯನ್ನು ದೂರನಿಯಂತ್ರಿಸುವುದು (Remote controlling) ಲಯದ

ಪಾತ್ರ – ವಿಶಾಲಾಕಾಶದಲ್ಲಿ ಹಾರುತ್ತಿರುವ ವಿಮಾನದ ಉದ್ದಿಷ್ಟ ಪಥವನ್ನು ನಿರ್ಧರಿಸುವ ಗತಿನಿಯಂತ್ರಕದಂತೆ.

ತಾಳದ ಬಿಗಿ, ಎಣಿಕೆಯ ಕರಾರುವಾಕ್ಕುತನ, ಜಮಾವಣೆಯ ಅಚ್ಚುಕಟ್ಟು ಎಲ್ಲವೂ ಸರಿ. ಅಂತಿಮವಾಗಿ ಇವೆಲ್ಲವೂ ಬುದ್ಧಿಪ್ರಧಾನವಾದವಾದ್ದರಿಂದ – ಭಾವಪ್ರಧಾನವಾದವಲ್ಲವಾದ್ದರಿಂದ – ಶಾಸ್ತ್ರ ಎನಿಸುತ್ತವೆ, ಕಲೆ ಎನಿಸುವುದಿಲ್ಲ. ಶಾಸ್ತ್ರ ಅನಿವಾರ್ಯ, ಆದರೆ ಕಲೆಯ ಅಡಿಪಾಯವಾಗಿ ಮಾತ್ರ. ಗೊಮ್ಮಟನ ವದನದಲ್ಲಿಯ ಪ್ರಶಾಂತ ಭಾವವಾಗಲಿ, ತಾಜಮಹಾಲಿನ ಗುಂಬಜದಲ್ಲಿಯ ಸೌಮ್ಯ ಸೌಂದರ್ಯವಾಗಲೀ ತ್ರಿಶಂಕು ಸ್ಥಿತಿಯಲ್ಲಿ ನೇಲುತ್ತಿರುವ ರಚನೆಗಳಲ್ಲ, ಗಟ್ಟಿಪಾಯದ ಮೇಲೆ ತಲೆಯೆತ್ತಿ ನಿಂತಿರುವ ಕಲೆಯ ಸೆಲೆಗಳು. ಅಂದ ಮೇಲೆ ಸುನಾದಾಧೀನ ಸುಲಯ ಸಂಗೀತ ಕಚೇರಿಯ ಪ್ರಾಥಮಿಕಾವಶ್ಯಕತೆಯೆಂಬುದು ಸ್ಪಷ್ಟ. ಇಂಥ ನಾದಲೋಲ ಸಂಗೀತಗಾರ ಸ್ವತಃ ಬ್ರಹ್ಮಸಂಲೀನನಾಗಿರುತ್ತಾನೆ. ತನ್ನ ಅನುಭವವನ್ನು ಶ್ರೋತೃಗಳಲ್ಲಿ ಬಿಂಬಿಸಲು ಶಕ್ತನಾಗುತ್ತಾನೆ.

ಲಯ ಮತ್ತು ನಾದ ಎಂಬ ಎರಡು ಸ್ತರಗಳಲ್ಲಿಯೂ ಸಂಗೀತ ಸಹೃದಯ ಶ್ರೋತೃವಿಗೆ ಆನಂದದಾಯಕವಾಗುತ್ತದೆ. ಮನೋರಂಜನೆಯ ಪರಿಣಾಮವಾದ ಆನಂದವಿದು. ಇಲ್ಲಿ ಆತನ ಜಾಗರೂಕ ಮನಸ್ಸು ಕಲಾವಿದನ ಮನಸ್ಸಿಗಿಂತ ಬೇರೆಯೇ ಆಗಿದ್ದು ಅದನ್ನು ಅನುಸರಿಸುತ್ತ ರಸಾನಂದ ಪಡೆಯುತ್ತಿರುತ್ತದೆ. ಈ ದ್ವೈತ ಅದ್ವೈತವಾದಾಗ ಅಂದರೆ ಶ್ರೋತೃವಿನ ಜಾಗರೂಕ ಮನಸ್ಸು ಅಪ್ರಯತ್ನವಾಗಿ ಕಲಾವಿದನ ಮನಸ್ಸಿನೊಡನೆ ಏಕಗೊಂಡು ಭಿನ್ನತೆ ಅಳಿದುಹೋದಾಗ – ಆ ಸಂಗೀತ ಲಯನಾದಾತೀತ ಸ್ತರಕ್ಕೇರುತ್ತದೆ. ಅದು ಉತ್ತಾರಕ (elevating) ಸಂಗೀತ. ವಿಮಾನಯಾನದ ವೇಳೆ ಇಲ್ಲವೆ ಹೊನಲಿನ ದಿಸೆಯಲ್ಲಿ ಈಜುವ ವೇಳೆ ಮೂಡುವ ಭಾರರಾಹಿತ್ಯಾನುಭವಕ್ಕೆ ಸರಿಸಾಟಿಯಾದ ಅನುಭವವಿದು.

ಲಯಸ್ತರದಲ್ಲಿ ಮಾತ್ರ ಆನಂದವೀಯುವ ಸಂಗೀತ – ಉದಾಹರಣೆಗೆ ಕುನ್ನಕುಡಿ ವೈದ್ಯನಾಥನ್ ಅವರ ಪಿಟೀಲುವಾದನ – ಮನೋರಂಜಕವಾಗಿರುತ್ತದೆ ನಿಜ. ಆದರೆ ಅದರ ಯಾಂತ್ರಿಕ ಏಕತಾನತೆ, ಅನರ್ಧ್ಯವಾದ್ಯಗಳ ಅತಿ ವ್ಯಾಪ್ತಿ ಮತ್ತು ಎಲ್ಲವೂ ಒಂದೇ ಪ್ರರೂಪಕ್ಕೆ (pattern) ಸಂಗಮಿಸುವ ಪ್ರವೃತ್ತಿ ಕೆಲವೇ ಕ್ಷಣಗಳಲ್ಲಿ ಬೇಸರ ಹುಟ್ಟಿಸುತ್ತವೆ. ಅದರಲ್ಲಿ ಲಯ ಆವಶ್ಯಕತೆಗಳಿಗನುಗುಣವಾಗಿ ನಾದ ನರ್ತಿಸುತ್ತದೆ, ಸಾಹಿತ್ಯ ಒಡೆಯುತ್ತದೆ, ಭಾವ ಅಭಾವವಾಗುತ್ತದೆ. ಅದನ್ನು ಯಾರೂ ಗಂಭೀರ ಸಂಗೀತವೆಂದು ಪರಿಗಣಿಸುವುದಿಲ್ಲ.

ನಾದಸ್ತರದಲ್ಲಿಯ ಉತ್ತಾರಕ ಸಂಗೀತ ಲಯಸ್ವರದಲ್ಲಿಯ ಯಾಂತ್ರಿಕ ಸಂಗೀತಕ್ಕಿಂತ ಮೇಲಿನ ಮಟ್ಟದ ಮನೋರಂಜನೆ ಒದಗಿಸುತ್ತದೆ. ಆದರೆ ಸೂಕ್ಷ್ಮ ಸಂವೇದನೆ ಇರುವ ರಸಿಕನ ಆಸಕ್ತಿಯನ್ನು ಇದು ದೀರ್ಘ ಕಾಲವೇನೂ ಹಿಡಿದಿಡದು. ಉದಾಹರಣೆಗೆ ಈಚಿನ ವರ್ಷಗಳಲ್ಲಿ ಚಿಟ್ಟಿಬಾಬು ನೀಡುತ್ತಿರುವ ವೀಣಾವಾದನ. ಇದನ್ನು ಕೇಳುವಾಗ ಸಂತೋಷವಾಗುತ್ತದೆ. ರೋಮಾಂಚನವೂ ಆಗುತ್ತದೆ. ಆದರೆ ಬಲು ಬೇಗನೇ ಇನ್ನೂ ಏನೋ ಬೇಕೆಂಬ ಅತೃಪ್ತಭಾವದಿಂದ – ಸಂತೃಪ್ತ ಭಾವದಿಂದ ಅಲ್ಲ– ಒಳಮನಸ್ಸು ತುಡಿಯತೊಡಗುತ್ತದೆ. ಆ 'ಇನ್ನೂ ಏನೋ' ಆನಂದವನ್ನು ಭಾವಾತೀತ (transcendental) ಸಂಗೀತ ಮಾತ್ರ ಊಡಬಲ್ಲದು.

ನಿಜವಾದ ಅಭಿಜಾತ – ಸದಾ ಹೊಸತಾಗಿರುವ, ಎಂದೂ ಮಸುಳದಿರುವ, ಪ್ರತಿ ಸಲವೂ ನೂತನಾನುಭವ ನೀಡುವ ಇತ್ಯಾದಿ – ಸಂಗೀತವೆಂದರೆ ಭಾವಾತೀತ ಸಂಗೀತವೊಂದೇ. ಸೆಮ್ಮಂಗುಡಿ ಶ್ರೀನಿವಾಸ ಅಯ್ಯರ್, ಎಂ. ಎಸ್. ಸುಬ್ಬುಲಕ್ಷ್ಮಿ, ಆರ್. ಕೆ. ಶ್ರೀಕಂಠನ್ ಮೊದಲಾದವರ ಹಾಡುಗಾರಿಕೆಯಲ್ಲಿಯೂ ಲಾಲ್ಗುಡಿ ಜಯರಾಮನ್, ಪಿ. ದೊರೆಸ್ವಾಮಿ ಅಯ್ಯಂಗಾರ್, ಟಿ. ಆರ್. ಮಹಾಲಿಂಗಮ್ ಮೊದಲಾದವರ ವಾದ್ಯ ವಾದನದಲ್ಲಿಯೂ ಭಾವಾತೀತ ಸಂಗೀತದ ಹೊಳಹುಗಳು ಸಮೃದ್ಧವಾಗಿ ಮಿಂಚುತ್ತಿರುತ್ತವೆ.

ಅಂದ ಮಾತ್ರಕ್ಕೆ ಸಂಗೀತಗಾರರನ್ನು ಇವೇ

ರಕ, ಭಾವಾತೀತ – ಅಳವಡಿಸಬಹುದೆಂದು ನಿಗಮಿಸುವಂತಿಲ್ಲ. ಏಕೆಂದರೆ ಮೊದಲಾಗಿ ಕಲಾವಿದ ಒಬ್ಬ ಮನುಷ್ಯ. ದೇಹಾರೋಗ್ಯ, ಮಾನಸಿಕ ಲಹರಿ, ಪರಿಸರದ ಪ್ರಭಾವ ಮುಂತಾದವು ಅವನ ಸೃಷ್ಟಿಶೀಲ ಮನಸ್ಸಿನ ಮೇಲೆ ಅಚೊತ್ತಿಯೇ ಒತ್ತುತ್ತವೆ. ಅರಿಯಾಕುಡಿ, ಜಿಎನ್‌ಬಿ, ಮಧುರೈ ಮಣಿ ಇವರಂಥ ಸಂಗೀತ ದಿಗ್ಗಜಗಳ ಕಚೇರಿಗಳೂ ತೀರ ಕಳಪೆಯಾದದ್ದು ನನ್ನ ನೆನಪಿನಲ್ಲಿದೆ. ಏಮನಿ ಶಂಕರಶಾಸ್ತ್ರಿ, ಬಾಲಮುರಳಿಕೃಷ್ಣ ಮೊದಲಾದ ಪ್ರತಿಭಾಶಾಲಿಗಳ ಕಚೇರಿಗಳು ಕೂಡ ಚಿಟ್ಟು ಹಿಡಿಸುವುದು ವಿರಳವಲ್ಲ. ಎಂ. ಎಸ್. ಗೋಪಾಲಕೃಷ್ಣನ್ ಅವರಂಥ ಅದ್ವಿತೀಯ ಸವ್ಯಸಾಚಿಯು ತನಿ ಕಚೇರಿ ಪಿಟೀಲಿನಲ್ಲಿ ಮೃದಂಗದ ವರಿಸೆಗಳನ್ನು ನುಡಿಸುವ ವ್ಯರ್ಥ ಸಾಹಸಗಳಾಗಿ ಪರಿಗಣಿಸುವದು ರೂಢಿಯಾಗಿದೆ. ಆದ್ದರಿಂದ ಒಟ್ಟು ಕಲಾವಿದನ ಯೋಗ್ಯತೆಯನ್ನು ಒಂದು ಕಚೇರಿಯ ಸಫಲತೆ ವಿಫಲತೆ ಗಮನಿಸಿ ನಿರ್ಣಯಿಸುವುದು ಸಾಧುವಲ್ಲ. ಹಲವಾರು ಕಚೇರಿಗಳಲ್ಲಿ ಬೇರೆ ಬೇರೆ ಜೊತೆಗಾರರಿರುವಾಗ ವಿವಿಧ ಸನ್ನಿವೇಶಗಳಲ್ಲಿ ಏಕನಿಷ್ಠೆಯಿಂದ ಸಂಗೀತ ಕೈಂಕರ್ಯ ಸಲ್ಲಿಸುತ್ತ ಪ್ರತಿಸಲವೂ ನವಸಂದೇಶವನ್ನು ಬಿತ್ತರಿಸುತ್ತ ಆತ್ಮಾನಂದಲೀನನಾಗಿದ್ದರೆ ಅಂಥ ವ್ಯಕ್ತಿಯನ್ನು ನೈಜ ಅಭಿಜಾತ ಕಲಾವಿದನೆಂದು ಹೇಳಬಹುದು.

ಅಭಿಜಾತ ಸಂಗೀತಶ್ರವಣದಿಂದ ಮನಸ್ಸು ಮಾರ್ದವವಾಗುತ್ತದೆ, ಪಕ್ವವಾಗುತ್ತದೆ: ಬದುಕು ಅರ್ಥಪೂರ್ಣವಾಗುತ್ತದೆ, ಉಲ್ಲಾಸಭರಿತವಾಗುತ್ತದೆ: ಮತ್ತು ಜೀವನದ ವಿವಿಧ ಸಮಸ್ಯೆಗಳು ಹೊಸ ಬೆಳಕಿನಲ್ಲಿ ಪ್ರಕ್ಷೇಪಿಸಲ್ಪಟ್ಟು ಅವುಗಳ ಪರಿಹಾರ ಸಲೀಸಾಗುತ್ತದೆ, ಸುಲಭವಾಗುತ್ತದೆ.

ನನ್ನ ಅನುಭವದಿಂದ ಆಯ್ದ ಎರಡು ಪ್ರಾತಿನಿಧ್ಯಾತ್ಮಕ ಉದಾಹರಣೆಗಳನ್ನು ಉಲ್ಲೇಖಿಸಬಯಸುತ್ತೇನೆ.






ಗಣಿತದ ಒಂದು ಜಟಿಲ ಸಮಸ್ಯೆಯಲ್ಲಿ ಸಿಕ್ಕಿಹಾಕಿಕೊಂಡಿದ್ದೆ. ಎಷ್ಟು ಸಲ ಯಾವ ವರಿಸೆ ಏನು ಸೂತ್ರ ಪ್ರಯೋಗಿಸಿದರೂ ಅದು ತನ್ನ ಗುಟ್ಟು ಬಿಟ್ಟುಕೊಡಲಿಲ್ಲ. ಪ್ರಯತ್ನ – ವೈಫಲ್ಯ. ಗಾಲಿ ಉರುಳಿತು. ದಿವಸಗಳೂ ಉರುಳಿದವು. ಒಂದು ಸಂಜೆ ಸಂಗೀತ ಕಚೇರಿಗೆ ಹೋಗಿ ಬಂದೆ. ಮನಸ್ಸು ಪ್ರಸನ್ನವಾಗಿತ್ತು. ಅಗೋ ಮರು ಮುಂಜಾನೆ ಸಮಸ್ಯೆಯ ಪರಿಹಾರ ಪ್ರತ್ಯಕ್ಷ.

ಆಲ್ಬರ್ಟ್ ಐನ್‌ಸ್ಟೈನರ ಬಹುವರ್ಣಮಯ ವೈಜ್ಞಾನಿಕ ಜೀವನ ಚರಿತ್ರೆ ಬರೆಯುತ್ತಿದ್ದೆ. ಅವರ ಬದುಕಿನ ಘಟನಾವಳಿಗಳು ಭಾವಗಮ್ಯವಾಗಿದ್ದುವು. ಮಾನಸಿಕ ಪ್ರತಿರೂಪಗಳು ಸ್ಫುಟವಾಗಿದ್ದವು. ಆದರೆ ಆ ಅಮೂರ್ತ ಚಿತ್ರಗಳನ್ನು ಮೂರ್ತ ಭಾಷೆಗೆ ಇಳಿಸುವಾಗ ಅಗಲ ಕಮರಿ ತೆರೆದುಕೊಂಡು ಬಾಯಿಕಳೆಯುತ್ತಿತ್ತು. ಏಕೆ? ನನ್ನ ಮಾನಸಿಕ ಚಿತ್ರಕ್ಕೆ ಸಂವಾದಿಯಾದ ಭಾಷಾ ಚಿತ್ರ ಮೈದಳೆಯುತ್ತಲೇ ಇರಲಿಲ್ಲ. ಇಂಥ ಒಂದೊಂದು ಸನ್ನಿವೇಶದಲ್ಲಿಯೂ ನಾನು ಅಭಿಜಾತ ಸಂಗೀತದಲ್ಲಿ ಲೀನನಾಗಿ ನಾನುತನ ಮರೆತು ಹೊಸತನ ಪಡೆದು ಮತ್ತೆ ಲೇಖನಿ ಹಿಡಿದು ತೃಪ್ತಿ ಪಡೆದಿದ್ದೇನೆ.

ಸಂಗೀತ ಶ್ರವಣಕ್ಕೂ ಸಮಸ್ಯಾಪರಿಹಾರಕ್ಕೂ ತರ್ಕಸಮ್ಮತವಾದ ನೇರ ಸಂಬಂಧವೇನನ್ನೂ ಗುರುತಿಸಲಾರೆ. ತರ್ಕಾತೀತವಾದ ಮನಸ್ಸಿನಾಳದಲ್ಲಿ ಈ ದ್ರವ್ಯಾಂತರಣ (transmutation) ನಡೆದುಹೋಗುವುದೆಂದು ನನ್ನ ಭಾವನೆ.

ಅಭಿಜಾತ ಸಂಗೀತದ ವರ್ತಮಾನವೇನು?

ಇಂದಿನ ಜೀವಂತ ಕಚೇರಿಗಳಲ್ಲಿಯೂ ರೇಡಿಯೋ ಪ್ರಸಾರಗಳಲ್ಲಿಯೂ ಎದ್ದು ಕಾಣುವ ಅಂಶಗಳನ್ನು ಬರೆಯುತ್ತೇನೆ. ಅಪವಾದಗಳು ಇದ್ದೇ ಇವೆ. ಜೀವನದ ಬಿರುಸು ಇಂದು ಸಂಗೀತ ಪ್ರಪಂಚಕ್ಕೂ ತಟ್ಟಿದೆ. ಸಮಾಧಾನ ಅಥವಾ ನೆಮ್ಮದಿ ಕಡಿಮೆ. ದುಡುಕು ಅಥವಾ ವೇಗ ಜಾಸ್ತಿ. ಶ್ರುತಿ ಸೌಖ್ಯ, ಆಲಾಪನೆಯ ವಿಸ್ತಾರ ರಾಗ – ತಾನ – ಪಲ್ಲವಿಯ ಭವ್ಯತೆ ಮತ್ತು ಕಲ್ಪನಸ್ವರ ಪ್ರಸ್ತಾರದಲ್ಲಿ ತಾಳವರಿಸೆಗಳ (ಮೃದಂಗ ನಡೆಗಳ) ನಾದಾನುಕರಣೆಯ ಬದಲಾಗಿ ಆಯಾ ಕೃತಿಯ ಭಾವಕ್ಕೂ ಗತಿಗೊಪ್ಪುವ ಮನೋಧರ್ಮದ ಪ್ರಕಾಶ ಇಂದು ಬಹುತೇಕ ಗತ ವೈಭವಗಳು. ಹೀಗಾಗಿ ಅನದ್ಧ ವಾದ್ಯಗಳ ಮೇಲೆ ಅತಿ ಅವಲಂಬನೆ ನಿಯಮವಾಗಿದೆ. ಉಮಯಾಳಪುರಮ್ ಶಿವರಾಮನ್ ಅಥವಾ ಪಾಲ್ಘಾಟ್ ರಘು ಇವರಂಥ ವಿರಳ ಕಲಾಪ್ರಪೂರ್ಣ ಮೃದಂಗವಾದಕರು ಮಾತ್ರ ಇಂಥ ಕಿಡುಕು ಸಂದರ್ಭಗಳಲ್ಲಿಯೂ ಸಿಡುಕುಗೊಳ್ಳದೆ ತಮ್ಮ ಪಾತ್ರಗಳನ್ನು ಔಚಿತ್ಯದ ಮೇರೆಯೊಳಗೆ ನಿರ್ವಹಿಸುತ್ತಾರೆ. ರೂಢಿಯಲ್ಲಿ ತಾಳವಾದ್ಯಗಾರರು ಸಂಗೀತಗಾರರನ್ನು ಅನುಸರಿಸದೆ ಸಂಗೀತಗಾರರು ತಾಳವಾದ್ಯಗಾರರಿಗೋಸ್ಕರ ಹಾಡುವಂಥ ವಿಪರ್ಯಾಸ ತಲೆಹಾಕಿದೆ – ಲಾಂಗೂಲಶ್ವಾನಚಾಲನೆ. ಸೂತ್ರ ಸಂಗೀತದ (formula music) ಉಚ್ಛ್ರಾಯ. ಸಿದ್ಧ ಸ್ವರಮಾಲಿಕೆಗಳ ಕೃತಕ ಜೋಡಣೆ. ಸ್ವಂತಕೃತಿಗಳ ಹಾವಳಿ. ಇವುಗಳ ವಸ್ತುವೇನು? ದೇವ ದೇವಿಯರನ್ನು ಕುರಿತು ವಿಶೇಷಣಗಳ ತೋರಣ. ಸಂಗೀತ ತ್ರಿಮೂರ್ತಿಗಳ ಕೃತಿ ವಿಶೇಷಗಳ ಅಗ್ಗದ ಅನುಕರಣೆ. ಚಮತ್ಕಾರಗಳ ಒಳಹಾದಿ ಹಿಡಿದು ಯಶಸ್ಸು ದೋಚುವ ಪ್ರವೃತ್ತಿ. ಇನ್ನು ಕೇಳುಗರಾದರೂ ಅಷ್ಟೇ. ಪಾಲ್ಘಾಟ್ ಕೆ. ವಿ. ನಾರಾಯಣಸ್ವಾಮಿ, ಎಂ.ಡಿ. ರಾಮನಾಥನ್, ಎಸ್. ರಾಮನಾಥನ್ ಮೊದಲಾದವರ ಸೌಮ್ಯ ಮತ್ತು ಗಂಭೀರ ಸಂಗೀತ ಖಾಲಿ ಕುರ್ಚಿಗಳಿಗೆ ಅರ್ಪಿತ. ಮಧುರೈ ಸೋಮಸುಂದರಂ, ಕೆ. ಜೆ. ಜೇಸುದಾಸ್ ಮೊದಲಾದವರ ಯಾಂತ್ರಿಕ ಮತ್ತು ದೈತ್ಯ ಸಂಗೀತ ತುಂಬಿ ಬಿರಿವ ಅಭಿಮಾನಿಗಳಿಂದ ಸೇವಿತ.

ರಸಿಕನಾದವ ಮಾನಸಿಕ ನೆಮ್ಮದಿ ಗಳಿಸಲೆಂದು ಸಂಗೀತ ಕಚೇರಿಗೆ ಹೋದರೆ ಅಲ್ಲಿಯೂ ಮಾರುಕಟ್ಟೆಯ ದೊಂಬರಾಟದ ಪ್ರಭಾವ ಅವನನ್ನು ತಟ್ಟಬೇಕೇ? ಮನೋಧರ್ಮ ಸಂಗೀತವಿಂದು ವಾಣಿಜ್ಯ ಸಂಗೀತದಿಂದ ವಿಸ್ಥಾಪಿತವಾಗುತ್ತಿರುವಂತೆ ಅನಿಸುತ್ತದೆ. ಕಲಾವಿದ ನಾದ ತನ್ಮಯನಾಗಿ ರಸಿಕರನ್ನು ತನ್ನ ಎತ್ತರಕ್ಕೆ ಎತ್ತಬೇಕು. ಉತ್ತಾರಣೆ ಎಂದರೆ ಇದೇ. ಕಲಾ

ತ್ಮಕವಾದ ಈ ಕ್ರಿಯೆಯ ಬದಲು ಬಹುತೇಕ ಕಚೇರಿಗಳಲ್ಲಿ ನಮಗಾಗುವ ಅನುಭವವೇನು? ಕಲಾವಿದ 'ಪರಿಣಾಮದ (effect) ಹುಚ್ಚು ಕುದುರೆ ಸವಾರಿ ಮಾಡುತ್ತಿರುವನೋ ಎಂಬಂತೆ. ರಸಿಕರ ಮೇಲೆ ಹಠಾತ್ ಪ್ರಹಾರಗಳನ್ನು ಬಜಾಯಿಸಿ "ಆಹಾ ಎಂಥ ಪ್ರಮಾದ! ಅಗದಿ ಭಯಂಕರ"ಎಂಬ ಅಗ್ಗದ ಉದ್ಗಾರಗಳನ್ನು ಬಡಿದೆಬ್ಬಿಸುವ ಚಮತ್ಕಾರ ಪ್ರದರ್ಶನವೇ ಈ ಪರಿಣಾಮ. ವೇಗವಿಲ್ಲಿ ಪ್ರಧಾನ, ಶ್ರುತಿಸೌಖ್ಯ ಮಂಗಮಾಯ. ತಾಳದ ಪಲ್ಟಿಗಳಿಗೆ ಇಲ್ಲಿ ಮೊದಲ ಮಣೆ. ಕಲೆಯ ಕೊಲೆ. ಮೆಟ್ರೊನೋಮಿನ ನಿಷ್ಕೃಷ್ಟತೆಗೆ ಲಗತ್ತಿಸಿದ ಸಂಗೀತ ಮೌಲಿಕ ಕಲೆಯಾಗದು. ಅದೊಂದು ಪರಿಪೂರ್ಣ ದೊಂಬರಾಟ ಪ್ರದರ್ಶನವಾದೀತು ಅಷ್ಟೆ. ಆದ್ದರಿಂದ ಪರಿಣಾಮದ ಬೆಂಬತ್ತುವ ಕಲಾವಿದನ ಪ್ರಥಮ ನಷ್ಟ ಖುದ್ದು ಪರಿಣಾಮವೆ. ಕಲೆಯನ್ನು ಅನುಸರಿಸುವಾತನಾದರೊ ಅನುದ್ದೇಶಿತನಾಗಿ ಪರಿಣಾಮವನ್ನೂ ಸಾಧಿಸುತ್ತಾನೆ. ಈ ನಿಕಷಕ್ಕೆ ಉಜ್ಜಿದಾಗ ಇಂದಿನ ಬಹುಸಂಖ್ಯಾತ ಮುಂಚೂಣಿ (ಜನಪ್ರಿಯ ಅಥವಾ ವಾಣಿಜ್ಯಾತ್ಮಕವಾಗಿ ಯಶಸ್ವಿಯಾಗಿರುವ ಎನ್ನುವ ಅರ್ಥದಲ್ಲಿ) ಸಂಗೀತಗಾರರು ಹಿತ್ತಾಳಿ ಆಗುತ್ತಾರೆ. ಕಲ್ಪನಸ್ವರಗಳ ಚಮತ್ಕಾರ, ಆರ್ಭಟೆ, ಬೆಡಗು (ಖಂಡಿತವಾಗಿಯೂ ಉತ್ತಮ ಸಂಗೀತದ ಒಂದು ಘಟಕ ಬೆಡಗು ಅಲ್ಲ) ತೆಗೆದು ಹಾಕಿಬಿಟ್ಟರೆ ಹೆಚ್ಚುಮಂದಿ ಕಲಾವಿದರು ಉಪ್ಪಿಗೆ ಬಿದ್ದ ಮಾವಿನ ಮಿಡಿ ಆಗುವುದು ಕಂಡಂತೆಯೇ ಇದೆ. ಪುತ್ಥಳಿ ಆಗಲು ಯೋಗ್ಯತೆ ಗಳಿಸಿರುವ ಕಲಾವಿದರು ತರುಣ ಪೀಳಿಗೆಯಲ್ಲಿ ಕೆಲವರಾದರೂ ಇದ್ದಾರೆ: ಸಿ. ಕೆ. ರಾಮಚಂದ್ರನ್ ಮಾಧುರ್ಯ ಜಿ. ಎಸ್. ಮಣಿ, ರುದ್ರಪಟ್ಣಮ್ ಸಹೋದರರು. ಮೊದಲಾದವರು. ಆದರೆ ಪ್ರಚಾರ

ಪ್ರಸಿದ್ಧಿ ಸಾಕಷ್ಟು ದೊರೆಯದೆ ಇಂಥವರ ಸೌಮ್ಯ ಮನೋಧರ್ಮಸಂಗೀತ ಪ್ರಕಾಶಕ್ಕೆ ಬಂದಿರುವುದಿಲ್ಲ.

ಅಂದಹಾಗೆ ನಮ್ಮ ಸಂಗೀತವೇಕೆ ಈಗಲೂ ಭಕ್ತಿರಸಪ್ರಧಾನವಾಗಿಯೇ ವಿಜೃಂಭಿಸುತ್ತಿದೆ? ಬದುಕಿನಲ್ಲಿ ಇಲ್ಲದ ಮೌಲ್ಯವನ್ನು ಸಂಗೀತ ದಲ್ಲಿ ಕಾಣುವ ತವಕವಾಗಿರಬಹುದೇ? ಇತರ ರಸಗಳಿಗೂ ಅಲ್ಲಿ ಸ್ಥಾನವಿರಬೇಡವೇ? ಸಂಗೀತದ ಮಾಧ್ಯಮ ಬಹುತೇಕ ತೆಲುಗೇ ಆಗ ಬೇಕೇಕೆ? ತಮಿಳು ನಾಡಿನಲ್ಲಿ ತಮಿಳು ಕೃತಿಗಳು, ಕೇರಳದಲ್ಲಿ ಮಲೆಯಾಳಿ ಕೃತಿಗಳು ವ್ಯಾಪಕ ವಾಗಿ ಪ್ರಚಾರದಲ್ಲಿವೆ. ಕರ್ನಾಟಕದಲ್ಲಿ 'ದೇವರ ನಾಮಗಳು' (ಇಲ್ಲಿಂದ ಆರಂಭವಾಗುತ್ತದೆ. ಕನ್ನಡಿಗರ ಕೀಳರಿಮೆಯ ಪ್ರದರ್ಶನ: ಎಲ್ಲ ವಾಗ್ಗೇಯಕೃತಿಗಳೂ ದೇವರ ನಾಮಗಳೇ ಎಂಬುದು ಗಮನಾರ್ಹ) ಕಚೇರಿಯ ಕೊನೆಗೆ ಎಸೆಯಲ್ಪಡುವುದರ ಔಚಿತ್ಯವೇನು? ಅಲ್ಲಿಯೂ ಕನ್ನಡಿಗ ಕಲಾವಿದರಿಗೆ ಇವು ಅಮಾನ್ಯ. ನಮ್ಮ ವಾದ್ಯಗಳ ಮಾಧ್ಯಮಕ್ಕೆ ಹೊಂದುವಂತೆ ಸಂಗೀತ ರಚನೆಗಳೇಕೆ ಆಗುತ್ತಿಲ್ಲ? ಹೀಗಾಗಿ ವಾದ್ಯ ಗಾರರು ಸಾಹಿತ್ಯಮಯ ಕೃತಿಗಳನ್ನೇ ನುಡಿಸ ಬೇಕಾಗಿ ಬಂದಿದೆ. ಇದರಿಂದ ಅವರ ಅಭಿವ್ಯಕ್ತಿಗೆ ಅಷ್ಟರ ಮಟ್ಟಿಗೆ ಪೂರ್ಣತೆ ಕಡಿಮೆ ಯಾಗುತ್ತದೆ.

ಅಭಿಜಾತ ಸಂಗೀತದ ಭವಿಷ್ಯವೇನು?

ಮುಂಬರುವ ವರ್ಷಗಳಲ್ಲಿ ಸಂಗೀತ ಕಚೇರಿ ಯೊಂದರ ಚಿತ್ರವನ್ನು ಕಲ್ಪಿಸಲು ಪ್ರಯ ತ್ನಿಸುತ್ತೇನೆ. ಮೃದಂಗಕಾರ ಅದರಲ್ಲಿ ಪ್ರಧಾನ ಕಲಾವಿದ. ಆವನು ತಾಳದ ವರಿಸೆಗಳನ್ನು ಬಜಾ ಯಿಸಿದಂತೆ ಸಾಥೀಗೆ ಕುಳಿತಿರುವ ಹಾಡುಗಾರ ಗತಿ ಹಿಡಿದು ಅದಕ್ಕೊಪ್ಪುವ ಕೃತಿಯನ್ನು ಮೆಟ್ಟಲು ಮೆಟ್ಟಲಾಗಿ ಹಾಡುತ್ತಾನೆ. ಉದಾಹರಣೆಗೆ 'ಓರಂಗಶಾಯೀ' ಪಲ್ಲವಿಯನ್ನು ಗಮಕರಹಿತ ವಾಗಿ ತಾಳಸಹಿತವಾಗಿ ಅದು ಹಾಡುವ ಧಾಟಿ ಹೀಗಿರುತ್ತದೆ. "ಓಗೋಗೋಗೋ—ಗೋಗೋಗೋ ಗೋಗೋ—ಗೋ ಗೊ ಗೋ ಗೋ—ರಂ... ಗಾಃ ಶಾ ಗಗಗಾಗಾಯಿ..." ಪಿಟೀಲುಗಾರ ಇವನ ವಿಧೇಯ ಅನುಯಾಯಿಯಾಗಿ ತಂತಿಗಳನ್ನು ಕೊಯ್ಯುತ್ತಾನೆ, ಇಲ್ಲವೆ ಬಡಿಯುತ್ತಾನೆ. ಆಲಾಪನೆ ಮುಂತಾದ ತಾಳರಹಿತ ಅಂಶಗಳಿಗೆ ಅಂದು ಸ್ಥಾನವಿರುವದಿಲ್ಲ.

ಸರ್ಕಾರದಲ್ಲಿ ಹೇಗೋ ಸಂಗೀತದಲ್ಲೂ ಹಾಗೆ ನಮ್ಮ ಯೋಗ್ಯತೆಗೆ ಅನುಗುಣವಾದ ಸಂಗೀತ ನಮಗೆ ಲಭಿಸುತ್ತದೆ. ✪



ಸೃಷ್ಟಿಕರ್ತ ಸ್ತ್ರೀಯನ್ನು ಸೃಷ್ಟಿಸಿದಾಗ ಅದಕ್ಕೆ ಪುರುಷನ ಮಿದುಳಿನ ಭಾಗದ ಅಂಶವನ್ನಾಗಲಿ, ಆತನ ಪಾದದ ಭಾಗದ ಅಂಶವನ್ನಾಗಲಿ ತೆಗೆದುಕೊಳ್ಳಲಿಲ್ಲ. ಬದಲಾಗಿ ಆತನ ಹೃದಯದ ಒಂದಿಷ್ಟು ಭಾಗವನ್ನು ಬಳಸಿಕೊಂಡ. ಹೀಗಾಗಿ ಸ್ತ್ರೀ ತನ್ನ ತಲೆ ಮೇಲೇರಿ ಕೂಡುವುದಕ್ಕಾಗಲಿ, ತನ್ನ ಪಾದದಡಿ ಬೀಳುವುದಕ್ಕಾಗಲಿ ಇರುವಂಥ ವಸ್ತುವಲ್ಲ — ಆಕೆ ಹೃದಯಕ್ಕೆ ಪ್ರಿಯವಾಗುವಂಥವಳು ಎಂದು ಪುರುಷ ಮೊದ ಮೊದಲು ಹೃತ್ಪೂರ್ವಕವಾಗಿ ಹಾರೈಸುತ್ತಾನೆ. ಆದರೆ ನಂತರ ಮಾತ್ರ ಪರಿಣಾಮ ವಿರುದ್ಧವಾಗಿ ಬಿಡುತ್ತದೆ.

—ಜಾನ್ ಸ್ವಿಫ್ಟನ್ ಬೀಕರ್

# ಪದಾರ್ಥ ಚಿಂತಾಮಣಿ

-೪೦-

ದಿಕ್ಕುಗಳ ಕಲ್ಪನೆ ಎಲ್ಲ ಸಚರ ಜೀವಿಗಳಿಗೆ ಅತ್ಯಗತ್ಯ. ಎಲ್ಲ ಪ್ರಾಣಿಗಳು ತಮ್ಮ ಹತ್ತಿರದ ಪರಿಸರದಲ್ಲಿನ ಹೆಗ್ಗುರುತುಗಳನ್ನು ಆಧರಿಸಿ ದಿಕ್-ನಿರ್ಣಯ ಮಾಡುತ್ತವೆ. ಮನುಷ್ಯನು ಮಾತ್ರ ಸುತ್ತಣ ಪರಿಸರದಿಂದ ದೂರವಾದ ಹೆಗ್ಗುರುತುಗಳನ್ನು ಬಳಸಿ ದಿಕ್ಕುಗಳ ನಿರ್ಣಯಕ್ಕೆ ಸಾಧ್ಯವಿದ್ದಷ್ಟು ಅಸಾಪೇಕ್ಷವಾದ ಉಪಾಯಗಳನ್ನು ಕಂಡುಹಿಡಿಯಲು ಯತ್ನಿಸಿದ್ದಾನೆ.

ಕನ್ನಡದಲ್ಲಿ ನಾಲ್ಕು ಪ್ರಧಾನ ದಿಕ್ಕುಗಳಿಗೆ **ಮೂಡು, ಪಡು, ತೆಂಕು, ಬಡಗು**ಗಳೆಂಬ ಹೆಸರುಗಳು ಪ್ರಾಧಾನ್ಯದಿಂದ ಕಾಣಿಸುತ್ತವೆ. ಪೃಥ್ವಿಯ ದೈನಂದಿನ ಚಲನೆಯಿಂದ ಆಕಾಶ ಕಾಯಗಳು ದಿಗಂತದಲ್ಲಿ ಎದ್ದು ಬರುವ ದಿಕ್ಕು **ಮೂಡು ಮೂಡಲು** (= ಎದ್ದು ಬರು). ಸಂಜೆ ಸೂರ್ಯ ಮುಳುಗುವ ದಿಕ್ಕು **ಪಡು ಪಡುವಲು**(= ಮಲಗು, ಸಾಯು).

ಬರಿಗಣ್ಣಿಗೆ ಕಾಣುವ ಹೆಚ್ಚಿನ ಆಕಾಶಕಾಯಗಳೆಲ್ಲ ಮೂಡುವುದು ಅದೇ ದಿಕ್ಕಾದರೂ ಅತಿ ಪ್ರಕಾಶಮಾನ ಕಾಯವಾದ **ಸೂರ್ಯನೇ** ದಿಕ್ಕುಗಳ ನಿರ್ಣಯಕ್ಕೆ ಹೆಗ್ಗುರುತೆಂಬುದು ಈ ಕನ್ನಡ ಮತ್ತು ಅದಕ್ಕೆ ಹತ್ತಿರದ ದ್ರಾವಿಡ ಭಾಷೆಗಳ ಹೆಸರುಗಳಿಂದ ತಂತಾನೇ ಸಿದ್ಧವಾಗದಿದ್ದರೂ ಇತರ ಭಾಷೆಗಳ ಸಮಾನ ಪದಗಳನ್ನು ನೋಡಿದರೆ ಖಚಿತವಾಗುತ್ತದೆ. East ಎಂಬ ಇಂಗ್ಲಿಷ್ ಪದಕ್ಕೆ aus ಎಂಬ ಊಹಾತ್ಮಕ ಆದಿ ಭಾರೋಪ್ಯ ಭಾಷೆಯ ಪದ ಮೂಲವೆಂದು ಭಾವಿಸಲಾಗಿದೆ. ಅದು ಸಂಸ್ಕೃತದ **ಉಷಸ್** ಶಬ್ದದ ಭಗಿನಿ. ಅದರ ಅರ್ಥ ಅರುಣೋದಯ ಕಾಲದ ದೇವತೆ. ಲ್ಯಾಟಿನ್ Aurora ಅವಳೇ. ಲ್ಯಾಟಿನ್ನಿನ Orient (= ಪೂರ್ವದ) ಕೂಡ **ಸೂರ್ಯೋದಯ** ದಿಕ್ಕು ಎಂಬರ್ಥದ್ದೇ. ಅರಬ್ಬಿ ಶರ್ಕ್ (= **ಪೂರ್ವ**) ಉದಯಾರ್ಥಕವಾದದ್ದು.

ಹಾಗೆಯೆ **ಪಡು** ದಿಕ್ಕಿನ ಹೆಸರಾದ ಇಂಗ್ಲಿಷ್ West ಸಂಜೆ (Vesper) ಎಂಬ ಲ್ಯಾಟಿನ್ ಪದದ ಜ್ಞಾತಿ. ಲ್ಯಾಟಿನ್ನಿನ Occident ಎಂಬ ಪಶ್ಚಿಮ ಸೂಚಕ ಪದ ಕೂಡ **ಸೂರ್ಯಾಸ್ತ** ಅಥವಾ ಸೂರ್ಯನ **ಬೀಳುವಿಕೆ** ಎಂಬರ್ಥ ಕೊಡುತ್ತದೆ.

ಆದರೆ ಎಲ್ಲ ಭಾಷೆಗಳಲ್ಲಿ ಹೀಗೆ ದಿಕ್ಕುಗಳು ಸೂರ್ಯನನ್ನು ಆಧರಿಸಿವೆಯೆಂದಲ್ಲ. ಸಂಸ್ಕೃತದ **ಪೂರ್ವ** ಶಬ್ದ ಎದುರಿಗಿರುವ ಅಥವಾ **ಮೊದಲಿನ** ಎಂಬರ್ಥ ಕೊಡುತ್ತದೆ. **ಪಶ್ಚಿಮ** ಶಬ್ದವೂ ಬೆನ್ನುಗಡೆಯ ದಿಕ್ಕು ಎಂದು ಸೂಚಿಸುವಂಥಾದ್ದು: ಎರಡರಲ್ಲಿಯೂ ಸೂರ್ಯನ ಉದಯಾಸ್ತಗಳ ಸಂಕೇತ ಇಲ್ಲ. ತಮಿಳು, ಮಲಯಾಳಿ ಭಾಷೆಗಳಲ್ಲಿ **ಪೂರ್ವ** ಪಶ್ಚಿಮಗಳಿಗೆ **ಕಿಳಕ್ಕು** (ಕೆಳಗಿನ) ಮತ್ತು **ಮೇಲ್ಕು** (ಮೇಲಿನ) ಎಂಬ ಹೆಸರುಗಳೂ ಇವೆ. ಇದು ಈ ಜನರ ಮೂಲ ನೆಲೆಯ ಭೌಗೋಲಿಕ ಸ್ಥಿತಿಗೆ ಸಾಕ್ಷ್ಯ ಹೇಳುತ್ತದೆ. **ಕಾವೇರಿ** ನದಿ ಬಯಲಿನಲ್ಲಿದ್ದವರಿಗೆ ಪೂರ್ವ ದಿಕ್ಕು ತಗ್ಗಿನಲ್ಲಿದೆ, ಗಟ್ಟಗಳನ್ನುಳ್ಳ ಪಡು ದಿಕ್ಕು ಎತ್ತರದಲ್ಲಿದೆ. ಆದ್ದರಿಂದ ಅವು **ಕೆಳ** ದಿಕ್ಕು **ಮೇಲ್** ದಿಕ್ಕುಗಳಾಗಿವೆ. ಕೇರಳದಲ್ಲಿರುವವರಿಗೆ ನಿಜಕ್ಕೂ ಪೂರ್ವ ದಿಕ್ಕು ಎತ್ತರದಲ್ಲಿ, ಪಶ್ಚಿಮ ತಗ್ಗಿನಲ್ಲಿ ಇವೆ. ಆದರೆ ಮಲೆಯಾಳಿ ಭಾಷೆಯಲ್ಲಿ **ಪಶ್ಚಿಮಕ್ಕೇ** ಎತ್ತರ ಎಂಬರ್ಥದ **ಮೇಲ್ಕು** ಪದ. ಪೂರ್ವಕ್ಕೆ ತಗ್ಗು ಎಂಬರ್ಥದ **ಕಿಳಕ್ಕು** ಪದ! ಇದು ಮಲೆಯಾಳಿಗಳು ಮೊದಲು ತಮಿಳರೊಡನೆ ಏಕಜನಪದವಾಗಿದ್ದರೆಂಬ ಇತಿಹಾಸದ ಗುಟ್ಟನ್ನು ರಟ್ಟು ಮಾಡುತ್ತದೆ.

ಸಂಸ್ಕೃತದ ದಕ್ಷಿಣ ಶಬ್ದದಲ್ಲಿ ರಹಸ್ಯವೇನೂ ಇಲ್ಲ. ಅದರರ್ಥ ಬಲ ಎಂದು. ಪೂರ್ವಕ್ಕೆ ಮುಖ ಹಾಕಿದರೆ ದಕ್ಷಿಣ ಬಲಕ್ಕಲ್ಲವೇ ಬರುವುದು? **ಉತ್ತರ** ಎಂಬ ಪದ ಮಾತ್ರ ಭೌಗೋಲಿಕ ಪರಿಸರದ ಸುದ್ದಿ ಹೇಳುತ್ತದೆ: **ಉತ್ತರ** ಎಂದರೆ ಎತ್ತರ. ಸಿಂಧು ಗಂಗೆಗಳ ಬಯಲಲ್ಲಿದ್ದ ಆರ್ಯರಿಗೆ ಹಿಮಾಲಯದ ತಪ್ಪಲು **ಉತ್ತರಕ್ಕೆ** ತಾನೆ ಇರುವುದು. ಹಾಗೇ ಅದು ಎತ್ತರ ದಿಕ್ಕು. ತಮಿಳರಿಗೆ ಎತ್ತರ **ಪಶ್ಚಿಮ**ವಾಗುತ್ತದೆ. ಆದಿ ಸಂಸ್ಕೃತ ಭಾಷಿಗಳಿಗೆ **ಎತ್ತರ** ಎಂದರೆ ಬಡಗು ದಿಕ್ಕು, ಹಾಗೆಯೇ ಇಂಗ್ಲಿಷಿನ **ದಕ್ಷಿಣಾರ್ಥಕ** South ಶಬ್ದ ಮೂಲತಃ Sunth (= ಸೂರ್ಯ ನದು) ಎಂದು. ಎಲಾ! ನಮಗೆ **ಸೂರ್ಯನ** ದಿಕ್ಕು ಪೂರ್ವವಾದರೆ ಇವರಿಗೆ ಅದು ದಕ್ಷಿಣವೆ? ಹೌದು. ಆ ದಿಕ್ಕಿಗೆ ಆ ಹೆಸರು ಕೊಡುವಾಗ ಇಂಗ್ಲಿಷ್ ಭಾಷಿಕರ ಮೂಲಪುರುಷರು ತುಂಬಾ ಎತ್ತರದ ಅಕ್ಷಾಂಶಗಳಲ್ಲಿ ಜೀವಿಸುತ್ತಿರಬೇಕು. ಅವರಿಗೆ ಸೂರ್ಯ ದಕ್ಷಿಣದಲ್ಲೇ ಮೂಡಿ ಆ ದಿಕ್ಕಿನಲ್ಲೇ ಸ್ವಲ್ಪ ಏರಿ ಮುಳುಗುವಂತೆ ಕಾಣುತ್ತಿದ್ದ.

— **ಪಾವೆಂ.**

# ಕ್ಷಿತಿಜ

ಈ ನಾಡ ಗಿರಿಕಂದರಗಳನ್ನು
ಸುತ್ತಿ ಸುಳಿವ ಸ್ವಚ್ಛ ತಿಳಿ ಗಾಳಿ
ನೀ ಸೆರಗನ್ನು ತೂರಿ ತೆರೆದಷ್ಟು
ಸ್ವಚ್ಛಂದವಲ್ಲ.

ಈ ಕೆರೆ ತೊರೆ ತುಟಿಗಳಲ್ಲರಳಿ
ಗಮಗಮಿಸುವ ಸ್ನೇಹದ ಕರೆ
ನಿನ್ನ ಮೋಹಬಲೆ ಕೆರಳಿಸುವಷ್ಟು
ಸ್ವಚ್ಛಂದವಲ್ಲ.

ಈ ಮಣ್ಣ ಮದನರತಿಯರ
ಮೈಮೆದುವಲ್ಲಿ ಮಾದಕ ಝರಿಯಲ್ಲಿ
ಹುಚ್ಚಾಗಿ ಕೊಚ್ಚುವ ಹರೆಯ
ನೀ ಕಣ್ಣಮಿಂಚಲ್ಲಿ ಸೆಳೆಯುವಷ್ಟು
ಸ್ವಚ್ಛಂದವಲ್ಲ

ಇದಕ್ಕೊಂದು ಛಂದವಿದೆ,
ವಿಶ್ವಾಸ ಬಂಧವಿದೆ,
ನಿಲ್ಲುವ ಸ್ಥೈರ್ಯವಿದೆ,
ಗೆಲ್ಲುವ ತ್ಯಾಗವಿದೆ.

ಏಕೆ ಕಲುಷಿತಗೊಳಿಸುತ್ತೀ
ಈ ಜಲ, ನೆಲ, ಅನಲ ಈ ತೆರ
ಕರೆ ಕರೆದು ಮೆರೆದು ಹಲ್ಕಿರಿದು?
ಸರಸವಾಡಬೇಕಾದ ನಾಡಲ್ಲ ಇದು
ನೀ ಗುನುಗುನಿಸಬೇಕಾದ ಹಾಡಲ್ಲ
ಹೋಗು ಹುಡುಕಿಕೋ ನಿನ್ನೆಡೆ ಮತ್ತೆಲ್ಲೊ
ಎತ್ತಿಕೊ ಹೆಡೆ ಬಿತ್ತಿಕೊ ವಿಷ
ಇರಲಿ ಬಿಡು
ನಮಗೆ ಲಕ್ಷ್ಮಣರೇಷೆ
ಸುತ್ತಿಕೊಳ್ಳಲಿ ನಮ್ಮ ಈ ಕ್ಷಿತಿಜ,
ಎತ್ತಿಕೊಳ್ಳಲಿ ಬಿಡು ಸಂಸ್ಕೃತಿ ದಿಗ್ಗಜ.

ಮಾಲತಿ ಪಟ್ಟಣಶೆಟ್ಟಿ

# ಹರ್ಷ

ವಿ. ವಿ. ಸಜ್ಜನ

ನಮ್ಮೂರಿಗೆ ಹೋಗಿ ಬಂದೆನೆಂದರೆ ನನ್ನ ಮನಸ್ಸಿಗೆ ಒಂದೆರಡು ದಿನ ನೆಮ್ಮದಿಯೇ ಇರುವದಿಲ್ಲ. ಹೀಗಾಗಿ ನಡುವೆ ಒಂದೆರಡು ವರ್ಷ ನಮ್ಮೂರಿಗೆ ಹೋಗುವುದನ್ನೇ ನಿಲ್ಲಿಸಿಬಿಟ್ಟೆ. ಆದರೂ ರಕ್ತ ಸಂಬಂಧ ಕೇಳಬೇಕಲ್ಲ. ಮತ್ತೆ ಊರಿಗೆ ಹೋಗುವೆನು, ಹೋಗಿ ಬಂದು ಮನಸ್ಸಿನ ನೆಮ್ಮದಿ ಕಳೆದುಕೊಂಡು ದಿನನಿತ್ಯದ ಕೆಲಸಗಳಲ್ಲಿ ಮಗ್ನನಾಗುವೆನು ಇತ್ತೀಚೆಗೆ ನನ್ನ ಜೀವನದ ಅವಿಭಾಜ್ಯ ಅಂಗವಾಗಿ ಬಿಟ್ಟಿತ್ತು. ಒಂದು ಸಲ ನಿರ್ಧರಿಸಿಬಿಟ್ಟೆ: "ಏನೇ ಆಗಲಿ, ನಮ್ಮೂರಿಗೆ ಹೋಗಬಾರದು; ಒಂದು ವೇಳೆ ಹೋದರೂ ಅದರಿಂದಾಗುವ ಎಲ್ಲಾ ಪರಿಣಾಮವನ್ನು ನಿರ್ಲಿಪ್ತ ಮನಸ್ಸಿನಿಂದ ಸ್ವೀಕರಿಸಬೇಕು; ವ್ಯಥೆಪಡಬಾರದು, ಎಂದು. ಆದರೆ ಒಂದು ತಿಂಗಳಲ್ಲಿಯೇ ಮತ್ತೆ ಊರದಾರಿ ಹಿಡಿಯಬೇಕಾಗಿ ಬಂತು.

ಈ ಸಲ ನಮ್ಮೂರಿಗೆ ಹೋಗಲು ಒಂದು ವೈಯಕ್ತಿಕ ಮಹತ್ವದ ಕೆಲಸವೇ ಕಾರಣ. ನಾನು ನೌಕರಿ ಸೇರಿ ಹದಿನೈದು ವರ್ಷ ಆಯಿತು. ಇಷ್ಟೇ ಸರ್ವೀಸಿನ ಗೆಳೆಯರನೇಕರು ಈಗಾಗಲೇ ಸ್ವಂತ ಮನೆ ಹೊಂದಿದ್ದಾರೆ. ನಿವೃತ್ತಿಯಾದ ನಂತರ ಇರಲು ಒಂದು ಮನೆ ಬೇಕಲ್ಲ! ನಾನೂ ಒಂದು ಗೂಡು ಕಟ್ಟಿಕೊಳ್ಳಲು ನಿಶ್ಚಯಿಸಿದೆ. ಈಗ ಅದು ಸಾಧ್ಯ

ಮಕ್ಕಳು ದೊಡ್ಡವರಾಗುತ್ತಾರೆ. ಖರ್ಚು ಸಹ ಬೆಳೆದು ಮನೆ ಮಾಡಿಕೊಳ್ಳುವದು ಅಸಾಧ್ಯದ ಮಾತಾಗುತ್ತದೆ," ಎಂದು ನನ್ನ ಗೆಳೆಯರು ನನಗೆ ಎಚ್ಚರಿಕೆ ನೀಡಿದರು. ಭವಿಷ್ಯತ್ತಿನ ಭೂತ ನನ್ನ ತಲೆ ತಿನ್ನತೊಡಗಿತು. ಸರಿ, ಮರುದಿನವೇ ನಾನು ಉಳಿತಾಯ ಮಾಡಿದ ಐದುಸಾವಿರ ರೂಪಾಯಿಗಳನ್ನು ತೆಗೆದುಕೊಂಡು ನಮ್ಮೂರಿಗೆ ಪ್ರಯಾಣ ಬೆಳೆಸಿದ್ದೆ. ಶಹರದಲ್ಲಿಯೆ ಇದ್ದು ಓದಿ ಬೆಳೆದು ಕೆಲಸ ಮಾಡುತ್ತಿರುವ ನನಗೆ ದೊಡ್ಡ ಊರಿನಲ್ಲಿಯೇ ಮನೆ ಮಾಡಿಕೊಳ್ಳುವದು ವಾಸಿ ಎನಿಸಿತು. ನಮ್ಮೂರ ಪಕ್ಕದ ಗದಗ ನಗರದಲ್ಲಿ ಮನೆ ಮಾಡಿಕೊಂಡರೆ ಮಕ್ಕಳ ವಿದ್ಯಾಭ್ಯಾಸಕ್ಕೂ ನನ್ನ ನಿವೃತ್ತ ಜೀವನಕ್ಕೂ ಅನುಕೂಲ. ಮಂಗಳೂರಿನಿಂದ ನಮ್ಮೂರಿಗೆ ಪ್ರವಾಸ ಮಾಡುವಾಗಲೆಲ್ಲ ನನಗೆ ತಲೆನೋವು. ಈಗಂತೂ ಹಣದ ಚಿಂತೆ. ಈಗ ಇರುವ ಐದು ಸಾವಿರಕ್ಕೆ ತಂದೆ ತಾಯಿಗಳಿಂದ ಪಡೆಯುವ ಸ್ವಲ್ಪ ಹಣ ಸೇರಿಸಿ ಒಂದು ಮನೆ ಜಾಗ ಖರೀದಿ ಮಾಡಬೇಕು. ನಂತರ ಸರಕಾರದಿಂದ ಸಾಲ ಪಡೆದು ಮನೆ ಕಟ್ಟಿಸಿಕೊಳ್ಳಬೇಕು. ಆದರೆ ತಂದೆ ತಾಯಿ ಸಹೋದರರು ನನಗೆ ಹಣ ಕೊಡುವುದೇ ಸಂಶಯ. ಅದೇ ನನ್ನ ಮನಸ್ಸನ್ನು ಕಾಡತೊಡಗಿತು. ಇದನ್ನೇ ವಿಚಾರಿಸುತ್ತ ಮಂಗಳೂರಿಂದ ಗದಗಿಗೆ ಬಂದೆ.

ಗದಗಿನಲ್ಲಿಳಿದಾಗ ಕಾಲೇಜ್ ಸಹಪಾಠಿಯೊಬ್ಬ

ಕೇಳಿದೆ, "ಗದಗಿನಲ್ಲಿ ಒಂದು ಸಣ್ಣ ಪ್ಲಾಟಿಗೆ ಅತಿ ಸೋವಿ ಅಂದರೆ ಎಷ್ಟಾಗಬಹುದು?"

"ಇಪ್ಪತ್ತು ಇಪ್ಪತ್ತೈದು ಸಾವಿರ..." ನನ್ನ ಗೆಳೆಯ ಹೇಳಿದ.

ನನ್ನ ನಾಲಿಗೆ ಒಣಗಿತು.

"ನಾನು ಕೇಳುವದು ಊರ ನಡುವಿನ ಸ್ಥಳವನ್ನಲ್ಲ, ಊರ ಹೊರಗಿನ ಜಾಗ. ಅದಕ್ಕೆಷ್ಟಾಗುವುದು?..."

"ಅದನ್ನೇ ನಾನು ಹೇಳಿದ್ದು. ಊರ ನಡುವಿನ ಜಾಗೆ ಆದರೆ ಐವತ್ತುಸಾವಿರ ಬೇಕು," ನನ್ನ ಗೆಳೆಯ ಸಲೀಸಾಗಿ ನುಡಿದ. ನನ್ನ ಕನಸಿನ ಮನೆ ಕುಸಿದು ಬಿತ್ತು. ನನ್ನ ಮುಖ ನೋಡಿ ಆತ ಮುಂದುವರಿಸಿದ, "ಯಾಕೋ ಚಿಂತಿ ಮಾಡ್ತಿ? ಕಾಲೇಜ್ ಲೆಕ್ಚರರ್ ಇದ್ದುಕೊಂಡೇ ನಾನು ಒಂದು ಮನಿ ಕಟ್ಟಿಸಿಕೊಂಡೆ. ಸರಕಾರಿ ಅಧಿಕಾರಿಯಾಗಿ ನಿನಗೆ ಆ ಕೆಲಸ ಅಸಾಧ್ಯ ಏನು? ನಿನ್ನ ಜಾಗೆಯಲ್ಲಿ ನಾನು ಇದ್ದಿದ್ರೆ ಮನೆ ಯಾಕೆ ಕಾರು ಸಹ ಖರೀದಿ ಮಾಡ್ತಿದ್ದೆ..."

"ಹೌದು ಬಿಡಪ್ಪ, ನೀನು ನಾನಲ್ಲವಲ್ಲ..." ಎಂದವನೆ ನಾನು ಮಾತು ಮುಗಿಯಬಯಸಿದೆ. ಸರಕಾರಿ ಅಧಿಕಾರಿಗಳು ಲಕ್ಷಗಟ್ಟಲೆ ಹಣ ಮಾಡಬಹುದೆಂದು ಅವನ ಗ್ರಹಿಕೆ. ಅನೇಕ ಸಲ ಆ ವಿಷಯವನ್ನು ನನ್ನೊಂದಿಗೆ ಹೇಳಿದ್ದ ಕೂಡ. ನನ್ನ ಗೆಳೆಯ ಪುನಃ ನುಡಿದ, "ದುಡ್ಡು ಮಾಡೋದು ಗೊತ್ತಿರದಿದ್ರೆ ಸರಕಾರಿ ನೌಕರಿಗೆ ಯಾಕೆ ಸೇರಿದೆ? ಕಾಲೇಜ್ ಲೆಕ್ಚರರಾಗಿ ಮುತ್ತಗೆ ಇರಬೇಕಿತ್ತು..." ಇನ್ನು ಅವನೊಂದಿಗೆ ಮಾತನಾಡಿ ಪ್ರಯೋಜನ ಇಲ್ಲ ಎನಿಸಿತು.

"ಆಯ್ತು, ನಾನು ಇನ್ನು ಬರ್ತೀನಿ. ನಮ್ಮೂರಿನ ಬಸ್ಸು ಹೊರಡುವ ವೇಳೆ ಆಯಿತು...." ಎಂದು ಮುಂದಿನ ಮಾತಿಗೆ ಕಾಯದೆ ಬಸ್ ಸ್ಟ್ಯಾಂಡಿಗೆ ನಡೆದೆ.

"ನಮ್ಮೂರು ಒಂದು ಸಣ್ಣ ಹಳ್ಳಿ. ಗದಗಿನಿಂದ ಖಾಸಗಿ ಬಸ್ಸು ಹಿಡಿಯಬೇಕು. ಅಂತೂ ನಮ್ಮೂರಿಗೆ ಹೋಗುವ ಬಸ್ಸಿನಲ್ಲಿ ಕುಳಿತೆ. ಬಸ್ಸು ಚಲಿಸತೊಡಗಿದಂತೆ ನನ್ನ ತಲೆಯಲ್ಲಿ ವಿಚಾರಗಳು ಉಕ್ಕತೊಡಗಿದವು. ಒಂದು ಚಿಕ್ಕ ಪ್ಲಾಟಿಗೆ ಇಪ್ಪತ್ತೈದು ಸಾವಿರ! ಎಲ್ಲಿಂದ ತರಬೇಕು? ಈ ಪ್ರಶ್ನೆಗೆ ಉತ್ತರ ಹುಡುಕತೊಡಗಿದೆ. ಪಿತ್ರಾರ್ಜಿತ ಆಸ್ತಿಯಲ್ಲಿ ನನಗೂ ಹಕ್ಕಿದೆ. ನನಗೆ ಬರುವ ಪಾಲಿನ ಆಸ್ತಿ ಮಾರಿದರಾಯಿತು ಎಂಬ ವಿಚಾರವೂ ಸುಳಿಯಿತು. ನಾನು ಇಲ್ಲಿಯವರೆಗೂ ದುಡಿದ ಹಣವನ್ನೆಲ್ಲಾ ತಂದೆ, ತಾಯಿ, ಸಹೋದರ–ಸಹೋದರಿಯರಿಗಾಗಿ ಖರ್ಚುಮಾಡಿದ್ದೇನೆ. ಈಗ ಅವರು ಸ್ವಲ್ಪವಾದರೂ ಕೊಡಲಿ. ಎಂದು ಮನಸ್ಸಿನಲ್ಲಿ ಯೋಚಿಸುತ್ತಾ ಊರು ತಲುಪಿದೆ. ಬಸ್ಸಿನಿಂದಿಳಿದು ಕೊಳಚೆ ದಾಟುತ್ತಾ ಪರಿಚಯಸ್ಥರಿಗೆ ನಮಸ್ಕರಿಸುತ್ತಾ ಸಂದಿಯಲ್ಲಿರುವ ನಮ್ಮ ಮನೆ ಪ್ರವೇಶಿಸಿದೆ.

ನಮ್ಮದು ಚಿಕ್ಕಮನೆ. ಮನೆ ತುಂಬ ಜನ. ನಾನು ನಿವೃತ್ತಿ ಹೊಂದಿದ ನಂತರ ಹೆಂಡತಿ ಮಕ್ಕಳೊಂದಿಗೆ ಇಲ್ಲಿ ಬಂದಿರಲು ಜಾಗೆ ಎಲ್ಲಿದೆ? ನನ್ನ ಎಣಿಕೆ ಪ್ರಾರಂಭವಾಯಿತು. ನಾನು ಚಿಕ್ಕವನಾಗಿದ್ದಾಗ ನಾನು ಮತ್ತು ನನ್ನ ಸಹೋದರರಿಬ್ಬರು ಈ ಮನೆಯಲ್ಲಿ ಆಡಿಕೊಂಡಿದ್ದೆವು. ಆಗ ಇದೇ ಮನೆ ನಮಗೆ ದೊಡ್ಡದಾಗಿ ಕಾಣುತ್ತಿತ್ತು. ನಾನು ಕಾಲೇಜು ಸೇರುವ ವೇಳೆಗೆ ನನ್ನ ಸಹೋದರ ಸಹೋದರಿಯರ ಸಂಖ್ಯೆ ಒಂಭತ್ತಕ್ಕೆ ಏರಿತು. ಈಗ ಸಹೋದರರ ಮಕ್ಕಳು ಸಹ ಅಲ್ಲಿಗೆ ಬಂದು ಆಡತೊಡಗಿದರು. ಪ್ರತಿ ರಾತ್ರಿ, ದೊಡ್ಡವರು ಮಾಳಿಗೆ ಮೇಲೆ ಅಥವಾ ಅಂಗಳದಲ್ಲಿ ಮಲಗಬೇಕು; ಮಕ್ಕಳು, ಹೆಂಗಸರು ಮನೆಯೊಳಗೆ ಮಲಗಬೇಕು. ಇದೇ ಮನೆಯಲ್ಲಿ ದನದ ಹಟ್ಟಿ. ಗುಂಯ್ ಎಂದು ಮುಖಕ್ಕೆ ಎರಗುವ ನೊಣಗಳು. ಇದೆಲ್ಲವನ್ನೂ ನೋಡಿ ನಾನು ಸ್ವಂತ ಮನೆ ಹೊಂದುವ ವಿಚಾರವನ್ನು ಇನ್ನಷ್ಟು ಬಲಪಡಿಸಿಕೊಳ್ಳತೊಡಗಿದೆ. ನಾನು ಮನೆಗೆ ಬಂದ ಸುದ್ದಿ ಕೇಳಿ ತಂದೆತಾಯಿಗಳು ಮನೆ ಸೇರಿದರು. ಮುಖಕ್ಕೆ ನೀರು, ಬಾಯಿಗೆ ಕಾಫಿ ಆಯಿತು. ಮಳೆ ಬೆಳೆ ವಿಚಾರವನ್ನು ನನ್ನ ತಂದೆ ಪ್ರಸ್ತಾಪಿಸತೊಡಗಿದರು. ನನ್ನ ಸಹೋದರರು ತಮ್ಮ ವ್ಯಾಪಾರದ ವಿಚಾರವನ್ನು ಎತ್ತಿದರು. ನಾನು ಸ್ವಲ್ಪ ಹೊತ್ತು ಸುಮ್ಮನಿದ್ದು ನೇರವಾಗಿ ನಿಷ್ಠುರವಾಗಿ ಹೇಳತೊಡಗಿದೆ:



"ನಾನು ಹಾಗೂ ಹೀಗೂ ಕಷ್ಟ ಪಟ್ಟು ವಿದ್ಯೆ ಕಲಿತು ಒಂದು ನೌಕರಿ ದೊರಕಿಸಿಕೊಂಡೆ. ಇಲ್ಲಿಯ ವರೆಗೆ ಸಹೋದರ ಸಹೋದರಿಯರ ವಿದ್ಯೆಯ ವೆಚ್ಚವನ್ನು ಸಹಿಸಿಕೊಂಡೆ. ನನ್ನ ಕೈಯಲ್ಲಿ ಬಿಡಿಗಾಸೂ ಉಳಿಯಲಿಲ್ಲ. ಪಿತ್ರಾರ್ಜಿತ ಆಸ್ತಿ ಯಿಂದ ಇಲ್ಲಿಯವರೆಗೂ ಒಂದು ಪೈಸೆ ಉತ್ಪನ್ನ ವನ್ನೂ ನಾನು ತೆಗೆದುಕೊಂಡಿಲ್ಲ. ಈಗ ಅಣ್ಣ ತಮ್ಮಂದಿರು ಆರ್ಥಿಕವಾಗಿ ಸುಧಾರಿಸಿದ್ದಾರೆ.

ನನಗೂ ಸಂಸಾರದ ಭಾರ ಬಿದ್ದಿದೆ. ಒಂದು ಸಣ್ಣ ಮನೆ ಕಟ್ಟಿಸಿಕೊಳ್ಳುವ ವಿಚಾರ ಮಾಡಿದ್ದೇನೆ. ನೀವು ಹಣದ ಸಹಾಯ ಮಾಡಬೇಕು" ಎಂದು ಅಲ್ಲಿ ಕುಳಿತವರೆಲ್ಲರ ಮುಖ ನೋಡಿದೆ. ಯಾರ ಮುಖದ ಮೇಲೂ ನನ್ನ ಮಾತಿನ ಪರಿಣಾಮ ಆಗಿರಲಿಲ್ಲ. ನನ್ನ ತಂದೆ ತಾಯಿಗಳು ಸುಮ್ಮನೆ ಕುಳಿತಿರುವದನ್ನು ಕಂಡು, ಥೆ ಮಕ್ಕಳು ದುಡಿದದ್ದನ್ನು ಸುಲಿಯುವದೇ ಇವರ ಕೆಲಸ ಎಂದೆನಿಸಿತು. "ಈವರೆಗೆ ನಿಮ್ಮಿಂದ ನನಗೇನೂ ಸಿಗಲಿಲ್ಲ. ಅದರ ಬದಲು ನೀವು ನನ್ನ ಸುಲಿಗೆ ಮಾಡುತ್ತಲೇ ಬಂದಿದ್ದೀರಿ" ಎಂದೆ. ನನ್ನ ಈ ಮಾತಿಗೆ ನನ್ನ ತಾಯಿ, "ನಮ್ಮ ಸಲುವಾಗಿ ನೀನು ಏನು ಖರ್ಚು ಮಾಡಿಯಪ್ಪಾ? ನಿನ್ನ ಅಣ್ಣತಮ್ಮಂದಿರು ಮತ್ತು ಅಕ್ಕ ತಂಗಿಯರ ಸಲುವಾಗಿ ಖರ್ಚು ಮಾಡಿದ್ದಿ. ಪುಣ್ಯದ ಕೆಲಸ." ನನ್ನ ತಾಯಿಯ ಮಾತುಗಳಿಂದ ನನ್ನ ಕೋಪ ಉಕ್ಕಿ ಬಂತು. ಎದ್ದು ನಿಂತು ಪುನಃ ಕುಳಿತುಕೊಂಡೆ. ನೇರವಾಗಿ ಮನೆಯ ವಿಷಯಕ್ಕೆ ಬಂದೆ. "ಉಳಿದವರಿಗೆ ಧರ್ಮ ಹೇಳುವದು ಸಾಕು. ನನಗೆ ಈಗ ಹಣ ಬೇಕು. ನಾನು ನೌಕರಿಯಿಂದ ನಿವೃತ್ತಿ ಹೊಂದಿದ ನಂತರ ನಾನೆಲ್ಲಿ ಇರಲಿ? ನನ್ನ ಪಾಲಿನ ಆಸ್ತಿ ಮಾರಿಯಾದರೂ ನನಗೆ ಹಣ ಕೊಡ್ರಿ." ಈ ಸಲ ನನ್ನ ಮಾತಿನಲ್ಲಿ ದೃಢತೆ ಇತ್ತು.

ನನ್ನ ಸಹೋದರ ಸಹೋದರಿಯರ ಮೇಲೆ ಈ ಮಾತಿನಿಂದ ಪರಿಣಾಮ ಆಗಿರಬೇಕು. ನನ್ನ ಸಹೋದರಿಯೊಬ್ಬಳು ಹೇಳಿದಳು, "ನಿಮ್ಮ ಅಣ್ಣ ಈ ವರ್ಷ ಒಂದು ಮನೆ ಖರೀದಿ ಮಾಡಿ ತನ್ನ ಹೆಂಡತಿ ಹೆಸರಿಗೆ ಬರೆಯಿಸಿಕೊಂಡ; ನಿನ್ನ ತಮ್ಮ ಒಂದು ಹೊಲ ಖರೀದಿ ಮಾಡಿಕೊಂಡ. ಅದರಂತೆ ನೀನು ಗಳಿಸಿದ ಹಣದಾಗ ಖರೀದಿ ಮಾಡಿಕೋಬೇಕಪ್ಪ. ನಮಗೆ ಹಣ ಕೇಳಿದ್ರ ಎಲ್ಲಿಂದ ತರಬೇಕು ? ಈಗಿನ ಕಾಲದಾಗ ರೈತರಿಗೆ ಏನು ಉತ್ಪನ್ನ ಇದೆ? ಮೇಲಾಗಿ ಈಗ ಬರಗಾಲ." ನನ್ನ ಸಹೋದರಿ ಹೇಳಿದ ವಿಷಯದಲ್ಲಿ ಸತ್ಯತೆ ಇತ್ತು. ನನ್ನ ಸಹೋದರರಿಬ್ಬರು ಸ್ವಂತ ಮನೆ ಹೊಲ ಮಾಡಿಕೊಂಡಿದ್ದರು. ಆದರೆ ನಾನು ಮಾತ್ರ ಖರ್ಚು ಮಾಡುತ್ತಾ ಬಂದೆ. ಒಂದು ಕ್ಷಣ ಅಲ್ಲಿ ಕುಳಿತವರನ್ನೆಲ್ಲಾ ವೀಕ್ಷಿಸಿದೆ. ಅವರೆಲ್ಲರೂ ದರೋಡೆಖೋರರಂತೆ ಕಂಡರು. ಹೆಂಡತಿ–ಮಕ್ಕಳ ಚಿತ್ರ ಕಣ್ಣೆದುರು ಕಂಡು ಮಾಯವಾಯಿತು. "ದೇವರೇ ನನ್ನನ್ನು ಕಾಪಾಡಬೇಕು," ನಾನು ಉದ್ಗರಿಸಿದೆ. ಅಲ್ಲಿಗೆ ಮಾತು ನಿಂತಿತು. ಕುಳಿತವರೆಲ್ಲರೂ ಎದ್ದು ತಮ್ಮ ತಮ್ಮ ಕೆಲಸಕ್ಕೆ ತೆರಳಿದರು. ನಾನು ಊಟ ಮಾಡಿ ಮಂಚದ ಮೇಲೆ ಮಲಗಿಕೊಂಡೆ. ಮನಸ್ಸಿಗೆ ಮಂಕು ಹಿಡಿದಂತಾಯಿತು. ಪ್ರವಾಸದ ಶ್ರಮದಿಂದ ಮೈಕೈ ನೋವಾಗಿತ್ತು. ಮನೆ ವಿಚಾರ ಬಿಟ್ಟು ಮಂಗಳೂರಿಗೆ ವಾಪಸ್ಸು ಹೋಗುವದು ಒಳ್ಳೆಯದೆಂದು ವಿಚಾರಿಸುತ್ತಿದ್ದ ಹಾಗೆ ನಿದ್ದೆ ಬಂದಿತು.

ನಿದ್ದೆಯಿಂದ ಎಚ್ಚರಾದಾಗ ನನ್ನ ತಂಗಿ ಕೇಳಿದಳು, "ಚಹ ಮಾಡಿ ಕೊಡ್ಲೇನಣ್ಣಾ?"

ಅಲ್ಲಿಯೇ ಇದ್ದ ತಂದೆ ಹೇಳಿದರು, "ಪ್ರವಾಸದಿಂದ ದಣಿವಾಗಿರಬೇಕು. ಇನ್ನಷ್ಟು ಹೊತ್ತು ಮಲಗಲಿ ಬಿಡು..."

"ನಿದ್ದೆ ಆಯಿತು, ಚಾ ತಾ," ಎಂದು ತಂಗಿಗೆ ಹೇಳಿದೆ. ಆಕೆ ಒಳ ಹೋದಳು. ಈಕೆಯ ವಿವಾಹ ಇನ್ನೂ ಆಗಿಲ್ಲ. ಅದೇ ಎಲ್ಲರಿಗೂ ಸಮಸ್ಯೆ ಆಗಿ ಕುಳಿತಿತ್ತು. ಎಲ್ಲರಿಗಿಂತಲೂ ನನಗೆ ಆ ವಿಷಯ ತಲೆ ತಿನ್ನುತ್ತಿತ್ತು. ತಂದೆಗೆ ಪ್ರಶ್ನೆ ಮಾಡಿದೆ, "ಎಲ್ಲಿಯಾದರೂ ವರ ಗೊತ್ತು ಮಾಡಿದಿರೇನು?" ಹಿಂದೂಸ್ತಾನಿ ರಾಗ ಹಾಡುವವರಂತೆ ಕೆಮ್ಮಿ, "ಅಂತೂ ಈಕೆಗೆ ವರ ಗೊತ್ತು ಮಾಡೀವಿ. ನಿನಗ ಪತ್ರ ಬರೆದು ತಿಳಿಸಬೇಕೆಂದು ಮಾಡಿದ್ದೆ. ಅಷ್ಟರಲ್ಲಿ ನೀನೇ ಬಂದಿ. ವರ ಹತ್ತಿರದ ಸಂಬಂಧದ್ದು. ಹದಿನೈದು ಸಾವಿರ ರೂಪಾಯಿ ವರದಕ್ಷಿಣೆ ಮೇಲೆ ಲಗ್ನದ ಖರ್ಚು. ಈ ವರ್ಷ ಲಗ್ನ ಮುಗಿಸಬೇಕೆಂದಿದ್ದೇವೆ." ತಂದೆಯ ಈ ಮಾತುಗಳು ನನಗೆ ದಿಗಿಲು ತಂದವು. ಗಾಳ ಇನ್ನು ನನಗೇ ಬೀಸುತ್ತೆ ಎಂದು ನಿಶ್ಚಯಿಸಿದೆ. ನಾನು ಕೇಳಿದೆ, "ಇಷ್ಟೊಂದು ಹಣ ಎಲ್ಲಿಂದ ತರುತ್ತೀರಿ?" ಪ್ರತಿಸಲದಂತೆ ಈ ಸಲವೂ ತಂದೆಯಿಂದ ಉತ್ತರ ಬಂತು. "ನೀವು ಅಣ್ಣತಮ್ಮಂದಿರು ಇದ್ದೀರಲ್ಲ." ಈ ಮಾತುಗಳನ್ನು ಕೇಳುತ್ತಿದ್ದಂತೆ ನನ್ನ ಹೊಟ್ಟೆಯಲ್ಲಿ ರಘಳ ಎದ್ದಿತು. ಆದರೆ ತಂಗಿಗೆ ಒಂದು ವರ ಸಿಕ್ಕಿತಲ್ಲ ಎಂಬ ಸಮಾಧಾನ ಬೇರೆ.

ಸಿಟ್ಟಿನಿಂದ ಹೇಳಿದೆ, "ಕೊಟ್ಟು ಕೊಟ್ಟು ನಾನು ಕೈ ಬರಿದು ಮಾಡಿಕೊಂಡಿದ್ದೀನಿ. ಈಗ ನನಗೆ ಮನೆ ಕಟ್ಟಿಕೊಳ್ಳಲು ಹಣ ಕೇಳಿದ್ರೆ, ನೀವು ಈ ನಾಟಕ ಪ್ರಾರಂಭ ಮಾಡಿದ್ದಿರಿ ಅಷ್ಟೇ..." ದೂರದಲ್ಲಿ ಕುಳಿತುಕೊಂಡು ನಮ್ಮ ಮಾತು ಆಲಿಸುತ್ತಿದ್ದ ತಾಯಿ ಹತ್ತಿರ ಬಂದು ನಿಂತುಕೊಂಡೇ ಹೇಳಿದಳು, "ಏನು ಮಾಡುವದಪ್ಪ? ನಿನ್ನ ಅಣ್ಣ-ತಮ್ಮಂದ್ರು ತಮ್ಮ ಹೆಂಡಂದಿರು, ಮಕ್ಕಳನ್ನು ಮಾತ್ರ ನೋಡಿಕೊಳ್ತಾರೆ. ನೀನೊಬ್ಬ ಮಾತ್ರ ನಮ್ಮನ್ನು ನೋಡಿಕೊಳ್ತಿ. ನೀನು ದೇವರಂಥ ಮನುಷ್ಯ. ಈಗ ತಂಗಿ ಲಗ್ನವೊಂದನ್ನು ಪೂರೈಸಿ ಬಿಡು." ನನ್ನ ಕಿಸೆಯಲ್ಲಿದ್ದ ರೂಪಾಯಿಗಳನ್ನು ಮುಟ್ಟಿ ನೋಡಿಕೊಂಡೆ. ನಮ್ಮೂರಿಗೆ ಬಂದಾಗೊಮ್ಮೆ ಕಿಸೆಯಲ್ಲಿದ್ದ ಹಣವನ್ನು ಖಾಲಿ ಮಾಡಿಕೊಂಡೇ ಹೋಗುವದು ಪರಿಪಾಠವಾಗಿತ್ತು. ಪ್ರತಿ ಸಲ ಒಂದೊಂದು ಕಾರಣವನ್ನು ನನ್ನ ತಂದೆತಾಯಿಗಳು ಮುಂದೊಡ್ಡುತ್ತಿದ್ದರು. ಅನೇಕ ಸಲ ಬಸ್ಸು ಚಾರ್ಜಿಗೆ ಸಹ ಹಣ ಉಳಿಯುತ್ತಿರಲಿಲ್ಲ. ಈ ಸಲವೂ ಪಾರಾಗುವ ಲಕ್ಷಣ ಕಂಡು ಬರಲಿಲ್ಲ. ಸಪ್ಪೆ ಮೋರೆ ಹಾಕಿಕೊಂಡು ಮಂಗಳೂರಿಗೆ ವಾಪಸ್ಸಾಗುವದು ತಪ್ಪುವದಿಲ್ಲವೆಂದು ಅನಿಸಿತು ನಾನು ಮಾತು ನಿಲ್ಲಿಸಿ ಯೋಚಿಸತೊಡಗಿದೆ, 'ಹೊಲಗಳಿಂದ ಬರುವ ಉತ್ಪನ್ನ ಎಲ್ಲಿ ಹೋಗುತ್ತೆ?' ಅಂತ. ಯೋಚಿಸುತ್ತಿದ್ದಂತೆ ತಲೆ ಬಿಸಿಯಾಗತೊಡಗಿತು. ನಾನು ಊರಿಗೆ ಬಂದದ್ದಕ್ಕಾಗಿ ನನ್ನನ್ನೇ ಶಪಿಸಿಕೊಂಡೆ. ಇನ್ನು ಗೆಳೆಯರನ್ನಾದರೂ ಮಾತಾಡಿಸಿಕೊಂಡು ಬರಬೇಕೆಂದು ಹೊರಗೆ ನಡೆದೆ.

ಹಳೆಯ ಗೆಳೆಯರನೇಕರು ಕೂಡಿ ಊರ ಕೆರೆಯ ದಂಡೆಯ ಮೇಲೆ ಕುಳಿತು ಮಾತನಾಡಲು ಹೊರಟೆವು. ದಾರಿಯಲ್ಲಿ ಒಬ್ಬ ಕೇಳಿದ, "ಏನ್ರೀ ನೀವು ಯಾವಾಗಲೂ ಗಂಟು ಮೋರೆ ಹಾಕಿಕೊಂಡಿರುತ್ತೀರಿ? ನಿಮ್ಮಂಗ ನನಗೆ ದೊಡ್ಡ ನೌಕರಿ ಇದ್ದರೆ ತಕ ತಕ ಕುಣಿದಾಡುತ್ತಿದ್ದೆ..." ನಾನು ನನ್ನ ಮುಖದ ಮೇಲೆ ಕೈಯಾಡಿಸಿಕೊಂಡು ಕಿರುನಗೆ ಬೀರಿದೆ. ನಾನು ಸರಕಾರಿ ಅಧಿಕಾರಿಯಾಗಿದ್ದರಿಂದ ಬಹಳ ಸುಖಿ ಎಂದು ತಿಳಿದುಕೊಂಡವರೆ ಇವರೆಲ್ಲ. "ನೌಕರಿ ಮಾಡುವವನಿಗೆ ನಿಶ್ಚಿತ ಆದಾಯ ಬರುತ್ತದೆ. ಅದರಿಂದ ಅನೇಕ ದೈನಂದಿನ ತೊಂದರೆಗಳು ದೂರವಾಗುತ್ತವೆ ಎಂಬುದು ನಿಜ. ಆದರೆ ಅಪಾಯ ಅಂದರೆ ನಿವೃತ್ತಿ ಆದ ಮೇಲೆ ಅವನ ಸಂಬಂಧಿಕರು ಅವನನ್ನು ಕಣ್ಣೆತ್ತಿ ಸಹ ನೋಡುವದಿಲ್ಲ. ದೂರದ ಗುಡ್ಡ ನುಣ್ಣಗೆ ಕಾಣಿಸುತ್ತದೆ ಅಷ್ಟೆ." ಎಂದು ಅವರ ಮುಖ ನೋಡತೊಡಗಿದೆ. ನನ್ನ ಮಾತನ್ನು ಯಾರೂ ನಂಬಿದಂತೆ ಕಾಣಲಿಲ್ಲ, ಒಬ್ಬ, "ಆ ಕತೆ ಇರ್ಲಿ ಸಾಹೇಬ್ರೆ, ಈಗ ನಮ್ಮೂರ ಹೈಸ್ಕೂಲು ಆರ್ಥಿಕ ತೊಂದರೆಯಲ್ಲಿದೆ. ನೀವು ಕಡಿಮೆಯೆಂದರೂ ಒಂದು ಸಾವಿರ ರೂಪಾಯಿ ಡೊನೇಟ್ ಮಾಡಬೇಕು." ಎಂದ.

ನನಗೆ ಅನುಕೂಲ ಅಗಲಿ, ಆದಷ್ಟು ಸಹಾಯ ಮಾಡ್ತೀನಿ" ಎಂದೆ.

ಇನ್ನು ಇಲ್ಲಿ ಕುಳಿತರೆ ಬರಿ ಇಂಥ ಮಾತುಗಳೇ ಬರುತ್ತವೆಂದು ಖಾತ್ರಿ ಆಯಿತು. ಮಾತಿನ ದಾರಿ ಬದಲಾಯಿಸಿದೆ. ಕ್ಷೇಮ ಸಮಾಚಾರ ಮಾತನಾಡಿ ಮನೆಗೆ ಹೋಗಲು ಎದ್ದು ನಿಂತೆ.

ದಾರಿಯಲ್ಲಿ ಪರಿಚಯಸ್ಥ ಯಜಮಾನರೊಬ್ಬರು ನನ್ನನ್ನು ಕಂಡು, ಕರೆದು ಕುಳ್ಳಿರಿಸಿದರು. ಕ್ಷೇಮ ಸಮಾಚಾರದ ವಿಷಯ ಮುಗಿದ ನಂತರ, "ಕಷ್ಟಪಟ್ಟು ಓದಿ ಒಂದು ಜೀವನದ ದಾರಿ ನೋಡಿಕೊಂಡೆಪ್ಪಾ. ಭಲೆ ಅನ್ನಬೇಕು ನಿನಗ. ನನ್ನ ಎರಡು ಮಕ್ಕಳು ಎರಡೆರಡು ಸಲ ಕೂತು ಮೆಟ್ರಿಕ್ ಪಾಸು ಮಾಡಿದ್ರು. ಈಗ ನಾಲ್ಕು ವರ್ಷ ಕಳೆದರೂ ಯಾವ ನೌಕರಿ ಸಿಗಲಿಲ್ಲ. ನೀನು ಅಲ್ಲಿ ಯಾರಿಗಾದರೂ ಹೇಳಿ ನಮ್ಮ ಮಕ್ಕಳಿಗೆ ನೌಕರಿ ಕೊಡಿಸಿದರೆ ನಿನಗೆ ಪುಣ್ಯ ಬರುತ್ತೆ" ಎಂದು ಹೇಳಿ ಮಾತು ಮುಗಿಸಿದ. "ನಾನು ಪ್ರಯತ್ನ ಮಾಡತೇನ್ರಿ, ಎಲ್ಲಿಯಾದರೂ ನೌಕರಿ ಜಾಗೆಗಳು ಖಾಲಿ ಇದ್ದರೆ ನಿಮಗೆ ಖಂಡಿತ ತಿಳಿಸ್ತೀನಿ." ಎಂದು ಹೇಳಿ ಹೊರಟು ಮನೆ ಸೇರಿ ಕುಳಿತುಕೊಂಡೆ. ನನ್ನ ಕನಸಿನ ಮನೆಯ ವಿಷಯ ಮರೆತು ಹೋಗಿತ್ತು. 'ನಾನು ಜನರಿಂದ ಏನು ಅಪೇಕ್ಷಿಸುತ್ತೇನೆ? ಜನರು ನನ್ನಿಂದ ಏನು ಅಪೇಕ್ಷಿಸುತ್ತಾರೆ?' ಈ ಪ್ರಶ್ನೆಗಳಿಗೆ ನಾನು ಉತ್ತರ

ಕೊಡಲು ಚಡಪಡಿಸತೊಡಗಿದೆ. 'ನೀನು ಸ್ವಾರ್ಥಿ' ಎಂದು ನನ್ನ ಅಂತರಂಗ ನನ್ನನ್ನು ಚುಚ್ಚ ತೊಡಗಿತು. ನಾನು ನನ್ನ ಮನಸ್ಸನ್ನು ಹಿಡಿತದಲ್ಲಿ ತರಲು ಪ್ರಯತ್ನಿಸಿದೆ. "ಜಗತ್ತಿನಲ್ಲಿ ಪ್ರತಿ ಜೀವವೂ ತನ್ನ ಮತ್ತು ತನ್ನ ಸಂತತಿಯ ಅಸ್ತಿತ್ವಕ್ಕೆ ಹೋರಾಡಬೇಕಾಗುತ್ತದೆ," ಎಂದು ಬಿಟ್ಟೆ. ಈ ಮಾತು ನನ್ನ ಎದುರಿಗೆ ಕುಳಿತ ತಂದೆಗೆ ಸ್ಪಷ್ಟವಾಗಿ ಕೇಳಲಿಲ್ಲವೇನೋ ಅವರು ಕೇಳಿದರು. "ಏನಂದೆಪ್ಪಾ?"...

"ಏನೂ ಇಲ್ಲ" ಎಂದು ನಾನು ಹೇಳಿ ವಾಸ್ತವ ಪ್ರಪಂಚಕ್ಕೆ ಬಂದಿಳಿದೆ. ಮತ್ತೊಮ್ಮೆ ಚಪ ಆಯಿತು. ಈಗಾಗಲೇ ರಾತ್ರಿಯಾಗಿತ್ತು. ನಮ್ಮ ದೊಡ್ಡಮ್ಮ ಹೊಲದಿಂದ ಮನೆಗೆ ಹಿಂದಿರುಗಿದಳು. "ಯಾವಾಗ ಬಂದೆಪ್ಪ? ಹೆಂಡ್ತಿ ಮಕ್ಕಳನ್ನು ಕರೆದು ಕೊಂಡು ಬಂದೀ ಏನು?" ಎಂದು ಕೇಳಿದಳು. ನಾನು ಇಲ್ಲ ಎಂದು ಹೇಳಿದೆ. "ಕರಕೊಂಡು ಬರಬೇಕಿತ್ತಪ್ಪಾ. ಅವರನ್ನ ನೋಡ್ದೆ ಬಹಳ ದಿನ ಆಯಿತು," ಎಂದಳು. ನಾನು ಮಾತನಾಡದೆ ಸುಮ್ಮನೆ ಕುಳಿತೆ ಎಲೆ ಅಡಿಕೆ ಜಗಿ ಯುತ್ತಾ, ನನ್ನ ದೊಡ್ಡಮ್ಮ ತನ್ನ ಕತೆ ಬಿಚ್ಚಿದಳು. "ನಾನು ಏಳು ವರ್ಷದ ಚೋಟು ಹುಡುಗಿ ಇದ್ದಾಗ ನನ್ನ ಅಪ್ಪ ಅಮ್ಮ ನನಗ ಲಗ್ನ ಮಾಡಿದ್ರು. ಲಗ್ನ ಆದ ಒಂದು ವರ್ಷದಾಗ ನನ್ನ ಗಂಡ ಸತ್ರ. ಸಂಸಾರ ಅಂದ್ರ ಏನು ಅಂತ ತಿಳಿಯದೆ ಮುಪ್ಪಾದೆ. ನೀವ್ಗ ಮಕ್ಕಳು ಎಂದು ಕೊಂಡು ದುಡಿಯುತ್ತಾ ಬಂದೆ. ಶಕ್ತಿ ಇರೊ ವರೆಗೂ ದುಡಿದದ್ದಾಯಿತು. ಇನ್ನು ನಾನು ಸಾಯಬೇಕಪ್ಪಾ, ದೇವರ ಪಾದಾ ಸೇರಬೇಕು. ಸಾಕು ಈ ನರಜನ್ಮ. ದೇವರ ಪಾದದಡಿ ಕಲ್ಲಾಗಿರಲಿ ನನ್ನ ಜೀವ. ಬೇಡ ಪುನಃ ಈ ನರಜನ್ಮ..." ಆಕೆಯ ಒಂದೊಂದು ಮಾತುಗಳು ನನಗೆ ಮಿಂಚು ಹೊಡೆದಂತೆ ಭಾಸವಾಯಿತು. ಹೌದು, ಆಕೆ ನಮ್ಮ ಸಲುವಾಗಿ ಮುಪ್ಪಾಗುವ ವರೆಗೂ ದುಡಿದಳು. ನನ್ನ ಹೆಂಡತಿ ಮಕ್ಕಳಿಂದ ಬಿಡಿಸುವ ನಾನೆಷ್ಟು ಸ್ವಾರ್ಥಿ? ನನ್ನ ದೊಡ್ಡಮ್ಮ ನದೆಂತಹ ಸ್ವಾರ್ಥ ತ್ಯಾಗ. ಹಿಂದೆ ನನ್ನ ಅಜ್ಜಿ ಯರಿಬ್ಬರು ನನ್ನ ದೊಡ್ಡಮ್ಮನ ರೀತಿ ಬಾಲ ವಿಧವೆಯರಾಗಿ ನೂರು ವರ್ಷ ಬಾಳಿ ಅಸು ನೀಗಿದರು. ನನ್ನ ದೊಡ್ಡಮ್ಮ ಹೇಳಿದ ಮಾತು ಗಳನ್ನೇ ಅವರು ಅನೇಕ ಸಲ ಹೇಳಿದ್ದು ನನಗೆ ಜ್ಞಾಪಕಕ್ಕೆ ಬಂದಿತು. ಅವರ ನಿರ್ಲಿಪ್ತ ಮುಖ ಗಳು ನನ್ನ ಕಣ್ಣೆದುರಿಗೆ ನಿಂತವು. ಹೌದು. ಇದೇ ವಿಧವೆಯರು ದುಡಿದದ್ದರಿಂದ ಇಂದು ನಮಗೆ ಸ್ವಲ್ಪವಾದರೂ ಆರ್ಥಿಕ ಭದ್ರತೆ ಬಂದಿತ್ತು. ನನ್ನ ವಿದ್ಯಾಭ್ಯಾಸದ ಖರ್ಚಿನ ಬಹುಭಾಗವನ್ನು ನನ್ನ ದೊಡ್ಡಮ್ಮನೇ ನಿಭಾಯಿಸಿಕೊಂಡಿದ್ದಳು. ನಿಸ್ವಾರ್ಥ ದಿಂದ ದುಡಿಯುವ ಜನ ಕೆಲವರು. ಅವರು ದುಡಿದು ಗಳಿಸಿದ್ದನ್ನು ತಿಂದು ತೇಗಿ ಬೆಳೆದವರು ಅನೇಕರು. ಇದೇ ನಮ್ಮ ಮನೆತನದ ಕತೆಯಾ ಗಿತ್ತು. ನನ್ನ ದೊಡ್ಡಮ್ಮ ಇನ್ನೂ ಏನನ್ನೋ ಮಾತನಾಡುತ್ತಿದ್ದಳು. ನನ್ನ ಚಿಂತೆಗಳು ಗಾಳಿಗೆ ತೂರಿಹೋದವು. ನನ್ನ ಮನೆಯ ವಿಷಯ ಮರೆತುಬಿಟ್ಟೆ.

ಬೆಳಿಗ್ಗೆ ನಾನು ಮಂಗಳೂರು ಪ್ರವಾಸದ ಸಿದ್ಧತೆ ನಡೆಸಿದೆ. ಐದು ಸಾವಿರ ರೂಪಾಯಿ ಗಳನ್ನು ಎದುರಿಗೆ ಕುಳಿತಿದ್ದ ತಂದೆಯ ಕೈಯಲ್ಲಿ "ತಂಗಿಯ ಲಗ್ನದ ಖರ್ಚಿಗೆ," ಎಂದು ಕೊಟ್ಟೆ. ಅಷ್ಟರಲ್ಲಿ ನನ್ನ ಪ್ರಾಯಸ್ಥ ಅಣ್ಣ ತಮ್ಮ ಅಲ್ಲಿಗೆ ಬಂದರು. ಅವರನ್ನು ಕಂಡಾಕ್ಷಣ ನನ್ನ ಪಿತ್ತ ನೆತ್ತಿಗೇರಿತು. 'ಇದೀಗ ಸ್ವಂತ ಮನೆ ಮತ್ತು ಹೊಲ ಹೊಂದಿದ್ದಾರೆ. ಕಿರಿಯ ಸಹೋದರರ ವಿದ್ಯಾಭ್ಯಾಸಕ್ಕೆ ಒಂದು ಕಾಸನ್ನೂ ಕೊಟ್ಟವರಲ್ಲ. ನಾನು ಪುನಃ ಮೋಸ ಹೋದೆ' ನಾನು ತಲೆ ಬಿಸಿ ಮಾಡಿಕೊಂಡೇ ಪ್ರಯಾಣ ಬೆಳೆಸಿದೆ.

ಬಸ್ಸಿನಲ್ಲಿ ಪ್ರಯಾಣ ಮಾಡುವ ವೇಳೆಯಲ್ಲಿ ನನ್ನ ಮನೆಯ ಬಗ್ಗೆ ಆಗಲಿ ಅಥವಾ ನನ್ನ ಬಂಧುಗಳ ಬಗ್ಗೆ ಆಗಲಿ ವಿಚಾರಗಳೇ ಬರ ತೊಡಗಿದಾಗ ಆ ವಿಷಯ ಮರೆಯಲು ಪತ್ರಿಕೆ ಗಳನ್ನು ಓದತೊಡಗಿದೆ. ಆದರೂ ಅಕ್ಷರಗಳ ಮಧ್ಯದಲ್ಲಿ ನನ್ನ ಬಂಧುಗಳ, ಗೆಳೆಯರ ಮುಖ ಗಳು ಆಗಾಗ ಕಾಣಿಸತೊಡಗಿದವು. ಪತ್ರಿಕೆ ಮುಚ್ಚಿಟ್ಟು ಬಸ್ಸಿನ ಕಿಡಕಿಯಿಂದ ಹೊರ ಜಗತ್ತು ನೋಡತೊಡಗಿದೆ. ದಾರಿಯುದ್ದಕ್ಕೂ ಹಸಿರು ಗದ್ದೆ, ಗಿಡಮರಗಳು,

ಹಸಿರು ಗೆರೆಗಳು ನನ್ನ ಮನಸ್ಸಿನ ಉದ್ವೇಗವನ್ನು ಶಾಂತಗೊಳಿಸಿದವು. ದಾರಿಯಲ್ಲಿ ಬಸ್ಸೊಂದು ಕಾರಿಗೆ ಡಿಕ್ಕಿ ಹೊಡೆದು ಉರುಳಿ ಬಿದ್ದಿತ್ತು. ಹಿಂದಿನ ದಿನ ಕಾರಿನಲ್ಲಿದ್ದ ನಾಲ್ವರು ಸ್ಥಳದಲ್ಲಿ ಸತ್ತರೆಂದು ಬಸ್ಸಿನಲ್ಲಿ ಕುಳಿತವರೊಬ್ಬರು ಹೇಳಿದರು. ನನಗೆ ಜೀವನದ ಅಸ್ಥಿರತೆಯು ಪಕ್ಕನೆ ಹೊಳೆಯಿತು. ನನ್ನ ಚಿಂತೆ ದುಃಖಗಳಿಗೆ ಕಾರಣಗಳೇ ಇಲ್ಲ. ಅರ್ಥವಿಲ್ಲವೆನಿಸಿತು. ನಾನು ಹಿಂದೆ ನೀರಿನಲ್ಲೊಮ್ಮೆ ಮುಳುಗಿ ಬೇರೊಬ್ಬರ ಸಹಾಯದಿಂದ ಬದುಕಿ ಉಳಿದದ್ದು ಸೈಕಲ್ಲಿನ ಮೇಲಿಂದ ಎತ್ತರ ಸ್ಥಳದಿಂದ ಕೆಳಗೆ ಬಿದ್ದು ಅಕಸ್ಮಾತ್ ಬದುಕಿ ಉಳಿದದ್ದು ಮತ್ತೊಮ್ಮೆ ಅಡಕೆ ಗಂಟಲೊಳಗೆ ಸಿಕ್ಕಿ ಉಸಿರು ಕಟ್ಟಿದ್ದು ಎಲ್ಲವೂ ಒಂದಾದ ನಂತರ ಒಂದು ಜ್ಞಾಪಕಕ್ಕೆ ಬಂದವು. ಕುಮಟಾ ಬಸ್ ಸ್ಟ್ಯಾಂಡಿನಲ್ಲಿ ಕಾಫಿಗೆಂದು ಇಳಿದ ಪ್ರಯಾಣಿಕರೊಂದಿಗೆ ನಾನೂ ಹೋಟೆಲು ಪ್ರವೇಶಿಸಿದೆ. ನನ್ನೆದುರಿನ ಟೇಬಲ್ಲಿನಲ್ಲಿ ಕುಳಿತ ಆ ಹೆಂಗಸಿನ ಮೈಮೇಲೆ ಕಡಿಮೆ ಎಂದರೂ ಹದಿನೈದು ತೊಲೆ ಬಂಗಾರ ಇರಬಹುದು. ನನ್ನ ಹೆಂಡತಿಯ ಜ್ಞಾಪಕ ಆಯಿತು. ತಾಳಿಯನ್ನು ಬಿಟ್ಟರೆ ಹೇಳಿಕೊಳ್ಳುವಂತಹ ಬೇರೆ ಬಂಗಾರದ ಒಡವೆಯೇ ಇಲ್ಲ! ಕಾಫಿ ಮುಗಿಸಿ ಪುನಃ ಬಸ್ಸೇರಿ ಪ್ರಯಾಣ ಬೆಳೆಸಿದೆ. ಮುಂದೆ ಸ್ವಲ್ಪ ದೂರ ಪ್ರಯಾಣ ಬೆಳೆಸಿದ ನಂತರ ಬಸ್ಸು ಒಮ್ಮಿಂದೊಮ್ಮೆಲೆ ಮೊಂಡಾಟ ಮಾಡುತ್ತ ನಿಂತು ಬಿಟ್ಟಿತು. ಪ್ರಯಾಣಿಕರೆಲ್ಲರೂ ಇಳಿದರು.

ಬಸ್ಸು ಚಾಲಕ ಇಂಜಿನ್ ದುರಸ್ತಿ ಮಾಡತೊಡಗಿದ. ಕೆಲ ಬೆಸ್ತರು ಸಮುದ್ರದ ಬಲೆಯನ್ನು ನೀರಿನಿಂದ ಹೊರಗೆ ಎಳೆದುಕೊಂಡು ಬರುತ್ತಿದ್ದರು. ಬೆಳ್ಳಿಯ ರಾಶಿಯಂತೆ ಮೀನುಗಳು ಬಲೆಯಲ್ಲಿ ಬಿದ್ದಿದ್ದವು. ಕೆಲವೊಂದು ಹಾರುತ್ತಿದ್ದವು. ಅವುಗಳನ್ನು ಬೆಸ್ತರು ತೆಗೆದು ಬುಟ್ಟಿಯಲ್ಲಿ ಹಾಕುತ್ತಿದ್ದರು. ಅಷ್ಟು ಜನ ಇದ್ದರೂ ಕಾಗೆಗಳು ದಾಳಿ ನಡೆಸಿ ಒಂದೆರಡು ಮೀನುಗಳನ್ನು ಬಾಯಲ್ಲಿ ತೆಗೆದುಕೊಂಡು ಹಾರುತ್ತಿದ್ದವು. ಕಾಗೆಗಳು ಬಾಯಲ್ಲಿ ಮೀನು ಹಿಡಿದು ದೂರದಲ್ಲಿ ಕುಳಿತಾಗ ಅಲ್ಲೇ ಇದ್ದ ನಾಯಿಗಳು ಅವುಗಳನ್ನು ಬೆನ್ನಟ್ಟುತ್ತಿದ್ದವು. ಪ್ರಯಾಣಿಕರೆಲ್ಲ ಇದನ್ನು ಮೋಜಿನಿಂದ ನೋಡತೊಡಗಿದರು. ಬಲವಿದ್ದದ್ದು ಬದುಕುತ್ತೆ ಅಂತ



"[illegible]"

ಡಾರ್ವಿನ್ ಹೇಳಿದ್ದು ಸುಳ್ಳಲ್ಲ. ಮೀನು, ಬೆಸ್ತರು, ಕಾಗೆಗಳು ಮತ್ತು ನಾಯಿಗಳು. ಇವುಗಳಲ್ಲಿ ಯಾರೊಂದಿಗೆ ನನ್ನನ್ನು ಹೋಲಿಸಿಕೊಳ್ಳಬೇಕೆಂದು ವಿಚಾರಿಸತೊಡಗಿದೆ. ಅಷ್ಟರಲ್ಲಿ ಬಸ್ಸು ಚಾಲಕ ಹಾರ್ನ್ ಕೊಟ್ಟ. ಬಸ್ಸು ದುರಸ್ತಿ ಆಗಿತ್ತು. ಪ್ರಯಾಣಿಕರೆಲ್ಲರೂ ಬಸ್ಸು ಏರಿದರು. ಬಸ್ಸು ಚಲಿಸಿತು.

*

ಮಂಗಳೂರಿನಲ್ಲಿ ಮನೆಗೆ ಬಂದಾಗ ಕತ್ತಲಾಗಿತ್ತು. ಹೆಂಡತಿಯ ಪ್ರಶ್ನೆಗಳನ್ನು ಎದುರಿಸಲು ತಕ್ತ ಇಲ್ಲದೆ ಸುಮ್ಮನೆ ಅತ್ತಿತ್ತ ಮನೆಯಲ್ಲಿ ಅಡ್ಡಾಡುತ್ತಿದ್ದೆ. ಕೊನೆಗೆ ಹೆಂಡತಿ ಕೇಳಿದಳು, "ಮನೆ ಜಾಗ ಖರೀದಿ ಮಾಡಿದ್ರೇನು?" ನಾನು, "ಇಲ್ಲ" ಎಂದೆ. "ಹೋಗಲಿ ಹಣವನ್ನಾದರೂ ವಾಪಸ್ಸು ತಂದೀರಲ್ಲಾ ?" ಪುನಃ ಬಂತು ಹೆಂಡತಿಯ ಪ್ರಶ್ನೆ. "ತಂಗಿಯ ಲಗ್ನಕ್ಕೆ ಹಣ ಕೊಟ್ಟು ಬಂದೆ" ಎಂದೆ. ಒಂದು ನಿಮಿಷ ಮನೆಯಲ್ಲಿ ಮೌನ ಆವರಿಸಿತು. ಮಕ್ಕಳು ಕೋಣೆಯೊಂದರಲ್ಲಿ ಆಡುತ್ತಿದ್ದರು. ನನ್ನ ಹೆಂಡತಿಯ ರಾಗ ಪ್ರಾರಂಭವಾಯಿತು. "ದುಡಿದದ್ದನ್ನೆಲ್ಲಾ ಅಣ್ಣತಮ್ಮಂದಿರಿಗೆ, ಅಕ್ಕತಂಗಿಯರಿಗೆ ಕೊಟ್ಟು ಮಕ್ಕಳ ಕೈಗೆ ಕರಟ ಕೊಡ್ರಿ." ಮುಖಕ್ಕೆ ಹೊಡೆದಂತೆ ಬಂತು ಮಾತು. ನನಗೆ ಉತ್ತರ ಕೊಡಲು ಶಬ್ದ ಬರಲಿಲ್ಲ. 'ನಾನು ಏನು ಮಾಡಲು ಹೋದೆ? ಏನನ್ನು ಮಾಡಿ ಬಂದೆ?' ಪ್ರಶ್ನಿಸಿಕೊಂಡೆ. ಮತ್ತೆ ಮೋಸಹೋದೆನೆಂಬ ಭಾವನೆಯುಂಟಾಗಿ ಮನದಲ್ಲಿ ಕಸಿವಿಸಿ ಮತ್ತು ಹತಾಶಭಾವ ಮೂಡಿತು. ಹೊರಗಿನ ಸೆಕೆಗೆ ಪೈಪೋಟಿಯಾಗಿ ಮನಸ್ಸಿನ ಉದ್ವೇಗ, ಸೆಕೆ ಏರತೊಡಗಿತು. ಹಿತ್ತಲಬಾಗಿಲಿನಿಂದ ಹೊರ ಬಂದು ಗಿಡದ ಅಡಿಯಲ್ಲಿ ಕುಳಿತುಕೊಂಡೆ. ಸುತ್ತಲೂ ಕತ್ತಲೆ ಆವರಿಸಿತ್ತು. ಮುಂಜಾನೆಯಿಂದ ಸಂಜೆಯವರೆಗೆ ಪ್ರವಾಸ ಮಾಡಿದ್ದರಿಂದ ಮೈಯೆಲ್ಲಾ ನೋಯುತ್ತಿತ್ತು. ಈಜುವಾಗ ನಡುನೀರಿನಲ್ಲಿ ಕೈಸೋತಂತೆ ಆಯಿತು ನನಗೆ. ದಡ ಸೇರುವದು ಯಾವಾಗ? ನನ್ನ ಚಿಕ್ಕಮಕ್ಕಳು ಪುನಃ ನನ್ನಂತೆ ನಾನಾ ಕಷ್ಟಗಳಿಗೆ ಗುರಿಯಾಗಬೇಕೆ? ನನ್ನ ಯೋಗಕ್ಷೇಮ ಯಾರೂ ಕೇಳುವವರಿಲ್ಲವೆ? ನಾನು ಈ ಜಗತ್ತಿನಲ್ಲಿ ಒಬ್ಬಂಟಿಗನೆ? ಕಾರ್ಗತ್ತಲಲ್ಲಿ ಗೊಂಡಾರಣ್ಯದಲ್ಲಿ ಒಬ್ಬಂಟಿಗನಾಗಿ ಅಡ್ಡಾಡುತ್ತಿರುವಂತೆ ಅನಿಸಿತು. ಭಯ ಡೊಳ್ಳಿನ ನಾದನಂತೆ 'ಡುಂ'ಗುಡ ತೊಡಗಿತು. ನನ್ನನ್ನೇ ನಾನು ಮರೆತು ಕತ್ತಲಲ್ಲಿ ಕರಗಿ ಆಕಾಶದೆಡೆ ಜಾರಿಹೋಗುವಂತೆ ಭಾಸವಾಯಿತು. ತಟ್ಟನೆ ಕೊರಳಿಗೆ ಕೋಮಲ ಸ್ಪರ್ಶ ಆಯಿತು. ಬೆಚ್ಚಿಬಿದ್ದು ಹೊರಳಿ ನೋಡಿದಾಗ ನನ್ನ ಚಿಕ್ಕಮಗ ಹರ್ಷ ನನ್ನ ಕೊರಳಿಗೆ ಹಿಂದಿನಿಂದ ಬಂದು ಜೋತು ಬಿದ್ದಿದ್ದ. ಹೊಳೆಯುವ ಕಣ್ಣುಗಳು! ನಗುವ ಮುಖ! ಮಗನನ್ನು ತೋಳಿನಲ್ಲೆಳೆದುಕೊಂಡು ಅಪ್ಪಿದೆ. ಹೌದು. ಹಿಂದೆ ಹರ್ಷ ಚಕ್ರವರ್ತಿಯು ಆಗದಾಂಗ್ಗೆ ತಾನು ಗಳಿಸಿದ್ದೆಲ್ಲವನ್ನೂ ಬಡಬಗ್ಗರಿಗೆ ದಾನಮಾಡುತ್ತಿದ್ದನಂತೆ ಮೈಮೇಲಿನ ಬಟ್ಟೆಗಳನ್ನು ಸಹ. ಪ್ರಪಂಚದ ಮೋಹದಿಂದ ಬಿಡುಗಡೆಯಾಗಿ ಪರಮಾತ್ಮನ ಸಂಪರ್ಕ ಪಡೆಯಲು ಹೀಗೆ ಮಾಡುತ್ತಿದ್ದನಂತೆ. ಆ ಹರ್ಷನ ನೀತಿ ನನಗೆ ಹಿಡಿಸಿತ್ತು. ಅದನ್ನು ಅನುಸರಿಸಲೆಂದು, ನೆನಪಿಸಿಕೊಳ್ಳಲೆಂದು ನನ್ನ ಮಗನಿಗೆ ಹರ್ಷ ಎಂದು ಹೆಸರಿಟ್ಟಿದ್ದೆ. ಪುನಃ ಮಗನ ಮುಖ ನೋಡಿದೆ. ಅವನ ಕಣ್ಣುಗಳು ಹೊಳೆಯುತ್ತಿದ್ದವು. ಪೂರ್ವ ದಿಕ್ಕಿನಲ್ಲಿ ಚಂದ್ರ ಆಕಾಶದತ್ತ ಪ್ರಯಾಣ ಬೆಳೆಸಿದ್ದ. ಎದ್ದು ನಿಂತು ಮುಂದೆ ಬಂದು ಆಕಾಶದತ್ತ ನೋಡಿದೆ. ಚಿಕ್ಕೆಗಳು ನನ್ನನ್ನು ನೋಡಿ ಹರ್ಷದಿಂದ ನಗುತ್ತಿದ್ದವು. ಹರ್ಷಗೊಂಡ ದೇಹ ಮನಸ್ಸುಗಳೆರಡೂ ತಂಪುಗೊಂಡು ದೇಹದಲ್ಲಿ ಚೈತನ್ಯ ತುಂಬಿತು. ಧೈರ್ಯದಿಂದ ಮನೆಯೊಳಗೆ ನಡೆದೆ. ✡



# ಕುರುಡುಗಣ್ಣಿಗೆ ದುರ್ಬೀನು

ಗೌರೀಶ ಕಾಯ್ಕಿಣಿ

ಕಣ್ಣಿದ್ದೂ ಕುರುಡಾಗಿ ನಾವು ನೀವು ಬಾಳಿನಲ್ಲಿ ಅಡಿಗಡಿಗೆ ಸೋಲುವುದುಂಟು. ಆದರೆ ಕಣ್ಣೊಂದು ಕುರುಡಾಗಿಯೂ ಒಬ್ಬ ಅಸಮ ಸಾಹಸಿ, ಅಸಾಮಾನ್ಯ ವ್ಯಕ್ತಿ ಆ ಕುರುಡುಗಣ್ಣಿನಿಂದಾಗಿಯೇ ದೊಡ್ಡ ಯುದ್ಧವನ್ನು ಗೆದ್ದನು. ತನ್ನ ದೇಶದ ಹಾಗೂ ತನ್ನ ಬದುಕಿನ ಭಾಗ್ಯದ ಕಣ್ಣನ್ನೇ ತೆರೆದನು.

ಹದಿನೇಳನೆ ಹದಿನೆಂಟನೆ ಶತಮಾನಗಳು ಬ್ರಿಟಿಶ್, ಡಚ್, ಫ್ರೆಂಚ್ ರಾಷ್ಟ್ರಗಳು ತಮ್ಮ ಸಾಮ್ರಾಜ್ಯ ವಿಸ್ತರಣೆಗಾಗಿ ಪ್ರಪಂಚದ ಪ್ರತಿಯೊಂದು ಕಡೆಗೂ ಪ್ರತಿಯೊಂದು ಕಡಲಲ್ಲಿಯೂ ಕಾಲ್ಕೆದರಿ ಕಾದಾಡಿ ಘೋರ ಪೈಪೋಟಿ ನಡೆಸುತ್ತಿರುವ ಕಾಲವದು. ಆ ಕಾಲದ ನಾವಿಕ ಯೋಧ ಆಡ್ಮಿರಲ್ ನೆಲ್ಸನ್. ಅಂದು ಆತ ಆಡ್ಮಿರಲ್ (ನೌಕಾ ಸೇನಾಪತಿ) ಆಗಿರಲಿಲ್ಲ. ಮುಂದೆ ದಿಗ್ವಿಜಯೀ ನೆಪೋಲಿಯನ್ ಈಜಿಪ್ತಿನ ಮೇಲೆ ದಾಳಿಯಿಟ್ಟಾಗ ನೈಲ್ ನದಿಯ ಯುದ್ಧದಲ್ಲಿ ಆಡ್ಮಿರಲ್ ನೆಲ್ಸನ್ ಟ್ರಾಫಲ್ಗರ್ ಎಂಬಲ್ಲಿ ಅವನ ನೌಕಾಪಡೆಯನ್ನು ನಾಶಮಾಡಿ ಬೋನಾಪಾರ್ಟನ ಭಾರತ ಆಕ್ರಮಣದ ಭವ್ಯ ಕನಸನ್ನು ಪಿರಾಮಿಡ್ಡುಗಳ ನೆಳಲಲ್ಲಿ ಆ ಮರಳುಗಾಡಿನಲ್ಲಿ ಮಣ್ಣುಪಾಲು ಮಾಡಿದನು. ಆದರೆ ಅದು ನೆಲ್ಸನ್ ನೌಕಾ ಸೇನಾನಿ ಆದ ನಂತರದ ಗಾಥೆ.

ಆದರೆ ನಾನು ಇಲ್ಲಿ ಎತ್ತಿ ಹೇಳುವ ಕಥಾ

ಪ್ರಸಂಗ ನೆಲ್ಸನ್ನನ ಮೊದಲನೆಯ ಹೆಗ್ಗಳಿಕೆಯದು. ಹಾಲೆಂಡಿನೊಂದಿಗೆ ಇಂಗ್ಲೆಂಡ್ ಕಡಲ ಕದನಗಳಲ್ಲಿ ತೊಡಗಿದ ಸಂದರ್ಭವದು. ನೆಲ್ಸನ್ನನ ಉಜ್ವಲ ದಿಗ್ವಿಜಯದ ಜೀವನವೆಲ್ಲ ಅವನ ಒಕ್ಕಣ್ಣಿನ ವಿಕ್ರಮ. (ಆಂಗ್ಲ ಕವಿ ಸಾಹಿತಿ ರಾಬರ್ಟ್ ಸೌದೆ ಈ ವಿಕ್ರಮಾರ್ಕ ವಿಜಯದ ಚರಿತ್ರೆ ಬರೆದು ತನ್ನ ನಾಯಕನೊಂದಿಗೆ ಹೆಸರುವಾಸಿಯಾದ) ಆರಂಭದಿಂದಲೂ ನೆಲ್ಸನ್ನನ ಒಂದು ಕಣ್ಣು ಕುರುಡು. ಆದರೆ ಎರಡೂ ಕಣ್ಣು ಸರಿಯಾಗಿ ಕೆಲಸ ಕೊಡುವ ಅನೇಕರಿಗಿಂತ ಆತ ಎದೆಗಾರ. ಬಾಲ್ಯದಿಂದಲೂ ಅವನಿಗೆ ಭಯವೆಂಬುದೇ ಗೊತ್ತಿದ್ದಿಲ್ಲ. ಅವನ ತಾಯಿ ಬಾಲಕ ನೆಲ್ಸನ್ನನನ್ನು ಒಂಟಿಯಾಗಿ ಕತ್ತಲಲ್ಲಿ ಹೋಗಬೇಡ, ಹೆದರಿಗಿದರೀಯ ಎಂದು ಎಚ್ಚರಿಕೆ ಕೊಟ್ಟರೆ, ಈ ಹಟವಾದಿ ಹುಡುಗ ಅಮ್ಮಾ ಹೆದರಿಕೆ ಅಂದರೇನು? ಎಂದು ಮುಗ್ಧಭಾವದಿಂದ ಕೇಳುತ್ತಿದ್ದನಂತೆ.

ಇಂಥ ನೆಲ್ಸನ್ನನ ಪ್ರಥಮ ಪರಾಕ್ರಮ ಅವನ ಕುರುಡುಗಣ್ಣಿನ ಕರಾಮತ್ತು. ಅದು ನಡೆದದ್ದೂ ಹೀಗೆ – ಡಚ್ಚರೊಂದಿಗೆ ಇಂಗ್ಲೀಷರ ಯುದ್ಧ ಭರದಿಂದ ನಡೆದಿತ್ತು. ಅದೂ ಇಂಗ್ಲೆಂಡಿನ ಅಂಗಳದಲ್ಲಿಯೇ. ಬ್ರಿಟಿಶ್ ಕೊಲ್ಲಿಯ ಬಾಯಿಯ ಉತ್ತರ ಸಮುದ್ರದಲ್ಲಿ. ಅಂಥ ಒಂದು ಆಯಕಟ್ಟಿನ ಕಡಲ ಯುದ್ಧದಲ್ಲಿ ನೆಲ್ಸನ್ ತನ್ನ ನೌಕಾಸೇನಾಪತಿಯ ಆಜ್ಞೆಯಡಿಗೆ ಸಣ್ಣ ೮೧ ಹಡಗುಗಳ ಒಂದು ಗುಂಪಿಗೆ ಹಿರಿಯನಾಗಿ ಕಾಲಿಡಬೇಕು. ಅವನ ವರಿಷ್ಠ ಸೇನಾಪತಿ ಒಬ್ಬ ಜಡಭರತ. ನೆಲ್ಸನ್ನನಿಗೆ ಕಣ್ಣು ಮಂದವಾದರೆ ಈ ಭೂಪತಿಗೆ ಬುದ್ಧಿಯೇ ಮಂದ. ಅಲ್ಲದೆ ವಯಸ್ಸು ಬೇರೆ ಕಳೆದಿತ್ತು. ಆದ್ದರಿಂದ ಇನ್ನಿಷ್ಟು ಮಂದಗಾಮಿ. ನೆಲ್ಸನ್ ಬಿಸಿ ರಕ್ತದ ಅತ್ಯಂತ ಪ್ರತಿಭಾಶಾಲಿಯಾದ ನೌಕಾಯೋಧ. ಸಂಧಿಗಾಗಿ ಕಾಯುತ್ತಿದ್ದ ಸೈಂಧವ. ಯಾವುದಕ್ಕೂ ಆತ ಅಸ್ವತಂತ್ರ. ಅವನ ಆಡ್ಮಿರಲ್ ವಿಪರೀತ ಜಾಗರೂಕ. ಆಕ್ರಮಣಕ್ಕಿಂತ ಆತ್ಮರಕ್ಷಣೆಯೇ ಅವನ ಯುದ್ಧತಂತ್ರ. ಆದರೆ ನೆಲ್ಸನ್ ಆಕ್ರಮಣವೇ ಉತ್ತಮ ಆತ್ಮರಕ್ಷಣೆಯೆಂದು ನಂಬಿದವನು. ಅಲ್ಲದೆ ಡಚ್ಚ ಹಡಗು ಪಡೆಯ ಬಲಾಢ್ಯ ಸ್ಥೂಲಕಾಯ ದಾಳಿಗಳ ಹೂಟ ಹೊಂಚುಗಳನ್ನು ಸೂಕ್ಷ್ಮವಾಗಿ ಅಧ್ಯಯಿಸಿದ್ದ. ಅವಕಾಶಕ್ಕಾಗಿ ಹಾತೊರೆಯುತ್ತಿದ್ದ.

ಡಚ್ಚರ ಒಂದು ಹಡಗು ಪಡೆ ಬ್ರಿಟಿಶ್ ಕೊಲ್ಲಿಯ ಕಡೆಗೆ ಮುಂದಗತಿಯಿಂದ ಮಹಾ ಅಟ್ಟಹಾಸದಿಂದ ನುಗ್ಗಿ ಬರುವದನ್ನು ಕಂಡೊಡನೆ ನೆಲ್ಸನ್ ತನ್ನ ಹಸುರು ಹಾಯಿ ಬಿಚ್ಚಿದ ಹಡಗುಗಳನ್ನು ಹಗೆಯನ್ನು ಇದುರಿಸಲಿಕ್ಕೆ ವೇಗದಿಂದ ಹರಿಬಿಟ್ಟ. ಡಚ್ ಹಡಗಗಳನ್ನು ಮುತ್ತಿರಿ ಮುಳುಗಿಸಿರಿ ಎಂದು ತನ್ನ ಗುಂಪಿನ ಕಪ್ತಾನರಿಗೆ ಕಟ್ಟಪ್ಪಣೆ ಮಾಡಿದ.

ಅಷ್ಟರಲ್ಲಿ ಅವನ ಈ ಶೀಘ್ರ ಚಲನವಲನವನ್ನು ಸುರಕ್ಷಿತ ದೂರದಿಂದ ಅವನ ನೌಕಾಸೇನಾಪತಿ ಕಂಡನು. ತುಂಬ ಗಾಬರಿಯಾದನು. ನೆಲ್ಸನ್ ದುಡುಕಿ ದುಸ್ಸಾಹಸ ಮಾಡುತ್ತಿದ್ದಾನೆ, ಅಲ್ಲದೆ ತನ್ನ ಆಜ್ಞೆಗೆ ಕಾಯದೆ ಮನಸಮಾನೆ ನಡೆಯುತ್ತಿದ್ದಾನೆ. ತರಳ ಇದೇನು ತಿಳಿಗೇಡಿ ತುಂಟಾಟ ಆರಂಭಿಸಿದ್ದಾನೆ! ಆತನನ್ನು ತಡೆಯಲೇಬೇಕು ಎಂದು ಕೂಡಲೆ ತನ್ನ ಧ್ವಜ ನೌಕೆಯಿಂದ ಪತಾಕೆ ಬೀಸಿ ಜೋರುಜೋರಾಗಿ ಸಾಂಕೇತಿಕ ಭಾಷೆಯಲ್ಲಿ ಆಜ್ಞೆ ಕೊಡಹತ್ತಿದ, "ನಿಲ್ಲಿ ದಾಳಿ ಮಾಡಬೇಡಿ!"

ಆದರೆ ನೆಲ್ಸನ್ ಅವನನ್ನು ಗಮನಿಸಲೇ ಇಲ್ಲ. ಕಂಡೂ ಕಾಣದಂತೆ ಮುನ್ನುಗ್ಗಿದ, ತನ್ನ ಯುದ್ಧ ಪಡೆಯೊಂದಿಗೆ. ತಮ್ಮ ಭಾರಿ ಗಾತ್ರದ ಬಲದ ಕೊಬ್ಬಿನಲ್ಲಿ ನುಗ್ಗಿ ಬರುವ ಡಚ್ ಹಡಗಗಳು ಈ ಆಕಸ್ಮಿಕ ಪ್ರತಿಭಟನೆಯನ್ನು ನಿರೀಕ್ಷಿಸಿರಲಿಲ್ಲ. ಈ ಅನಿರೀಕ್ಷಿತ ಆಕ್ರಮಣವೇ ನೆಲ್ಸನ್ನನ ಹೂಟವಾಗಿತ್ತು.

ಅಷ್ಟರಲ್ಲಿ ನೆಲ್ಸನ್ನನ ಕೈಕೆಳಗಿನ ಅಧಿಕಾರಿ ಕೂಗಿದ, ಸರ್ ಅದೊ ಆಡ್ಮಿರಲ್ ದೊರೆ ಆಜ್ಞೆ ಮಾಡುತ್ತಿದ್ದಾರೆ, ದಾಳಿ ನಿಲ್ಲಿಸೆಂದು. ನೆಲ್ಸನ್ನನಿಗೆ ಅದು ಗೊತ್ತಿತ್ತು. ಧ್ವಜ ನೌಕೆಯಿಂದ ಬರುವ ಸಂಕೇತಗಳನ್ನು ಅತ್ತ ನೋಡಿದ. ನೋಡಿಯೂ ಎಡೆಗಣಿಸಿ ಸಾಗಿದ. ಅವನಿಗೆ

ಚೆನ್ನಾಗಿ ಗೊತ್ತು. ಆತ ಅಳುಕದೆ ಅಧಿಕಾರಿಯತ್ತ ಹೊರಳಿ ಅಂದ ಅಡ್ಮಿರಲ್ಲರ ಆಜ್ಞೆ ಅದೆಲ್ಲಿ? ನಾನು ಕಂಡಿಲ್ಲ! ಆಗ ಆ ಕಪ್ತಾನ ತೋಳುಚಾಚಿ ಕಾಣಿಸಿದ. ನೋಡಿ ಸರ್ ಅಕೋ ಅಲ್ಲಿ ಧ್ವಜನೌಕೆಯಿಂದ ಸಂಜ್ಞೆಗಳು ಬರುತ್ತಿವೆ. ಈಗ ನೆಲ್ಸನ್ "ಎಲ್ಲಿ ನೋಡೋಣ ನನ್ನ ದುರ್ಬೀನು ತಾ." ಕಪ್ತಾನ ಕೊಟ್ಟ. ದುರ್ಬೀನು ಎತ್ತಿ ಕಣ್ಣಿಗೆ ಹಿಡಿದು ಇನ್ನೊಂದು ಕಣ್ಣು ಮುಚ್ಚಿ ಕೆಲಕಾಲ ದಿಟ್ಟಿಸಿ ಹೇಳಿದ. "ಛೇ ನಿನ್ನ ತಿಳುವಳಿಕೆ ತಪ್ಪು. ನನಗೇನೂ ಧ್ವಜನೌಕೆಯ ಆಜ್ಞಾಸಂಜ್ಞೆಗಳು ಕಾಣಿಸುವುದಿಲ್ಲ. ಹೂಂ, ನಡೆ ಬಿರಿ ನುಗ್ಗಿರಿ, ದಾಳಿ ಮುಂದುವರಿಸಿರಿ."

ಆ ಕಪ್ತಾನನೂ ಚೋಟಿಯಾಗಿದ್ದ, ನಗುತ್ತ ಹೊರಟು ಹೋದ. ದಾಳಿ ಮುಂದುವರಿಯಿತು. ಆತ ನಗಲು ಕಾರಣ ನೆಲ್ಸನ್ ತನ್ನ ಕುರುಡುಗಣ್ಣಿಗೆ ದುರ್ಬೀನು ಹಚ್ಚಿದ್ದ. ಕಾಣುವ ಕಣ್ಣನ್ನೇ ಮುಚ್ಚಿಕೊಂಡಿದ್ದ, ತನ್ನ ಪ್ರಭುವಿನ ಅಪ್ಪಣೆ ಅರಿತುಕೊಳ್ಳಬೇಕೆಂಬ ಗಡಿಬಿಡಿಯಲ್ಲಿ! ದಾಳಿ ಉಗ್ರವಾಗಿ ಸಾಗಿತು. ಡಚ್ಚರ ಹಡಗುಗಳು ಬೆಂಕಿ ಬಿದ್ದು ಉರಿದವು. ದಿಕ್ಕಾಪಾಲಾಗಿ ಓಡಿದವು. ನಿಂತಲ್ಲಿಯೇ ಮುಳುಗಿದವು. ನೆಲ್ಸನ್ನನ ಪಡೆಯನ್ನು ಇತರ ಆಂಗ್ಲ ಪಡೆಗಳು ಹಿಂಬಾಲಿಸಿ ಡಚ್ಚರನ್ನು ಸದೆಬಡಿದು ಓಡಿಸುತ್ತಿದ್ದವು. ನೆಲ್ಸನ್ನನ ಅಡ್ಮಿರಲ್ ಮಾತ್ರ ತನ್ನ ಧ್ವಜನೌಕೆಯಿಂದ ಆಜ್ಞೆಯ ಪತಾಕೆ ಹಿಸ್ತಿಸಿದ ಬೀಸುತ್ತಲೇ ಇದ್ದ!

ಆದರೆ ಅದು ನೆಲ್ಸನ್ನನಿಗೆ ಹೇಗೆ ಕಾಣಬೇಕು? ಕುರುಡುಗಣ್ಣಿಗೆ ದುರ್ಬೀನು ಹಚ್ಚಿದ ಮಾತ್ರಕ್ಕೆ ದೃಷ್ಟಿ ತೀಕ್ಷ್ಣವಾಗುವದೆ? ಶಿಸ್ತುದಾಗಿಯಿಂದ ಕೇಳಿದಂತೆಯೇ ಅದು! ತನ್ನ ವರಿಷ್ಠನ ಅಪ್ಪಣೆಯನ್ನು ಬುದ್ಧಿಪೂರ್ವಕವಾಗಿ ಉಲ್ಲಂಘಿಸಿದನೆಂದು ಅವನಿಗೆ ಅನಿಸಬಾರದೆಂದು ನೆಲ್ಸನ್ ಈ ಉಪಾಯ ಮಾಡಿದ್ದ.

ಅಂದಿನಿಂದ ಇಂಗ್ಲಿಷ್ ಭಾಷೆಯಲ್ಲಿ ಹೊಸದೊಂದು ವಾಕ್ಪ್ರಯೋಗ ರೂಢವಾಯಿತು, "To put the telescope to the blind eye." ಕಂಡೂ ಕಂಡಿರದಂತೆ ನಡೆಯುವದಕ್ಕೆ ಈ ಮಾತು ಪರ್ಯಾಯ. ✡

## ಸೇಡು

ಈಗ ಸುಮಾರು ಐದಾರು ವರ್ಷಗಳ ಹಿಂದಿನ ಮಾತು. ಆಗ ನಾನು ನಮ್ಮ ಊರಿನಲ್ಲಿ, ನಮ್ಮ ಮನೆಯ ಪಕ್ಕದ ಮನೆಯೊಂದರಲ್ಲಿ ಪ್ರತಿದಿನ ಸಾಯಂಕಾಲ ಗಟ್ಟಿಯಾಗಿ, ನಾಲ್ಕು ಜನರಿಗೆ ಕೇಳುವಂತೆ ಕುಮಾರವ್ಯಾಸ ಭಾರತವನ್ನು ಓದುತ್ತಿದ್ದೆನು. ನಾನು ಓದುವುದನ್ನು ಆ ಮನೆಯ ವೃದ್ಧರು ಭಾವ ಪರವಶರಾಗಿ ಕೇಳುತ್ತಿದ್ದರು.

ಒಂದು ದಿವ 'ದ್ರೌಪದಿ ವಸ್ತ್ರಾಪಹರಣ'ದ ಸಂಧಿಯನ್ನು ಓದುತ್ತಿದ್ದೆ. ದುಃಶ್ಯಾಸನನು ತುಂಬಿದ ಸಭೆಯೊಳಗೆ ದ್ರೌಪದಿಯ ಸೀರೆಯನ್ನು ಕಳೆಯುವುದು; ಹಾಗೂ ಅಸಹಾಯಳಾದ ದ್ರೌಪದಿಯು ತನ್ನನ್ನು ಕಾಪಾಡುವಂತೆ ಐವರು ಗಂಡಂದಿರನ್ನು ಯಾಚಿಸುವುದು ಎಂತಹ ಕಲ್ಲೆದೆಯವನನ್ನೂ ಕರಗಿಸುತ್ತದೆ.

ಈ ಭಾಗವನ್ನು ಓದುತ್ತಿದ್ದಂತೆಯೆ ಆ ವೃದ್ಧರು ತಟ್ಟನೆ ನನ್ನನ್ನು ಓದು ನಿಲ್ಲಿಸುವಂತೆ ಹೇಳಿದರು. ಏನೂ ಅರ್ಥವಾಗದ ನಾನು ಅವರ ಮುಖವನ್ನೇ ನೋಡತೊಡಗಿದೆ. ಚಿಂತಾಕ್ರಾಂತರಾದ ಅವರ ಮುಖದಲ್ಲಿ ಒಮ್ಮೆಲೆ ಸಿಟ್ಟಿನ ಗೆರೆಗಳು ಕಾಣಿಸಿಕೊಂಡವು.

ಒಂದರ್ಧ ನಿಮಿಷ ನಡೆದ ಬಳಿಕ ಅವರು, "ಭೀಮನು ದುಃಶಾಸನನನ್ನು ಕೊಂದ ಸಂಧಿಯನ್ನು ಓದು ಎಂದು ಆಜ್ಞಾಪಿಸಿದರು! —ಆರ್. ಎಂ. ಹೆಗಡೆ

# ಹೈ ಪವರ್ ಸರ್ಫ್
# ಅಪರಿಮಿತ ಬೆಳ್ಳಗೆ ಒಗೆಯುತ್ತದೆ

## ಅದು ಪ್ರತ್ಯಕ್ಷ ಕಾಣುತ್ತದೆ

ಹೈ ಪವರ್ ಸರ್ಫ್‌ನಲ್ಲಿ ಅಧಿಕ ಒಗೆಯುವ ಶಕ್ತಿ ಇದೆ; ಧೂಳು, ಕೊಳೆ ಎಲ್ಲವನ್ನೂ ಸಂಪೂರ್ಣವಾಗಿ ತೆಗೆದುಹಾಕಿಬಿಡುತ್ತದೆ. ಅತ್ಯಂತ ಕೊಳೆಯಾದ ಬಟ್ಟೆಗಳನ್ನು ಕೂಡ ಅದು ಅಪರಿಮಿತ ಬೆಳ್ಳಗೆ ಮಾಡುತ್ತದೆ. ಹೆಚ್ಚಿನ ತಾಯಂದಿರು ಬೇರೆ ಯಾವುದೇ ವಾಶಿಂಗ್ ಪೌಡರ್‌ಗಿಂತ ಅಧಿಕವಾಗಿ ಸರ್ಫ್‌ನ್ನು ಉಪಯೋಗಿಸುತ್ತಿರುವುದರಲ್ಲಿ ಆಶ್ಚರ್ಯವೇ ಇಲ್ಲ.





# ನಿಮ್ಮ ಶಬ್ದ ಭಾಂಡಾರ ಬೆಳೆಸಿರಿ

## ಶಬ್ದ ಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ.

ಇಲ್ಲಿ ಪ್ರತಿ ತಿಂಗಳೂ ಕೆಲವು ಶಬ್ದಗಳನ್ನು ಪರಿಚಯ ಮಾಡಿಕೊಡಲಾಗುವುದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆ ಮೇಲೆ ಇದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥವನ್ನು ವಿವರಿಸಿದೆ.

೧. **ಸರವು**
(ಅ) ಎಲ್ಲಾ (ಆ) ಹಗ್ಗ (ಇ) ಹರಿ ನೀರು (ಈ) ಕಿವಿಗೊಡುವುದು

೨. **ಸರಬರಾಜು**
(ಅ) ಕಚೇರಿ ಮುಖ್ಯಸ್ಥ (ಆ) ಸರ್ವಾಧಿಕಾರ (ಇ) ಒದಗಿಸುವುದು (ಈ) ಮಸೀದಿಯ ಬುರುಜು

೩. **ಹಂಸಪಾದ**
(ಅ) ತಪ್ಪಿದ ಅಕ್ಷರ ಸೇರಿಸುವ ಗುರುತು (ಆ) ಹೆಜ್ಜೆ ಗುರುತು (ಇ) ಒಂದು ರಾಗ (ಈ) ಅಸ್ಪಷ್ಟ ಬರಹ

೪. **ಹಂತಕ**
(ಅ) ಮೊರೆಯಿಡುವಿಕೆ (ಆ) ಮೃತ್ಯು (ಇ) ಗಡಿ ಗುರುತು (ಈ) ಕೊಲೆಗಡುಕ

೫. **ಸೋಂಬೇರಿ**
(ಅ) ಒಂದು ಕಾರ ತಿಂಡಿ (ಆ) ದಿವಾಳಿಯೆದ್ದವ (ಇ) ಶೂನ್ಯ (ಈ) ಮೈಗಳ್ಳ

೬. **ವಾವೆ**
(ಅ) ಗೊಂಬೆ (ಆ) ನಂಟಸ್ತಿಕೆ (ಇ) ಸೌಂದರ್ಯ (ಈ) ನೀರಿನ ಊಟೆ

೭. **ಬೆಸ**
(ಅ) ಸುಡುವಿಕೆ (ಆ) ಪ್ರಶಂಸೆ (ಇ) ಕರ್ತವ್ಯ (ಈ) ವರಸೆ

೮. **ಬಗ್ಗಡ**
(ಅ) ಕೆಸರು (ಆ) ನಾಯಿಯ ಕೂಗು (ಇ) ಡೊಂಕುತನ (ಈ) ದುರ್ದೈವ

೯. **ಅವಾಚ್ಯ**
(ಅ) ಆಡಬಾರದ ಮಾತು (ಆ) ಬೇಸರ ಬರಿಸುವ ಬರಹ (ಇ) ತಪ್ಪು ವಾಕ್ಯ (ಈ) ಈಚೆಗಿನ ಸಂಗತಿ

೧೦. **ಅವ್ಳಿ**
(ಅ) ಜೋಡಿ (ಆ) ಕೈಲಾಗದವ (ಇ) ದೂರು (ಈ) ಬಡಿಯುವಿಕೆ

೧೧. **ಪಿಸನಾರಿ**
(ಅ) ನೀರು ಚಿಮ್ಮಿಸುವ ಸಾಧನ (ಆ) ಭ್ರಮೆ ಹಿಡಿದವ (ಇ) ಕೃಪಣ (ಈ) ಹುಂಬತನ

೧೨. **ಪೇರಣಿ**
(ಅ) ಕಾಲಿನ ಆಭರಣ (ಆ) ಭಾರ (ಇ) ವಾಹನ (ಈ) ಕುಣಿತ

## 'ಶಬ್ದ ಭಾಂಡಾರ'ದ ಸರಿಯಾದ ಅರ್ಥಗಳು

೧. **ಸರವು** (ಆ) ಹುಲ್ಲಿಂದ ಹೊಸೆದ ಹಗ್ಗ, ಸರವಿ, ಸರವೆ. ಉದಾ:— ಮಳಲು ಹೊಸದರೆ ಸರವು ಆದೀತೆ? [ಸರವೆ=ಭತ್ತದ ಹುಲ್ಲು; ಸಂ. ಶರ=ಹುಲ್ಲು]

೨. **ಸರಬರಾಜು** (ಇ) ಒದಗಿಸುವುದು, ಪ್ರಯಾಣದಲ್ಲಿ ಅಗತ್ಯಗಳನ್ನು ಪೂರೈಸುವುದು. ಉದಾ:— ಸಕ್ಕರೆ ಸರಬರಾಜು ನಿಂತಿದೆ. [ಉರ್ದು – ಸರ್‌ಬರಾಹ್, ಫಾರಸಿಯಿಂದ]

೩. **ಹಂಸಪಾದ** (ಅ) ಬರಹದಲ್ಲಿ ತಪ್ಪಿ ಹೋದ ಅಕ್ಷರಗಳನ್ನು ಸೇರಿಸಲು ಮಾಡುವ (ಹಂಸಪಕ್ಷಿಯ ಪಾದದಂಥ) ಗುರುತು. [ಸಂ.]

೪. **ಹಂತಕ** (ಈ) ಕೊಲೆಗಡಕ, ಕೊಲೆ ಮಾಡಲು ಬರುವವ. ಉದಾ:— ಹಂತಕರು ಸಿಕ್ಕಿಬಿದ್ದರು. [ಸಂ. ಹನ್=ಕೊಲ್ಲು ಧಾತುವಿಂದ ರೂಪಿಸಿಕೊಂಡ ಪದ]

೫. **ಸೊಂಬೇರಿ** (ಈ) ಮೈಗಳ್ಳ, ಜಡ ಸ್ವಭಾವದವ, ಸೋಮಾರಿ. ಉದಾ:— ಸೋಂಬೇರಿಗಳ ಕೂಟ ಸೇರಿದೆ. [ದೇಶ್ಯ]

೬. **ವಾವೆ** (ಅ) ನಂಟಸ್ತಿಕೆ, ಸಂಬಂಧ, ರಕ್ತಸಂಬಂಧ. ಉದಾ:— ವಾವೆ ಹಿಡಿದು ಸಹಾಯ ಕೇಳಿದರು. [ತೆಲುಗು ವಾವೆ=ವರಸೆ]

೭. **ಬೆಸ** (ಇ) ಕರ್ತವ್ಯ, ಕೆಲಸ, ಅಪ್ಪಣೆ. ಉದಾ:— ಕೃಷ್ಣನ ಬೆಸದಿಂದ [ಸಂ. ವಿಧಾ=ರೀತಿ, ಕೆಲಸ – ಎಂಬುದರಿಂದ?]

೮. **ಬಗ್ಗಡ** (ಅ) ಕೆಸರು, ರೊಜ್ಜು, ಕೊಚ್ಚೆ. ಉದಾ:— ಕೆರೆಯು ಬಗ್ಗಡ ತೆಗೆಯಬೇಕು. [ಮರಾಠಿ, ವಗಳ=ಕೊಳೆ, ಕಸ]

೯. **ಅವಾಚ್ಯ** (ಅ) ಆಡಬಾರದ ಮಾತು, ಕೊಳಕು ಮಾತು, ಸಂಭಾವಿತರು ಹೇಳಿಕೊಳ್ಳುವ ಮಾತು. ಉದಾ:— ಅವಾಚ್ಯ ಬೈಗಳು. [ಸಂ. ಅ=ಅಲ್ಲ, ವಾಚ್ಯ=ನುಡಿಯತಕ್ಕದ್ದು]

೧೦. **ಅಪ್ಪಾಳಿ** (ಆ) ಕೈಲಾಗದವ, ಹೆಣ್ಣಿಗ, ಅಶಕ್ತ. ಉದಾ:— ಹೆಂಡತಿಗೆ ಹೆದರುವ ಅಪ್ಪಾಳಿ. [?]

೧೧. **ಪಿಸನಾರಿ** (ಇ) ಕೃಪಣ, ಜಿಪುಣ, ಲೋಭಿ, ಆಸೆಬುರುಕ. ಉದಾ:— ಆ ಪಿಸನಾರಿ ಕೈಲಿ ಬೇಡಬೇಡ [ಸಂ. ಪಿಶುನ=ಚಾಡಿಗಾರ?]

೧೨. **ಪೇರಣೆ** (ಈ) ಕುಣಿತ, ನೃತ್ಯ, ನರ್ತನ. ಉದಾ:— ಪೇರಣೆಯ ಸಂಪ್ರದಾಯ. [ಮರಾಠಿ – ಫೇರಣೇಂ=ತಿರುಗುವುದು]

### ನಿಮ್ಮ ಶಬ್ದಶಕ್ತಿಯ ತರಗತಿ

ನೀವು ಎಷ್ಟು ಶಬ್ದಗಳಿಗೆ ಅರ್ಥ ಅರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದಶಕ್ತಿಯ ತರಗತಿಗಳನ್ನು ತಿಳಿಯಿರಿ.

| | | | |
|---|---|---|---|
| ೬—೮ | ಸರಿಯಿದ್ದರೆ | ... | ಸಾಧಾರಣ |
| ೯–೧೦ | ,, | ... | ಉತ್ತಮ |
| ೧೧–೧೨ | ,, | ... | ಅತ್ಯುತ್ತಮ |

ವೃದ್ಧವಾಗಿದ್ದ ಅದು ಈಗ
ವಜ್ರಕಾಯವಾಗತೊಡಗಿದೆ

# ವರ್ಣಪಟಲ ವಿಜ್ಞಾನ

ಡಾ. ವಿಜಯ್ ಶ್ರೀಧರ್

ಈ ವರ್ಷದ ಭೌತವಿಜ್ಞಾನದ ನೋಬೆಲ್ ಬಹುಮಾನದ ವಿತರಣೆ ಹೇಗಿದೆಯೆಂದರೆ ನಮ್ಮ ಮತ್ತು ಸಮಕಾಲೀನ ಕವಿಗಳನ್ನು ಬಿಟ್ಟು ಹಿರಿಯರನ್ನು ಕಣ್ಣೆತ್ತಿಯೂ ನೋಡದಿರುವ ಪ್ರಕಾಶಕರು ಮತ್ತು ಸಾಹಿತಿಗಳ ಸಮ್ಮೇಳನದಲ್ಲಿ ಸಾಹಿತ್ಯ ಅಕಾಡೆಮಿಯು ಉನ್ನತ ಪ್ರಶಸ್ತಿ ಹಳೆಗನ್ನಡದಲ್ಲಿ ರಚಿತವಾಗಿರುವ ಕೃತಿಯೊಂದಕ್ಕೆ ನೀಡಲ್ಪಟ್ಟಿದೆ ಎಂದು ಘೋಷಿಸಿದಂತೆ.

"ಇದೇನಿದು ಅನ್ಯಾಯ!" "ಪ್ರಗತಿಪರ ಮನೋಭಾವಕ್ಕೆ ಕೊಡಲಿಯೇಟು!" ಇತ್ಯಾದಿಯಾಗಿ ಸಭಿಕರ ಗುಸುಗುಸು. ಆ ಮಧ್ಯೆಯೇ ತಮ್ಮ ಘೋಷಣೆಯನ್ನು ಮುಂದುವರೆಸಿದ ತೀರ್ಪುಗಾರರು "ಈ ಕೃತಿಯ ಭಾಷೆ ತೀರಾ ಹಳೆಯದಾದರೂ ಇದರ ನೋಟ ಅತ್ಯಂತ ಆಧುನಿಕ, ವ್ಯಾಪ್ತಿ ಅನಂತ. ಪ್ರಧಾನ ವಿಷಯವಂತೂ..." ಎಂದು ವಿವರಿಸತೊಡಗಿದಾಗ ಅಲ್ಲೊಬ್ಬರು ಇಲ್ಲೊಬ್ಬರು ಬುದ್ಧಿವಂತರು ಕುತೂಹಲ ತಾಳಿ ನೋಡಿಕೊಳ್ಳುತ್ತ, ತಿರುಗಿ ಗಂಭೀರವಾಗಿ ಕೇಳಲಾರಂಭಿಸಿದಂತೆ ಆಗಿದೆ ಈಗ ಆಧುನಿಕ ಭೌತ ವಿಜ್ಞಾನಿಗಳಲ್ಲಿ.

ಇತ್ತೀಚಿನ ವರ್ಷಗಳಲ್ಲಿ ಪ್ರಾಥಮಿಕ ಕಣ ವಿಜ್ಞಾನ ಗುತ್ತಿಗೆ ತೆಗೆದುಕೊಂಡಿದೆಯೋ ಏನೋ ಎನ್ನುವಂತಾಗಿಹೋಗಿತ್ತು, ನೋಬೆಲ್ ಪಾರಿತೋಷಕ. ಆದರೆ ಈ ವರ್ಷ ಪ್ರಶಸ್ತಿ ಭೌತ ವಿಜ್ಞಾನದ ಅತ್ಯಂತ ಹಳೆಯ ತಂತ್ರಗಳಲ್ಲಿ ಒಂದಾದ ವರ್ಣಪಟಲ ವಿಜ್ಞಾನಕ್ಕೆ (Spectroscopy) ನೀಡಲ್ಪಟ್ಟಿದೆ. ಇಬ್ಬರು ಅಮೇರಿಕನ್ (ಷಾಲೋ ಮತ್ತು ಬ್ಲೊಂಬರ್ಗನ್) ಮತ್ತು ಒಬ್ಬ ಸ್ವೀಡಿಷ್ (ಸೀಗ್‌ಬಾನ್) ವಿಜ್ಞಾನಿಗಳು ಈ ವರ್ಷದ ವಿಜೇತರು. ಹಳೆಯ ತಂತ್ರವನ್ನು ಇವರು ಹೇಗೆ ಆಧುನಿಕತೆಯ ಮುಂಭಾಗಕ್ಕೆ ತಂದರು ಎನ್ನುವ ಕುತೂಹಲ ತಣಿಯಬೇಕಾದರೆ ಮೊದಲು ಈ ಹಳೆಯ ತಂತ್ರದ ವಿವರಗಳನ್ನು ತಿಳಿದುಕೊಳ್ಳಬೇಕು.

## ವರ್ಣಪಟಲ

ಕಾಮನ ಬಿಲ್ಲಿನ ಸೌಂದರ್ಯ ಯಾರಿಗೆ ಕಂಡಿಲ್ಲ? ಆದರೆ ಅದು ಹೇಗೆ ಉಂಟಾಗುತ್ತದೆಯೆನ್ನುವುದು ಬಹಳ ಜನಕ್ಕೆ ತಿಳಿದಿಲ್ಲ. ಸೂರ್ಯ ರಶ್ಮಿಯನ್ನು ಒಂದು ಅಶ್ರಗದ (Prism) ಮೂಲಕ ಹಾಯಿ

## ವರ್ಣಪಟಲ ವಿಜ್ಞಾನ

ವಸ್ತುಗಳನ್ನು ಸುಟ್ಟಾಗ ಬೆಳಕು ಏಕೆ ಬರುತ್ತದೆ? ಆ ಬೆಳಕಿನಲ್ಲೂ ವೈವಿಧ್ಯ ಏಕಿರುತ್ತದೆ? ಸಂಕೀರ್ಣವಾಗಿ ಕಾಣುವ ವರ್ಣಪಟಲವನ್ನು ಸುಲಭವಾಗಿ ಅರ್ಥಮಾಡಿಕೊಳ್ಳಲು ಆಗಬಾರದೇಕೆ? ಇತ್ಯಾದಿ ಪ್ರಶ್ನೆಗಳು ವಿಜ್ಞಾನಿಗಳನ್ನು ಕಾಡತೊಡಗಿದವು. ಗೊಂದಲಮಯವಾಗಿ ಕಾಣುವ ವರ್ಣಪಟಲಗಳಲ್ಲಿ ಕ್ರಮಬದ್ಧತೆಯನ್ನು ಅರಸುವ ಕೆಲಸ ನಡೆಯತೊಡಗಿತು. ಕಳೆದ ಶತಮಾನದ ಕಡೆಯಲ್ಲಿ ಕಂಡುಹಿಡಿಯಲ್ಪಟ್ಟ ಸಂಗತಿಗಳಿಂದ ಬಹಳ ಸಹಾಯವೊದಗಿ ಬಂತು. ಮೊದಲ ಬಾರಿಗೆ ಯಾವುದೇ ತರಂಗಾಂತರದ ಬೆಳಕಾದರೂ ಅದು ಕೇವಲ ವಿದ್ಯುತ್ ಮತ್ತು ಅಯಸ್ಕಾಂತ ಕ್ಷೇತ್ರಗಳ ಆಂದೋಲನಗಳಿಂದ ಉಂಟಾಗಿ ಹರಡುವ ವಿದ್ಯುತ್ಕಾಂತೀಯ ಅಲೆ ಎನ್ನುವುದು ತಿಳಿಯಿತು. ಯಾವ ವಸ್ತುವಿನಿಂದ ಬೇಕಾದರೂ ಋಣ ವಿದ್ಯುದಂಶವಿರುವ 'ಎಲೆಕ್ಟ್ರಾನ್' ಎನ್ನುವ ಕಣಗಳನ್ನು ಕೀಳಿ ತೆಗೆಯಬಹುದು ಎನ್ನುವುದು ೧೮೯೭ರಲ್ಲಿ ಗೊತ್ತಾಯಿತು. ಅಂದರೆ ವಸ್ತುಗಳ ಪರಮಾಣುಗಳು ಅವಿಭಾಜ್ಯವಲ್ಲ, ಅವುಗಳಲ್ಲಿ ವಿದ್ಯುತ್ಕಣಗಳಿವೆ ಎಂದಾಯಿತು. ಆದ್ದರಿಂದ, ವಿದ್ಯುತ್ಕಾಂತೀಯ ತರಂಗವಾದ ಬೆಳಕು ಉತ್ಪತ್ತಿಯಾಗುವುದು ಪರಮಾಣುಗಳ ಒಳಗಿರುವ ವಿದ್ಯುತ್ಕಣಗಳಿಂದ ಎಂದು ಹೊಳೆಯಿತು. ವಿದ್ಯುತ್ಕಣಗಳು ವಿವಿಧ ರೀತಿಯಲ್ಲಿ ಆಂದೋಲನ ಮಾಡಿದರೆ ಅದಕ್ಕೆ ತಕ್ಕಂತಹ ತರಂಗಾಂತರದ ಬೆಳಕು ಹೊರಬರುತ್ತದೆ. ಇದನ್ನೇ ಹಿಂದು ಮುಂದಾಗಿಸಿ ನೋಡಿದರು ವಿಜ್ಞಾನಿಗಳು. ಆಗ, ವರ್ಣಪಟಲಗಳ ಬೆಳಕುಗಳ ತರಂಗಾಂತರಗಳನ್ನು ಅರಿಯುವುದರಿಂದ ಅವನ್ನು ಉತ್ಪಾದಿಸಿದ ವಿದ್ಯುತ್ಕಣಗಳ ಆಂದೋಲನ ಕ್ರಮಗಳೂ, ಆ ಮೂಲಕ ಪರಮಾಣುವಿನ ರಚನೆಯೂ ತಿಳಿಯಬರಬಹುದು ಎಂದೆನಿಸಿತು.

ವಸ್ತುಗಳು ಹೊಮ್ಮುವ ಬೆಳಕನ್ನು ಅಶ್ರಗದಿಂದ ವಿಭಜಿಸಿ ಹರಡಿ, ಫೋಟೋಗ್ರಫಿಕ್

ವಿವಿಧ ತರಂಗಾಂತರಗಳ ಬೆಳಕುಗಳನ್ನು ನಿರ್ಧರಿಸಿ, ಅವುಗಳ ಪರಸ್ಪರ ಸಂಬಂಧಗಳಿಂದ ಆ ವಸ್ತುವಿನ ಅಣು ಮತ್ತು ಪರಮಾಣುಗಳ ರಚನೆಯನ್ನು ತಿಳಿಯಲು ಪ್ರಯತ್ನಿಸುವ ಈ ವಿಜ್ಞಾನವೇ ವರ್ಣಪಟಲ ವಿಜ್ಞಾನ ಎಂದು ಪ್ರಸಿದ್ಧಿಯಾಗಿ ಆಧುನಿಕ ಭೌತವಿಜ್ಞಾನಕ್ಕೆ ನಾಂದಿಯಾಯಿತು.

## ನಿರ್ದಿಷ್ಟತೆಯ ಮೂಲ

ಈ ಅಧ್ಯಯನ ಮೊದಲಲ್ಲಿ ಸಾವಿರಾರು ವಿಜ್ಞಾನಿಗಳ ಸಮಯವನ್ನು ಆಕ್ರಮಿಸಿತು. ಅನೇಕ ವಸ್ತುಗಳ ವರ್ಣಪಟಲಗಳನ್ನು ನೋಡಿದ ಮಾತ್ರಕ್ಕೆ ಗುರುತಿಸುವ ಸಾಮರ್ಥ್ಯವೂ ಬೆಳೆಯಿತು ಅನುಭವಸ್ಥರಲ್ಲಿ. ಈ ರೀತಿಯಲ್ಲೇ ಸೂರ್ಯನಲ್ಲಿ, ನಕ್ಷತ್ರಗಳಲ್ಲಿ ಜಲಜನಕ ಇತ್ಯಾದಿ ವಸ್ತುಗಳು ಈ ಪ್ರಮಾಣಗಳಲ್ಲಿದೆ ಎಂದೂ ಹೇಳಬಹುದಾಯಿತು. ಮೊದಲ ಬಾರಿಗೆ ಆದರೂ ಪರಮಾಣುವಿನ ರಚನೆಯನ್ನು ಬಿಡಿಸುವುದು ಮೊದಲು ಅನಿಸಿದ್ದಂತೆ ಸುಲಭವಾಗಿ ಕೈಗೂಡಲಿಲ್ಲ. ಪರಮಾಣುಗಳಿಂದ ಒಂದೇ ನಿರ್ದಿಷ್ಟತೆಯಲ್ಲೇ ಬೆಳಕು ಏಕೆ ಬರುತ್ತದೆ? ಅವರಲ್ಲೂ ಕೆಲವು ತರಂಗಾಂತರಗಳ ಬೆಳಕು ಉತ್ಪತ್ತಿಯೇ ಆಗುವುದಿಲ್ಲವೇಕೆ? ಪರಮಾಣುವಿನಲ್ಲಿಯ ವಿದ್ಯುತ್ಕಣಗಳಿಗೆ ಈ ಕಡಿವಾಣ ಏಕೆ? ಬೇರೆ ಬೇರೆ ವಸ್ತುಗಳಿಗೆ ಬೇರೆ ಬೇರೆ ಕಡಿವಾಣಗಳೇಕೆ? ಇತ್ಯಾದಿ ಪ್ರಶ್ನೆಗಳು ಕಾಡುತ್ತಲೇ ಇದ್ದುವು. ಇವು ತೃಪ್ತಿಕರವಾಗಿ ಅರ್ಥವಾಗಲು ೨೦–೩೦ ವರ್ಷಗಳೇ ಬೇಕಾದುವು. ಉತ್ತರ ವಿವಿಧ ಹಂತಗಳಲ್ಲಿ ಬಂತು.

ಎಲೆಕ್ಟ್ರಾನನ್ನು ಕಂಡುಹಿಡಿದ ನಂತರ ಅನಿಸಿದ್ದೇನೆಂದರೆ ಪರಮಾಣು ಎನ್ನುವುದು ಧನ ವಿದ್ಯುತ್ತಿನ ಉಂಡೆಯಂತಿದ್ದು ಅದರಲ್ಲಿ ಅಲ್ಲಲ್ಲಿ ಎಲೆಕ್ಟ್ರಾನ್‌ಗಳು ಹುದುಗಿವೆ ಎಂದು. ಆದರೆ ೧೯೧೧ರಲ್ಲಿ ನಡೆಸಿದ ಕೆಲವು ಪ್ರಯೋಗಗಳ ಫಲಿತಾಂಶವನ್ನು ಅರ್ಥ ಮಾಡಿಕೊಳ್ಳಬೇಕಾದರೆ ಪರಮಾಣುವಿನ ಧನ ವಿದ್ಯುತ್ತು ಒಂದು ಚಿಕ

ಕಾಲೇಜು. ೧೯೨೦–೩೦ ರಲ್ಲಿ ಇದು ಪಾಶ್ಚಾತ್ಯ ದೇಶಗಳಲ್ಲೂ ಪ್ರಸಿದ್ಧವಾಗಿತ್ತು. ಇಲ್ಲಿಯ ಭೌತವಿಜ್ಞಾನ ವಿಭಾಗದ ಪ್ರೊಫೆಸರುಗಳು ಕೆಲವರು ಮಾಡುತ್ತಿದ್ದ ವರ್ಣಪಟಲ ವಿಜ್ಞಾನಕ್ಕೆ ಸಂಬಂಧಿಸಿದ ಸಂಶೋಧನೆಗಳನ್ನು ಪ್ರಪಂಚದಲ್ಲಿನ ಅನೇಕ ದೇಶಗಳ ವಿಜ್ಞಾನಿಗಳು ಗಮನಿಸಿ ತಿಳಿದುಕೊಳ್ಳುತ್ತಿದ್ದರು. ಭಾರತದ ಏಕೈಕ ಭೌತವಿಜ್ಞಾನ ನೋಬೆಲ್ ವಿಜೇತರೂ ಬೆಂಗಳೂರಿನವರೂ ಆದ ಸರ್ ಸಿ. ವಿ. ರಾಮನ್ ಅವರು ಪ್ರಶಸ್ತಿ ಗಳಿಸಿದ್ದು ವರ್ಣಪಟಲ ವಿಜ್ಞಾನದ ಪಾಲಿಗಾದ ಸಂಶೋಧನೆಯಿಂದಕ್ಕೇ. ಹೀಗೆ ಲೋಕಪ್ರಸಿದ್ಧವಾಗಿದ್ದ ಅದೇ ಸೆಂಟ್ರಲ್ ಕಾಲೇಜಿನಲ್ಲೇ ಕೆಲವು ವರ್ಷಗಳ ಹಿಂದೆ ನಾನು ವಿದ್ಯಾರ್ಥಿಯಾಗಿದ್ದಾಗ ಇದ್ದ ಸ್ಥಿತಿ ನೋಡಿ! ಎಂ. ಎಸ್ಸಿ.ಯಲ್ಲಿ ಎರಡನೇ ವರ್ಷ ಪರಿಣತಿ ಪಡೆಯಲು ನಾಲ್ಕು ವಿಶೇಷ ವಿಭಾಗಗಳಿದ್ದುವು. ಸಾಮಾನ್ಯವಾಗಿ ಯಾರು ಯಾವ ವಿಭಾಗವನ್ನು ಇಚ್ಛಿಸುತ್ತಾರೋ ಅದನ್ನೇ ವಿದ್ಯಾರ್ಥಿಗಳಿಗೆ ನೀಡುವುದು ಸಂಪ್ರದಾಯವಾಗಿತ್ತು. ಆದರೆ ಆ ವರ್ಷ ಇದ್ದ ನಲವತ್ತು ವಿದ್ಯಾರ್ಥಿಗಳಲ್ಲಿ ವರ್ಣಪಟಲ ವಿಜ್ಞಾನವನ್ನು ವಿಶೇಷ ವಿಷಯವಾಗಿ ಆರಿಸಿಕೊಳ್ಳಲು ಒಬ್ಬ ವಿದ್ಯಾರ್ಥಿಯೂ ಮುಂದೆ ಬರಲಿಲ್ಲ! ಖಾಲಿ ತರಗತಿಗೆ ಪಾಠ ಹೇಳಬೇಕಾಗಿ ಬಂದ ಈ ಆಭಾಸಕರ ಪರಿಸ್ಥಿತಿಯನ್ನು ತಡೆಯಲಾಗದೆ ಕೊನೆಗೆ ಎಲ್ಲರಿಗಿಂತಲೂ ಕಡಿಮೆ ಅಂಕಗಳನ್ನು ಗಳಿಸಿದ್ದ ಒಬ್ಬಿಬ್ಬರನ್ನು ಬಲವಂತವಾಗಿ ವರ್ಣಪಟಲ ವಿಭಾಗಕ್ಕೆ ದೂಡಬೇಕಾಯಿತು ಪ್ರೊಫೆಸರುಗಳು!

ಇಷ್ಟೊಂದು ಉಪೇಕ್ಷೆಗೆ ಒಳಗಾಗಿದ್ದ ವಿಷಯವೊಂದಕ್ಕೆ ನೋಬೆಲ್ ಸಮಿತಿ ಈಗ ಪ್ರಶಸ್ತಿ ನೀಡಿದ್ದೇಕೆ? ಕೇವಲ ಗೌರವಾರ್ಥಕ್ಕಲ್ಲ. ಕೊಟ್ಟ ಕಾರಣಗಳಲ್ಲಿ ಒಂದು ಇನ್ನು ಮುಂದೆ ಇದರಿಂದ ಬಹಳ ಉಪಯೋಗವಾಗಲಿದೆ ಎನ್ನುವುದು. ಅಂದರೆ ಈ ಪ್ರಶಸ್ತಿ ಪುರಾತನ ಪುರಾಣಕ್ಕೆ ಪೇರಿಸಿದ ಪುರಸ್ಕಾರವಲ್ಲ; ಭವಿಷ್ಯದಲ್ಲಿ ಬರಲಿರುವ [illegible] ಉಪಯೋಗಕ್ಕಿತ್ತ ಬಹುಮಾನ!

## ಲೇಸರ್

ಹಣ್ಣಾಗಿ ಹೋಗಿದ್ದ ವೃದ್ಧನಿಗೆ ನವಯೌವನವಾಗತೊಡಗಿರುವುದು ಹೇಗೆ? ಆ ಮೈಯಲ್ಲಿ ಮಿಂಚೊಂದು ಹರಿದಾಡಲಾರಂಭಿಸಿರುವುದರಿಂದ. ಆ ಮಿಂಚೇ 'ಲೇಸರ್'.

ಲೇಸರ್ (Laser) ಎನ್ನುವುದು Light Amplification by Stimulated Emission of Radiation ಎನ್ನುವ ವಿವರಣೆಯನ್ನು ಸೂಚಿಸುವ ಚುಟುಕು ಹೆಸರು. ಇದನ್ನೇ ಕನ್ನಡದಲ್ಲಿ ಸುಂದರವಾಗಿ ಪ್ರಚೋದಿತ ಪ್ರಕಿರಣದಿಂದ ಪ್ರಕಾಶ ಪ್ರವರ್ಧನೆ ಎನ್ನಬಹುದು.

ಸಾಮಾನ್ಯವಾಗಿ ನಮ್ಮ ಸುತ್ತ ಮುತ್ತಲೂ ಕಾಣುವ 'ಶುದ್ಧ'ವೆನಿಸಿಕೊಳ್ಳುವ ಬಣ್ಣಗಳೂ ವಾಸ್ತವವಾಗಿ ಅನೇಕ ತರಂಗಾಂತರಗಳನ್ನು ಒಳಗೊಂಡಿರುತ್ತವೆ. ಉದಾಹರಣೆಗೆ ಶುದ್ಧ ಕೆಂಪು ಎಂದು ಕಂಡರೂ ಅದರಿಂದ ಬರುವ ಬೆಳಕನ್ನು ವಿಭಜಿಸಿದರೆ ಅಲ್ಲಿ ೬೫೦೦ ಅಂಗ್‌ಸ್ಟ್ರಾಮ್‌ನಿಂದ ಹಿಡಿದು ೭೫೦೦ ಅಂಗ್‌ಸ್ಟ್ರಾಮ್‌ವರೆಗಿನ ಎಲ್ಲಾ ತರಂಗಾಂತರಗಳೂ ಗೋಚರಿಸಬಹುದು. (ಅಂಗ್‌ಸ್ಟ್ರಾಮ್ ಎಂದರೆ ಒಂದು ಮಿಲಿಮೀಟರಿನ ಕೋಟಿಯಲ್ಲಿ ಒಂದು ಭಾಗ) ಒಂದು ವೇಳೆ ೬೮೦೦ ರಿಂದ ೭೨೦೦ ರವರೆಗಿನ ತರಂಗಾಂತರಗಳು ಮಾತ್ರ ಇರುವ ಬೆಳಕನ್ನು ಪಡೆಯುವುದಾದರೆ ಅದು ಮೊದಲಿನದಕ್ಕಿಂತ ಶುದ್ಧವಾದ ಕೆಂಪು. ಹೀಗೇ ತರಂಗಾಂತರಗಳ ಮಿಶ್ರಣವನ್ನು ಕಡಿಮೆ ಮಾಡುತ್ತಾ ಬಂದಷ್ಟೂ ವರ್ಣ ಶುದ್ಧವಾಗುತ್ತದೆ. ಆದರೆ ಸಾಮಾನ್ಯವಾಗಿ ಬೆಳಕು ವಸ್ತುಗಳ ಉರಿಯುವಿಕೆಯಿಂದ ಉಂಟಾಗುವುದರಿಂದ ಮತ್ತು ಆ ಪರಮಾಣುಗಳ ಎಲೆಕ್ಟ್ರಾನ್‌ಗಳನ್ನು ನಾವು ಹತೋಟಿಯಲ್ಲಿಡಲು ಆಗದಿರುವುದರಿಂದ ಶುದ್ಧ ವರ್ಣಗಳು ಅಪರೂಪ. ಸಿಕ್ಕರೂ ಕ್ಷೀಣವಾಗಿರುತ್ತವೆ.

ಆದರೆ ಪರಮಾಣುಗಳನ್ನೇ ಮಣಿಸಿ ಅವು ಶುದ್ಧವಾದ ಬೆಳಕನ್ನು ಹೊಮ್ಮಿಸುವಂತೆ ಮಾಡುವ ಕ್ರಮವೊಂದನ್ನು [illegible] ಇಬ್ಬರು ಅಮೇರಿಕನ್ ವಿಜ್ಞಾನಿಗಳು (೧೯೫[illegible]

ತಿಳಿಯಲು ಭಾರೀ ವಿಜ್ಞಾನಿಗಳಿಗೂ ಸಾಧ್ಯವಾಗಿಲ್ಲವೆ! ತತ್ವದ ತಳಹದಿಯೇನೂ ತಿಳಿಯದೆಯಾದರೂ ವಾಸ್ತವದಲ್ಲಿ ನಡೆಯುವ ಸಾವಿರಾರು ರಾಸಾಯನಿಕ ಕ್ರಿಯೆಗಳನ್ನು ಪೂರ್ತಿಯಾಗಿ ಅರ್ಥ ಮಾಡಿಕೊಳ್ಳಲು ಸಾಧ್ಯವಾಗಿಲ್ಲ. ಅಂತಹ ವಿವರಗಳು ತಿಳಿಯದೇ ರಾಸಾಯನಿಕ ಕ್ರಿಯೆಗಳ ನಿಯಂತ್ರಣ, ನಿಯೋಜನೆಗಳು ಸಾಧ್ಯವಿಲ್ಲ. ಇದೇ ಸ್ಥಿತಿ ಮುಂದುವರೆದರೆ ವಿಜ್ಞಾನ ಜನೋಪಯೋಗಿಯಾಗದೇ ಕೇವಲ ಜ್ಞಾನದ ರಂಗದಲ್ಲೇ ನಿಂತು ಹೋಗುತ್ತದೆ. ಹಾಗಾಗದಿರಲಿ ಎಂದು ಅಮೇರಿಕಾದವರೇ. ಈ ವರ್ಷದ ಭೌತ ವಿಜ್ಞಾನದ ನೋಬೆಲ್ ಪ್ರಶಸ್ತಿ ಗಳಿಸಿರುವ ವಿಜ್ಞಾನಿಗಳನ್ನು ಮೆಚ್ಚಿ ಕರತಾಡನ ಮಾಡಲೇಬೇಕು. ಹಳೆಯ ಕಂದೀಲನ್ನೇ ಹಿಡಿದುಕೊಂಡು ಹೊಸ ದಾರಿ ಹೊಸ ರಂಗವನ್ನು ಕಂಡು ಹಿಡಿದು ಜಗತ್ತಿಗೆ ಸಾರಿದ ಸಾಧಕರಂತೆ ಇವರು ಭೌತ ವಿಜ್ಞಾನದ ಹಳೆಯ ತಂತ್ರವನ್ನೇ ಪರಿಷ್ಕರಿಸಿ ರಾಸಾಯನಿಕ ರಂಗದಲ್ಲಿ ಹೊಸ ಬೆಳಕೊಂದರ ಮಹಾದ್ವಾರವನ್ನು ಈಗ ತೆರೆದಿದ್ದಾರೆ. ✡

## ಮಾಯಾಷಡ್ಭುಜ (Magic Hexagon)

ವಿನೋದ ಗಣಿತದ ರಸನಿಮಿಷಗಳಲ್ಲೊಂದು— ಮಾಯಾಷಡ್ಭುಜ. ೧ ರಿಂದ ೧೯ ರ ವರೆಗಿನ ಸಂಖ್ಯೆಗಳನ್ನು ಷಡ್ಭುಜದೋಪಾದಿಯಲ್ಲಿ ೩-೪-೫-೪-೩ ರ ಕ್ರಮದಲ್ಲಿ ಸಾಲಾಗಿ, ಯಾವುದೇ ಸಾಲಿನ ಮೊತ್ತ ಒಂದೇ ಆಗಿರುವಂತೆ ಬರೆದರೆ ಮಾಯಾಷಡ್ಭುಜ ಸೃಷ್ಟಿಯಾಗುವುದು.




ಚಿತ್ರದಲ್ಲಿನ ಷಡ್ಭುಜದ ಯಾವುದೇ ಸಾಲಿನ ಸಂಖ್ಯೆಗಳ ಮೊತ್ತ ೩೮ (ಉದಾ: ೧೫+೧೪+೯=೩೮). ಈ ಷಡ್ಭುಜ ಅಮೇರಿಕದ ಕ್ಲಿಫರ್ಡ್ ಆಡಮ್ಸ್ ಎಂಬ ರೈಲ್ವೆ ಕಾರಕೂನ ೧೯೧೦ ರಲ್ಲಿ ಆರಂಭಿಸಿದ. ೪೭ ವರ್ಷಗಳ ಅವಿರತ ಅನ್ವೇಷಣೆಯ ಫಲ. ದುರ್ದೈವವಶಾತ್ ಆತ ಈ ಸಮಸ್ಯೆಯ ಉತ್ತರ ಬರೆದಿಟ್ಟಿದ್ದ ಕಾಗದಗಳು ಕಳೆದು ಹೋಗಿ ೫ ವರ್ಷಗಳ ಮರು ಪ್ರಯತ್ನ ನಡೆಸಿದ-ಅಷ್ಟರಲ್ಲಿ ಕಳೆದುಹೋಗಿದ್ದ ಕಾಗದ ಪತ್ರಗಳು ಸಿಕ್ಕಿದವು!

ವಿಶೇಷವೆಂದರೆ, ಟ್ರಿಗ್ ಎಂಬ ಗಣಿತ ಶಾಸ್ತ್ರಜ್ಞನ ಸಿದ್ಧಾಂತದ ಪ್ರಕಾರ ಆಡಮ್ಸ್‌ನ ಷಡ್ಭುಜವೊಂದನ್ನು ಬಿಟ್ಟು ಬೇರಾವ ಬಗೆಯ ಷಡ್ಭುಜವೂ ಇರಲು ಸಾಧ್ಯವಿಲ್ಲ. ಹೀಗಾಗಿ ಗಣಿತಶಾಸ್ತ್ರಕ್ಕೆ ಆಡಮ್ಸ್‌ನ ಕೊಡುಗೆ ಅಭೂತಪೂರ್ವ.

— ಡಾ. ಕೆ. ಎಸ್. ಸುಹಾಸನ

ಪರಿಸ್ಥಿತಿಯಲ್ಲಿ ಪ್ರಸವ ವೇದನೆಯೆ? ಪರಮಾತ್ಮ!

ಬೀರುವಿನ ಬಾಗಿಲು ತೆಗೆದು ಬಿಳಿಯ ಹೊದಿಕೆಯನ್ನು ಅವಳ ಮೇಲೆ ಹೊದಿಸಿದೆ. ಟೆಲಿಫೋನಿನಲ್ಲಿ ಆಂಬುಲೆನ್ಸಿಗೆ ಕರೆಕೊಟ್ಟೆ. ಅವಳ ತಂದೆಯನ್ನು ಸಂಪರ್ಕಿಸಿ ವಿಚಾರವನ್ನು ತಿಳಿಸಿದೆ. ಅವಳ ಗಂಡನನ್ನು ಆಸ್ಪತ್ರೆಗೆ ಬರುವಂತೆ ಸೂಚ್ಯವಾಗಿ ತಿಳಿಸಿ ಸಿದ್ಧಳಾದೆ.

ಕೆಲವೇ ನಿಮಿಷಗಳಲ್ಲಿ ಆಂಬುಲೆನ್ಸ್ ಬಂತು. ಅಷ್ಟರಲ್ಲಿ ನೆರೆಹೊರೆಯವರೆಲ್ಲ ಸೇರಿಬಿಟ್ಟರು. ಅವರೊಡನೆ ನಾನೂ ಆಸ್ಪತ್ರೆಗೆ ಹೋದೆ.

ಅವಸರದ ಕೇಸು. ಜತೆಗೆ ಒಬ್ಬ ಡಾಕ್ಟರೂ ಬಂದಿದ್ದಾರೆ ಎಂಬುದನ್ನು ಕಂಡ ಆಸ್ಪತ್ರೆಯ ಸಿಬ್ಬಂದಿ ಜರೂರಾಗಿ ಸಿದ್ಧವಾಯಿತು. ನಾಲ್ಕು ಮಂದಿ ವೈದ್ಯರ ತಂಡ ಕಾರ್ಯನಿರತವಾಯಿತು. ಅವಳನ್ನು ಹೆರಿಗೆಯ ವಾರ್ಡಿಗೆ ಕರೆತರಲಾಯಿತು. ಸ್ವಲ್ಪ ವೇಳೆ ಅಲ್ಲಿದ್ದು ಸ್ವಾಗತ ಕೋಣೆಗೆ ಬಂದೆ. ಅವಳ ಗಂಡ ಅವಸರವಸರವಾಗಿ ಓಡಿಬಂದ.

"ನೋವು ಕಾಣಿಸಿಕೊಂಡಿದೆಯೇ? ಹೇಗಿದ್ದಾಳೆ?..." ಆತಂಕದಿಂದ ಕೇಳಿದ. ಅವನಿಗೆ ಸತ್ಯಾಂಶವನ್ನು ತಿಳಿಸಲು ನನಗೆ ಬಹಳ ಕಷ್ಟವಾಯಿತು.

"ನಿಮ್ಮ ಹೆಂಡತಿ ಸುಟ್ಟ ಗಾಯಗಳಿಂದ ಇಲ್ಲಿ ದಾಖಲಾಗಿದ್ದಾಳೆ. ಸಾಲದುದಕ್ಕೆ ನೋವೂ ಕಾಣಿಸಿಕೊಂಡಿದೆ..."

ಸಿಡಿಲೆರಗಿದಂತೆ ನಿಂತ ಅವನನ್ನು ಮರೆಯಲು ಸಾಧ್ಯವೇ ಇಲ್ಲ.

ತಾರುಣ್ಯ ... ಮೃದು ಹೃದಯ ... ಅವಳಿಗೆ ಇಂಥ ಗತಿಯೆ?...ಅಂದೆಲ್ಲ ನನಗೆ ಯಾವುದರಲ್ಲೂ ಮನಸ್ಸು ಹರಿಯಲಿಲ್ಲ. ಅಂದು ರಾತ್ರಿ ಅವಳು ಒಂದು ಗಂಡುಮಗುವನ್ನು ಹೆತ್ತಳು. ಅವಳಿಗೆ ಸ್ಮರಣೆ ಇರಲಿಲ್ಲ...ಮಾರನೇ ಬೆಳಿಗ್ಗೆ ಅವಳು ಕಣ್ಣು ಮುಚ್ಚಿದಳು.

ತೊಟ್ಟಿಲಲ್ಲಿ ಮಲಗಿದ್ದ ಕೂಸನ್ನು ಕೈಗೆತ್ತಿಕೊಂಡಾಗ ನನ್ನ ಕಣ್ಣು ತೇವಗೊಂಡಿತು. 'ನೀನು ಅನಾಥನಾಗಿ ಬೆಳೆಯುತ್ತೀಯಾ...?' ನನ್ನ ಮನಸ್ಸಿನಲ್ಲಿ ಮೂಡಿದ ಪ್ರಶ್ನೆ.

ಅದಾದ ಬಳಿಕ ನಾವು ನಮ್ಮ ಸ್ವಂತ ಮನೆಗೆ ಹೊರಟುಹೋದೆವು. ಆ ಹುಡುಗ ಬೇರೆ ಕಡೆ ಕೆಲಸವನ್ನು ಹುಡುಕಿಕೊಂಡು ಹೋದ ಎಂದು ಗೊತ್ತಾಯಿತು. ನಮ್ಮ ಸಂಪರ್ಕ ತಪ್ಪಿ ಹತ್ತು ವರ್ಷ ಕಳೆದುಹೋಯಿತು.

ಒಂದು ಶನಿವಾರ; ಅಂದು ನನಗೆ ಬಿಡುವು. ಮುಂಜಾನೆ ಸೂಪರ್ ಮಾರ್ಕೆಟ್ಟಿನಲ್ಲಿ ಸಾಮಾನುಗಳನ್ನು ಕೊಂಡು ಹೊರಬಂದೆ.

"ಡಾಕ್ಟರ್," ಎಂಬ ಕರೆಯನ್ನು ಕೇಳಿ ಹೊರಳಿ ನೋಡಿದೆ.

"ನನ್ನ ನೆನಪಿದೆಯೆ?" ಅವನು ಕೇಳಿದ.

"ಹಲವು ದಿನಗಳ ಬಳಿಕ ಕಾಣ್ತಿದ್ದೀವಿ. ಮಗು ಹೇಗಿದ್ದಾನೆ?" ಕೇಳಿದೆ.

"ದೀಪಕ್, ಬಾ ಇಲ್ಲಿ..." ಅವನು ಕರೆದಾಗ ಆರೋಗ್ಯವಾಗಿ ಬೆಳೆದ ಗುಂಗುರು ಕೂದಲಿನ, ನಗೆ ಸೂಸುವ ಕಣ್ಣಿನ, ಗೋಧಿ ಮೈಬಣ್ಣದ ನೀಲಿ ಸಫಾರಿ ಧರಿಸಿದ್ದ ಹತ್ತು ವರ್ಷದ ಹುಡುಗ ನನ್ನೆದುರು ಬಂದು ನಿಂತ.

ಆ ಕಣ್ಣು– ಮೂಗು–ತಲೆಗೂದಲು– ತುಟಿ ಎಲ್ಲ ತಾಯಿಯ ಅಚ್ಚು. ಆಶ್ಚರ್ಯದಿಂದ ನೋಡಿದೆ. "ಯಾರು ಅಂತ ಗೊತ್ತೆ?" ಎಂದು ತಂದೆ ಪರಿಚಯಿಸಿದಾಗ ತುಸು ನಾಚಿ ಹಿಂದಕ್ಕೆ ಸರಿದ.

"ನನಗೆ ನನ್ನ ಗುರುತಿಲ್ಲ...ನಾನು ನಿನಗೆ 'ಗ್ರಾನ್ನಿ' ಸಂಬಂಧ..." ಎಂದು ನುಡಿದು ಪ್ರೀತಿಯಿಂದ ಬೆನ್ನು ನೇವರಿಸಿದೆ.

"ನನ್ನ ಎರಡನೇ ಹೆಂಡತಿ ಇವನನ್ನು ಚೆನ್ನಾಗಿ ನೋಡಿಕೊಳ್ಳುತ್ತಾಳೆ. ಸ್ವಂತ ಮಗನಂತೆ ಪ್ರೀತಿಸ್ತಾಳೆ," ಹೆಮ್ಮೆಯಿಂದ ತಂದೆ ಪಿಸುಗುಟ್ಟಿದ.

"ದೊಡ್ಡವನಾದ ಮೇಲೆ ಏನಾಗಬೇಕಂತಿದ್ದಿ?" ವಿನೋದವಾಗಿ ಕೇಳಿದೆ.

"ಡಾಕ್ಟರಾಗಬೇಕಂತಿದ್ದೀನಿ..."

"ಓಹೋ...ನಾನು ಮುದುಕಿಯಾದಾಗ ನಿನ್ನ ಬಳಿಗೇ ಚಿಕಿತ್ಸೆಗೆ ಬರ್ತೀನಿ; ಮರೀಬೇಡ..." ಎಂದು ನುಡಿದು ಗುಲಾಬಿ ಕೆನ್ನೆಯನ್ನು ಸವರಿದಾಗ ನನಗೆ ಅವ್ಯಕ್ತ ವೇದನೆ...

ಹೀಗೂ ಒಂದು ಹೂವು... ✡



# ಇದುವೇ ಜೀವ ಇದು ಜೀವನ

ಮುಂಜಾನೆ ಹತ್ತು ಗಂಟೆಗೆ ನಮ್ಮ ಯೂನಿಯನ್ ಮೀಟಿಂಗ್. ಮನೆ ಬಿಟ್ಟಾಗಲೇ ಹತ್ತುಹೊಡೆದು ಹೋಗಿತ್ತು. ಅವಸರದಿಂದಲೇ ಹೊರಟಿದ್ದೆ. ಮುಂದಿನ ಬಸ್ಸಿಗಾಗಿ ಇಪ್ಪತ್ತು ನಿಮಿಷ ಕಾಯಬೇಕಾಗಿತ್ತು. ನಡೆದುಹೋದರೆ ಅರ್ಧಗಂಟೆಯಲ್ಲಿ ಯೂನಿಯನ್ ಆಫೀಸ್ ಮುಟ್ಟಬಹುದಾಗಿದ್ದರೂ ಅಷ್ಟು ಸಮಯ ಕಳೆದುಹೋಗುವುದಲ್ಲ ಎಂಬ ಚಿಂತೆ. ಅಷ್ಟರಲ್ಲಿ ಹಿಂದಿನಿಂದ ಸ್ಕೂಟರಿನಲ್ಲಿ ಬಂದ ಪರಿಚಿತರೊಬ್ಬರ ಧ್ವನಿ ಕೇಳಿಸಿತು. ಮರುಮಾತನಾಡದೇ ಹಿಂದಿನ ಸೀಟು ಏರಿ ಕುಳಿತು ಕಾರ್ಪೊರೇಶನ್ ಕಚೇರಿ ಹತ್ತಿರ ಬಿಟ್ಟರೆ ಸಾಕು ಎಂದೆ.

ಕರೆದು ಸ್ಕೂಟರ್ ಹತ್ತಿಸಿಕೊಂಡವರೊಂದಿಗೆ ಮಾತನಾಡದೇ ಸುಮ್ಮನೆ ಕುಳಿತುಕೊಳ್ಳಲಿಕ್ಕಾಗುತ್ತದೆಯೆ? ಏನನ್ನಾದರೂ ಆಡಬೇಕೆಂದು ಬಾಯಿ ತೆರೆದೆ. "ನಿಮ್ಮ ಅಣ್ಣ ಮೊದಲಿನ ನೌಕರಿ ಬಿಡಬಾರದಾಗಿತ್ತು, ಒಳ್ಳೆಯ ನೌಕರಿ," ಎಂದೆ. ನನ್ನ ಸ್ನೇಹಿತರು 'ಹಾಂ, ಹೂಂ' ಎರಡರಲ್ಲಿ ಒಂದನ್ನು ಉಚ್ಚರಿಸಿರಬೇಕು. ದಾರಿ ಸಾಗುತ್ತಿದ್ದಂತೆಯೇ "ನಿಮ್ಮ ಹೊಸ ಬಿಜನೆಸ್ ಹೇಗಿದೆ?" ಎಂದು ಕೇಳಿದೆ. ಮೊದಲು ಯೂನಿಯನ್ ಆಫೀಸ್ ಮುಟ್ಟುವ ತರಾತುರಿಯಲ್ಲಿದ್ದಾಗ ಅದು ಏನು ಉತ್ತರ ಹೇಳಿದರೋ ಗೊತ್ತಾಗಲಿಲ್ಲ.

ಹೀಗೆಯೇ ಮಾತು ಆಡುತ್ತಿದ್ದಂತೆಯೇ ಕಾರ್ಪೊರೇಶನ್ ಕಚೇರಿ ಬಂದಿತ್ತು. ಅವಸರದಿಂದ ಸ್ಕೂಟರ್ ಮೇಲಿಂದ ಜಿಗಿದವನೇ ಥ್ಯಾಂಕ್ಸ್ ಹೇಳಲು ಅವರತ್ತ ಮುಖ ತಿರುವಿದೆ. ಒಮ್ಮೆಲೆ ಶಾಕ್ ಬಡೆದಂತಾಯಿತು. ಅವರು ಮುಗುಳ್ನಗುತ್ತಲೇ ನನ್ನ ಥ್ಯಾಂಕ್ಸ್ ಸ್ವೀಕರಿಸಿ ಎಕ್ಸಲರೇಟರ್ ಒತ್ತಿದರು. ಹತ್ತುಮಾರು ನೂರದ ಯೂನಿಯನ್ ಆಫೀಸು ಮುಟ್ಟಲು ಪೂರ್ಣ ಎರಡು ನಿಮಿಷಗಳೇ ಬೇಕಾದುವು. ದಿಗ್ಭ್ರಮೆಗೊಂಡೇ ಹೊಸ್ತಿಲು ತುಳಿದೆ. ನನ್ನನ್ನು ಸ್ಕೂಟರ್ ಮೇಲೆ ಕರೆದುತಂದವರು, ನಾನು ತಿಳಿದುಕೊಂಡಿದ್ದಂತೆ ಆನಂದ ಚಚಡಿಯವರಾಗಿರಲಿಲ್ಲ, ಬದಲಾಗಿ ಇನ್ನೊಬ್ಬ ಮಿತ್ರ ತೆಂಗಿನಕಾಯಿಯವರಾಗಿದ್ದರು. ನನ್ನ ಅವಸರದಲ್ಲಿ ಅಷ್ಟೇ ಉತ್ತರ, ಗಾತ್ರದ ಆ ಇಬ್ಬರಲ್ಲಿ ಫರಕು ಕಂಡಿರಲಿಲ್ಲ.

—ಎಸ್ ಕೆ

ನಾನು ರೈಲಿನಲ್ಲಿ, ಸೊಲ್ಲಾಪುರದಿಂದ ವಿಜಾಪುರಕ್ಕೆ ಬರುತ್ತಿದ್ದೆ. ನಾನು ಕುಳಿತಿದ್ದ ಡಬ್ಬಿ ಜನಗಳಿಂದ ತುಂಬಿಹೋಗಿತ್ತು. ನನ್ನ ಎದುರಿಗೆ ಮೂರ್ನಾಲ್ಕು ಜನ ಹಳ್ಳಿಯ ಹೆಂಗಳೆಯರು ಕುಳಿತಿದ್ದರು. ಅವರ ಕಾಲ್ಕೆಳಗೆ ಹಾಗೂ ಬದಿಯಲ್ಲಿಟ್ಟಿದ್ದ ಕಾಯಿಪಲ್ಲೆ ಬುಟ್ಟಿಗಳನ್ನು ನೋಡಿದರೆ, ಅವರು ಯಾವುದೋ ಸಂತೆಗೆ ಹೊರಟಂತಿತ್ತು. ಜೊತೆಗೆ ತಮ್ಮ ಎಳೆ ಮಕ್ಕಳನ್ನು ಕೂಡಾ ಕರೆದುಕೊಂಡು ಬಂದಿದ್ದರು. ಆಗೊಬ್ಬ ಹಣ್ಣು-ಹಣ್ಣು ಮುದುಕಿ ಜನಗಳ ಮಧ್ಯೆ ತೆವಳುತ್ತ, ಓಲಾಡುತ್ತ ಭಿಕ್ಷೆಗಾಗಿ ಕೈಯೊಡ್ಡಿ ನನ್ನೆಡೆ ಬರತೊಡಗಿತ್ತು. ನನ್ನ ಕಲ್ಪನಾಲೋಕದಲ್ಲಿ ಭಾರತದ ಬಡತನ, ಜೀವನೋಪಾಯಕ್ಕಾಗಿ ಜನರು ಮಾಡುವ ಹಲವಾರು ಕೃತ್ಯಗಳು ಸುಳಿದಾಡಿ ಅದೆಲ್ಲಕ್ಕಿಂತ ಬಿಕ್ಕೆ ಬೇಡುವುದು ಸಾವಿರ ಪಾಲು ಉತ್ತಮವೆನಿಸಿತು. ಕರುಣೆ ಕೈಗೆ ಬಂದು, ಕೈ ನೇರವಾಗಿ ಜೇಬಿಗಿಳಿಯಿತು. ಹತ್ತುಪೈಸೆ ಹೊರತೆಗೆದು ಆ ಮುದುಕಿಯನ್ನು ನನ್ನತ್ತ ಕರೆದು ದಾನ ಮಾಡಿದೆ. ದಾನಮಾಡಿದೆನೆಂದು ಸಮಾಧಾನದಿಂದುಂಟಾದ ಸಂತೋಷದ ಠೀವಿಯಲ್ಲೇ ಕುಳಿತೆ. ಉಳಿದ ಜನ ಮುಂದಕ್ಕೆ ಹೋಗು ಎನ್ನುತ್ತಿದ್ದರೇ ಹೊರತು ಯಾರೂ ದಾನ

ಮಾಡಿದಂತೆ ಕಾಣಲಿಲ್ಲ. ಆ ಮುದುಕಿ ನನ್ನ ಮುಂದೆ ಕುಳಿತು ಹೆಂಗಳೆಯರೆದುರು ಕೈಯೊಡ್ಡಿದಾಗ ಅವರು ತಿರಸ್ಕಾರದ ನೋಟ ಬೀರಿ, "ಮುಂದಕ್ಕೆ ಹೋಗಪ್ಪ. ನಮ್ಮ ನಮ್ಮದೇ ರಗಡ ಆದಾಗ ನಿನ್ನದೆಲ್ಲೀ ಕಿರಿ-ಕಿರಿ!" ಎಂದು ನುಡಿದಾಗ ನನ್ನ ಮನಸ್ಸು ಸ್ವಲ್ಪ ರೇಗಿತು. ನಾನು ಸಾವರಿಸಿಕೊಂಡು, "ಅಲ್ರಿ, ಹೊರಗಡೆ ಚಹಾ, ಚೂಡಾ ಅಂತಾ ರೂಪಾಯಿ ಖರ್ಚು ಮಾಡ್ತೀರಿ. ಹತ್ತು ಪೈಸೆ ದಾನಮಾಡಿದರೆ ಏನಾಗ್ತದ?" ಎಂದದ್ದೇ ತಡ ಅವರು, "ನೀವೇನು ನೌಕರದಾರ ಆದೀರಿ. ದಾನಮಾಡ್ತೀರಿ. ನಾವು ಹೊಲದಾಗ ದುಡಿಬೇಕಾಗ್ತದ್ರೀ-ಮುಂಜಾನಿಂದ ಸಂಜೀಮಟ. ಅದೂ ಎಂಟಾಣೆ ಕೊಡ್ತಾರ್ರೀ," ಎಂದರು. ನಾನು ಆಗ, "ಈ ಕಾಯಿಪಲ್ಲೆ ಯಾರದು?" ಎಂದು ಕೇಳಿದ್ದಕ್ಕೆ. "ನಮ್ಮವರ್ರೀ" ಎಂದರು. "ಅಂದ ಮೇಲೆ ಏನು ತ್ರಾಸ ಆದ?" ಎಂದು ಕೇಳಿದೆ.

"ಇವು ಮಾರಾಟ ಆಗ್ತಾವ ಅಂತ ಏನು ಖಾತ್ರಿ ಆದರಿ? ಒಮ್ಮೊಮ್ಮೆ ಪುಕ್ಕಟ ಕೊಟ್ಟು ಬರಬೇಕಾಗ್ತದರಿ. ಹಣ ಅಂದರ ಹಳ್ಳ್ಯಾಗ ದುಡದ್ರ ಗೊತ್ತಾಗತೈತ್ರಿ. ನಮ್ಮ ಜೊತಿ ಎಳೇ ಕೂಸುಗಳೂ ದುಡಿತಾವ್ರಿ. ದುಡಿಯೂ ವಯಸ್ಸ ಇವರ್ದು? ಇದೆಲ್ಲಾ ಮಾಡೂದು ಹೊಟ್ಟಿಗಾಗ್ರಿ. ಇವ್ರು ಭಿಕ್ಷಾ ಬೇಡಿ ಆರಾಮ ತಿಂತಾರ್ರಿ. ನಾವು, ದುಡಿದು ತಿನ್ನಬೇಕ್ರಿ," ಎಂದು ಮಾತಿನ ಸುರಿಮಳೆಯನ್ನೇ ಸುರಿಸಿದರು. ಅಷ್ಟರಲ್ಲಿ ಯಾವುದೋ ಒಂದು ಸ್ಟೇಶನ್ ಬಂದು ಗಾಡಿ ನಿಂತಿತು. ಆ ಹೆಂಗಳೆಯರಲ್ಲೊಬ್ಬಳು ನನ್ನನ್ನು ಕರೆದು, "ಅಲ್ಲಿ ನೋಡ್ರಿ, ನೀವು ಹಣಕೊಟ್ಟ ಮುದುಕಿ," ಎಂದು ಕೈಮಾಡಿ ತೋರಿಸಿದಳು. ನಾಲ್ಕೈದು ಜನ ಮುದುಕಿಯನ್ನು ಸುತ್ತುವರೆದು, "ಇವಳನ್ನು ಹಾಗೇ ಬಿಡಬಾರದು," ಇವಳನ್ನು ಪೋಲೀಸರಿಗೆ ಕೊಡಬೇಕು," ಮುಂತಾಗಿ ಮಾತಾಡುತ್ತಿದ್ದರು. ಸಂದರ್ಭ ಅರ್ಥವಾಗಿತು.

ಆದರೆ ವಿದ್ಯಾವಂತನೆಂಬ ಹೆಮ್ಮೆಯ ಅಮಲಿನಲ್ಲಿದ್ದ ನನ್ನ ಕಣ್ಣು ತೆರೆಸಿ ಜಗತ್ತಿನ ವಾಸ್ತವ ದರ್ಶನವನ್ನು ನನಗೆ ಮಾಡಿಸಿದ್ದರು ಈ ಹೆಂಗಳೆಯರು.

—ಸುಧೀಂದ್ರ ಕುಲಕರ್ಣಿ

ನನ್ನ ಎರಡು ವರ್ಷದ ಮಗು ಬಹಳ ತುಂಟ. ಹಾಗಾಗಿಯೇ ಸಾಧ್ಯವಾದಷ್ಟು ಮನೆಯಲ್ಲಿ ಕೆಲವು ವಸ್ತುಗಳನ್ನು ಅವನ ಕೈಗೆ ಸಿಗದಂತೆ ಎಚ್ಚರ ವಹಿಸುತ್ತಿದ್ದೆ. ಆದರೂ ಒಮ್ಮೆ ಅಡಿಗೆ ಮಾಡುತ್ತಿದ್ದ ಗಡಿಬಿಡಿಯಲ್ಲಿ ಬೆಂಕಿ ಪೆಟ್ಟಿಗೆಯನ್ನು ಎತ್ತಿಡುವುದನ್ನು ಮರೆತಿದ್ದೆ. ಆಕಸ್ಮಾತ್ತಾಗಿ ಒಂದು ಬೆಂಕಿ ಕಡ್ಡಿಯನ್ನು ಗೀರಿ ಅದರ ಬೆಂಕಿ ಕಾವಿನಿಂದ ಕಿಟಾರನೆ ಚೀರಿ ಬೆಂಕಿ ಕಡ್ಡಿಯನ್ನು ಆಚೆ ಎಸೆದು ಜೋರಾಗಿ ಅಳಲು ಪ್ರಾರಂಭಿಸಿದ. ಅಷ್ಟರಲ್ಲಿ ನಾನು ಇನ್ನು ಆಗಬಹುದಾದ ಅನಾಹುತವನ್ನು ತಪ್ಪಿಸಿ ತಕ್ಷಣವೇ ಮಗುವನ್ನು ಎತ್ತಿಕೊಂಡು ಸಮಾಧಾನ ಮಾಡಲು ಪ್ರಯತ್ನಿಸಿದೆ. ಕೈಯ ಬೆರಳುಗಳು ಸ್ವಲ್ಪ ಕೆಂಪಗೆ ಸುಟ್ಟಿದ್ದವು. ಕೊಬ್ಬರಿ ಎಣ್ಣೆಯನ್ನು ಕೈಗೆ ಹಚ್ಚಿ ಗಾಳಿ ಬೀಸಿದೆ. ಆದರೂ ಉರಿ ಕಡಿಮೆಯಾಗದ್ದರಿಂದಲೋ ಏನೋ ಇನ್ನೂ ಅಳುತ್ತಲೇ ಇದ್ದ. ನನ್ನೆಲ್ಲಾ ಪ್ರಯತ್ನಗಳೂ ಅವನ ದುಃಖ ಶಮನ ಮಾಡುವುದರಲ್ಲಿ ವಿಫಲಗೊಂಡಿತು. ಕೊನೆಗೆ ಅವನೇ ನನ್ನ ಸೀರೆ ಜಗ್ಗುತ್ತಾ, ಅಳುತ್ತಾ ಹೇಳಿದ..."ಪಾಪಚ್ಚಿ ಕೈ ತುಂಬಾ ಉರಿಯುತ್ತವ್ಮಾ... ಅಂಗಡೀಗೆ ಹೋಗಿ ಬೇರೆ ಹೊಸ ಕೈ ತಗೊಂಡು ಬರೋಣ ಬಾಮ್ಮಾ..." ಅವನ ಈ ಮಾತಿಗೆ ಉತ್ತರಿಸಲಾಗದೆ ಆಶ್ಚರ್ಯ, ವಿಸ್ಮಯದಿಂದ ಮೂಕಳಾದೆ.

—ವತ್ಸಲಾ ಸಿ. ವಿ.



ಕೊಟ್ಟಂಗಂ ಕೊಂಡಂಗಂ ಉಭಯ ಲೋಕದೊಳ್ ಮಹಿತವೆಕ್ಕುಂ."

ಹೀಗೆ ದಾನದ ಬಗೆಗೆ ಅನೇಕ ಎಚ್ಚರಿಕೆಯ ಮಾತುಗಳಿವೆ. ದಾನ ಕೊಡುವವನು ಅದನ್ನು ಸ್ವೀಕರಿಸುವವನು ಎಷ್ಟರಮಟ್ಟಿಗೆ ಅದಕ್ಕೆ ಅರ್ಹನಾಗಿದ್ದಾನೆ ಎಂಬುದನ್ನು ವಿಚಾರ ಮಾಡುವಂತೆ ನಾಲ್ಕು ಜನ ತಜ್ಞರ ಅಭಿಪ್ರಾಯ ಪಡೆಯುವಂತೆ, ದಾನ ಸ್ವೀಕರಿಸುವವನು ಕೂಡ ತಾನು ಈ ದಾನವನ್ನು ಸ್ವೀಕರಿಸಿ ಜಯಿಸಿಕೊಳ್ಳಬಲ್ಲನೆ? ಎಂದು ಯೋಚಿಸುವುದರ ಜೊತೆಗೆ, ಅದನ್ನು ಕೊಟ್ಟವನಿಗೂ ಇದರಿಂದ ಒಳಿತಾಗುವುದೆ? ಎಂದು ಯೋಚಿಸುತ್ತಿದ್ದ ಈಗ ಈ ಮಾತುಗಳು ಹಾಸ್ಯಾಸ್ಪದವಾಗಿ ಕಾಣುವುದು ಸಹಜ. ದಾನವೆಂದರೆ ಈಗ ಅದೊಂದು ಜಾತ್ರೆ. ಮುಮ್ಮಡಿ ಕೃಷ್ಣರಾಜ ಒಡೆಯರಿಗೆ ಒಮ್ಮೆ ಗ್ರಹಗತಿಗಳು ಬಹಳ ಕ್ರೂರವಾಗಿದ್ದುದರಿಂದ, ಸುವರ್ಣ ಗೋದಾನ ಮಾಡಬೇಕೆಂದು ಕೆಲವರು ಸೂಚನೆ ಕೊಟ್ಟರು. ಆದರೆ ಆ ದಾನವನ್ನು ಪಡೆದು ಪಾಪ ನಿವೃತ್ತಿ ಮಾಡಿಕೊಳ್ಳುವ ಧೈರ್ಯ ಯಾರಿಗೂ ಇರಲಿಲ್ಲ. ಯಾರೂ ಆ ದಾನವನ್ನು ಸ್ವೀಕರಿಸಲು ಮುಂದೆ ಬರಲಿಲ್ಲ.

ಸ್ಥಿತಿ ಹೀಗಿದ್ದು, ದಾನವನ್ನು ಯಾರಿಗೆ ಕೊಡಬೇಕು ಎಂಬ ಚಿಂತೆಯಲ್ಲಿ ದೊರೆಗಳಿದ್ದಾಗ, ಹತ್ತಿರದಲ್ಲಿದ್ದವರೊಬ್ಬರು ಪ್ರಭುಗಳನ್ನು ಕುರಿತು, "ಮಹಾಸ್ವಾಮಿ, ಯಡತೊರೆಯಲ್ಲಿ ಒಬ್ಬ ಸೋಮಯಾಜಿಗಳಿದ್ದಾರೆ. ಮಹಾತೇಜಸ್ವಿಗಳು, ಆಹ್ನಿಕಪರರು. ಸೂರ್ಯಾರಾಧಕರು. ಈ ದಾನವನ್ನು ತೆಗೆದುಕೊಳ್ಳುವುದಕ್ಕೆ ಅವರನ್ನು ಬಿಟ್ಟರೆ ಬೇರೆ ಯಾರೂ ಯೋಗ್ಯರಲ್ಲ," ಎಂದರು.

ಸರಿ. ಸೋಮಯಾಜಿಗಳಿಗೆ ಹೇಳಿ ಕಳುಹಿಸಿ ಅರಮನೆಗೆ ಅವರನ್ನು ಆದರಪೂರ್ವಕವಾಗಿ ಬರಮಾಡಿಕೊಳ್ಳಲಾಯಿತು. "ದಾನವನ್ನು ಪರಿಗ್ರಹಿಸ



ಬೇಕು," ಎಂದು ಸೋಮಯಾಜಿಗಳನ್ನು ದೊರೆಗಳು ಪ್ರಾರ್ಥಿಸಿಕೊಂಡರು. ಸೋಮಯಾಜಿಗಳು ದಾನವನ್ನು ಸ್ವೀಕರಿಸಿ ತಮ್ಮ ಎಡಗೈಯನ್ನು ಮುಂದೆ ಮಾಡಲು, ನೆರೆದವರೆಲ್ಲಾ ಇದೇನು ರಾಜರ ಮುಂದೆ ಈ ಉದ್ಧಟತನವೇ? ಎಂದುಕೊಂಡರು. "ಏನ ನ್ಯಾಯ? ದೊರೆಗಳು ನೀಡುವ ದಾನವನ್ನು ಸ್ವೀಕರಿಸಲು ವಾಮಹಸ್ತವನ್ನು ನೀಡುವುದೆಂದರೇನು? ಎಷ್ಟು ಗರ್ವ ಈ ಬ್ರಾಹ್ಮಣನಿಗೆ?" ಎಂದು ಕನಲಿದರವರು ಕೆಲವರು. ಪರಿವಾರದವರಲ್ಲಿ ಗುಜುಗುಜು ಪ್ರಾರಂಭವಾಯಿತು. ಮಹಾರಾಜರಿಗೂ ಸೋಮಯಾಜಿಗಳ ನಡೆ ಏಕೋ ಸ್ವಲ್ಪ ವಿಚಿತ್ರವಾಗಿ ಕಂಡು, ಇವರಲ್ಲೇನೋ ಒಳಮರ್ಮ ಇರಬೇಕೆಂದು ಕ್ಷಣಕಾಲ ಯೋಚಿಸಿದರು. 'ಸೋಮಯಾಜಿಗಳಿಗೇನು ರಾಜಮರ್ಯಾದೆಗಳು ಗೊತ್ತಿಲ್ಲವೆ? ಆದರೂ ಹೀಗೇಕೆ ಮಾಡಿದರು? ಈ ದಾನವನ್ನು ಸ್ವೀಕರಿಸುವವರೇ ದುರ್ಲಭವಾಗಿ, ಸಿಕ್ಕಿದವರೊಬ್ಬರೂ ಹೀಗೆ ರಾಜಮರ್ಯಾದೆಯನ್ನು ಅನುಲಕ್ಷಿಸದೆ ವರ್ತಿಸಲು ಕಾರಣವೇನು? ಸೋಮಯಾಜಿಗಳ ದೃಷ್ಟಿಯಲ್ಲಿ ನನ್ನಲ್ಲೇನು ರಾಜಲಕ್ಷಣಗಳೇ ಕಾಣಿಸುತ್ತಿಲ್ಲವೆ? ಅಥವಾ ಕಾಣಿಸಿದರೂ ಮಸುಕಾಗಿ ಕಾಣಿಸುತ್ತಿವೆಯೆ? ಗ್ರಹಗತಿಗಳ ಆಟ ಹೇಗೆ ಹೇಗೆ ನಡೆಯುತ್ತಿದೆಯೋ?' ಹೀಗೆ ಪ್ರಭುಗಳ ಮನಸ್ಸು ಹುಚ್ಚು ಮನಸ್ಸಿನ ಹತ್ತು ಮುಖವಾಗಿ ಕಣ್ಣುಗಳು ಕೆಂಪಾದವು.

ಪ್ರಭುಗಳ ಮನಸ್ಸಿನ ತುಮುಲ್ಲಾಟವನ್ನು ಗ್ರಹಿಸಿದ ಸೋಮಯಾಜಿಗಳು, "ಮಹಾಪ್ರಭು, ಬಲಗೈಯಲ್ಲಿ ದಾನವನ್ನು ಪ್ರತಿಗ್ರಹಿಸುವುದು ತಮಗೆ ಶ್ರೇಯಸ್ಸಲ್ಲ. ಆದ್ದರಿಂದ ಎಡಗೈ ಹಿಡಿದಿದ್ದೇನೆ, ತಾವು ಅನ್ಯಥಾ ಭಾವಿಸಬಾರದು," ಎಂದು ವಿನಂತಿಸಿಕೊಂಡರು. ಮಹಾರಾಜರಿಗೆ ಸೋಮಯಾಜಿಗಳ ಮಾತಿನಿಂದ ಯಾವ ರೀತಿಯಲ್ಲೂ ಬೇಜಾರಾಗದಿದ್ದರೂ, ಅವರ ಸುತ್ತ ನೆರೆದಿದ್ದ ಪರಿವಾರದವರಿಗೆ, ಆ ಮಾತುಗಳು ಅಪ್ರಿಯವೆನಿಸಿ, ದೊರೆಗಳ ಮುಂದೆ ಇದು ನಿಜಕ್ಕೂ ಉದ್ಧಟ ವರ್ತನೆಯೆಂದೇ ಭಾವಿಸಿ," "ಬಲಗೈಯಲ್ಲಿ ದಾನ ಸ್ವೀಕರಿಸಿದರೆ ಆಗುವ ನಷ್ಟವೇನೋ?" ಎಂದು ವ್ಯಂಗ್ಯ ಮಾತುಗಳನ್ನಾಡಿ. "ಸೋಮಯಾಜಿಗಳು ಬಲಗೈಯಲ್ಲೇ ದಾನವನ್ನು ತೆಗೆದುಕೊಳ್ಳುವಂತೆ ಅಪ್ಪಣೆಯಾಗಬೇಕು ಪ್ರಭು," ಎಂದರು.

ಸೋಮಯಾಜಿಗಳು ಕ್ಷಣಕಾಲ ಯೋಚಿಸಿ, "ಸರಿ ಸೂರ್ಯದೇವನ ಚಿತ್ತ," ಎಂದು ದಕ್ಷಿಣ ಹಸ್ತದಿಂದಲೇ ದಾನವನ್ನು ಪರಿಗ್ರಹಿಸಿದರು. ಆದರೆ ದೊರೆಗಳಿಗೆ ಮಾತ್ರ ಸೋಮಯಾಜಿಗಳು ಬಲಗೈಯಲ್ಲಿ ದಾನವನ್ನು ತೆಗೆದುಕೊಳ್ಳುವುದಿಲ್ಲ ಎಂದು ಏಕೆ ಹೇಳಿದರು ಎಂಬ ಕುತೂಹಲ ಕೆರಳಿತು. ಸೋಮಯಾಜಿಗಳನ್ನೇ ಅದಕ್ಕೆ ವಿವರಣೆ ಕೇಳಿದರು. ಆಗ ಸೋಮಯಾಜಿಗಳು, "ಪ್ರಭು! ಆಗಬೇಕಾದದ್ದನ್ನು ತಪ್ಪಿಸಲು ಯಾರಿಂದಲೂ ಸಾಧ್ಯವಿಲ್ಲ. ಒಳ್ಳೆಯದು. ಒಂದು ಚೂರು ಬೆರಣಿಯನ್ನು ತರಿಸಿ. ಬಲಗೈಯನ್ನು ಏಕೆ ಹಿಡಿಯಲಿಲ್ಲ ಎಂಬುದು ಆಗ ತಮಗೇ ಮನವರಿಕೆಯಾಗುವುದು," ಎಂದು ಹೇಳಿ ಬೆರಣಿಯ ಚೂರನ್ನು ಪುಡಿ ಮಾಡಿ ತಮ್ಮ ಬಲಗೈ ಮೇಲೆ ಉದುರಿಸಿಕೊಂಡರು. ಭಗ್ ಎಂದು ಬೆಂಕಿ ಕಾಣಿಸಿಕೊಂಡಿತು. ದೊರೆಗಳ ಸಮೀಪದಲ್ಲಿದ್ದವರೆಲ್ಲರೂ ಆಶ್ಚರ್ಯ ಚಕಿತರಾಗಿ ಮೂಕರಾದರು.

ದೊರೆಗಳ ಮುಖ ಬಾಡಿತು. ಜ್ಯೋತಿಷ್ಯದಲ್ಲಿ ಸ್ವಯಂಪಂಡಿತರಾದ ಪ್ರಭುಗಳಿಗೆ ಭವಿಷ್ಯದ ಚಿತ್ರ ಕಣ್ಣ ಮುಂದೆ ಸುಳಿಯಿತು. "ಈಶ್ವರ ಸಂಕಲ್ಪ," ಎಂದು ಸುಮ್ಮನಾದರು. "ಕ್ಷಮಿಸಬೇಕು ಪ್ರಭು," ಎಂದರು ಸೋಮಯಾಜಿಗಳು. ಉಳಿದವರಿಗೆ ಏನೊಂದೂ ಅರ್ಥವಾಗಲಿಲ್ಲ.

ಈ ಘಟನೆ ನಡೆದ ಕೆಲವೇ ದಿನಗಳ ಅಂತರದಲ್ಲಿ ಮೈಸೂರು ರಾಜ್ಯ ಕಂಪನಿಯ ವಶವಾಯಿತು! ಇದೇನು ಕಾಕತಾಳೀಯ ನ್ಯಾಯವೋ? ಗ್ರಹಗತಿಗಳ ಆಟವೋ? ಮನಸ್ಸಿನ ಪ್ರಮೇಯವೋ? ಹೇಳುವವರಾರು?

★

(ಜೂನ್ ೭೫ 'ಕಸ್ತೂರಿ' ಪುಟ ೨೫ರಲ್ಲಿ ಪ್ರಕಟವಾದ ಕೆ. ವಾಸುದೇವಾಚಾರ್ಯರ 'ಕೆಲ ನೆನಪುಗಳು' ಅನ್ನು ನೋಡಿ.)

## ತಮಿಳು ಕಥೆ

ಮೂಲ: **ರಾಜೇಶ್ ಕುಮಾರ್**

ಅನುವಾದ: **ಕರುಣಾಕರ ಕೋವರ್ ಕೊಲ್ಲಿ**

ನಾನು ಶಂಕಿಸಲೀ?" ಅವರ ಕಂಠದಲ್ಲಿ ಈ ವಿಷಾದದ ಛಾಯೆ ಇರಲಿಲ್ಲ.

"ಇಂಪಾಸಿಬಲ್ ಇನ್‌ಸ್ಪೆಕ್ಟರ್. ಈ ಮರಣ ಕೇವಲ ಆಕಸ್ಮಿಕ ಅಷ್ಟೆ. ಅನವಶ್ಯಕವಾಗಿ ಡೋಂಟ್ ಮೇಕ್ ಎನಿ ಇಲ್ಯೂಜನ್."

"ಐ ಆ್ಯಂ ಸಾರಿ. ಪ್ರತಾಪನ ಹತ್ತಿರ ಬಹಳ ಡಿಯರೆಸ್ಟ್ ಆಗಿ ಪಳಗಿದ ಸ್ನೇಹಿತರು ಯಾರಾದರೂ ಫ್ಯಾಕ್ಟರಿಯಲ್ಲಿ ಇದ್ದಾರಾ?" ಇನ್‌ಸ್ಪೆಕ್ಟರ್ ಸ್ವಲ್ಪ ಕುತೂಹಲದಿಂದ ಕೇಳಿದರು. ಮ್ಯಾನೇಜರರ ದೃಷ್ಟಿ ಒಡನೆ ಸಮೀಪದಲ್ಲಿದ್ದ ಪಸ್ನತ್ತ ಹರಿಯಿತು.

"ದಿಸ್ ಯಂಗ್ ಫೆಲೋ ಈಸ್ ಮಿ. ರಾಘವನ್. ಮದ್ರಾಸಿನವರು. ಹೋದ ಆರು ತಿಂಗಳಿಂದ ಪ್ರತಾಪ ಇವರ ಜೊತೆಯಾಗಿ ಇಲ್ಲದ ಸಮಯವೇ ವಿರಳ. ಟ್ರೂ ಆ್ಯಂಡ್ ಡೀಪ್ ಫ್ರೆಂಡ್‌ಶಿಪ್."

ಇನ್‌ಸ್ಪೆಕ್ಟರ್ ನನ್ನೆಡೆಗೆ ದೃಷ್ಟಿ ಬೀರುತ್ತಾ ಬರುತ್ತಿದ್ದುದು ಗೋಚರವಾಯಿತು. ನಾನು ವಿಚಲಿತವಾಗಿ ಅವರನ್ನೇ ತದೇಕ ದೃಷ್ಟಿಯಿಂದ ದಿಟ್ಟಿಸಿದೆ. ನನ್ನ ಸಮೀಪಕ್ಕೆ ಬಂದ ಇನ್‌ಸ್ಪೆಕ್ಟರ್ ಬಂದು ವಿಷಾದದ ನಟನೆಯಲ್ಲಿ ಹೇಳಿದರು:

"ಸಾರಿ ಫಾರ್ ಡಿಸ್ಟರ್ಬಿಂಗ್ ಯು."

"ಸೋ ವಾಟ್?" ಎಂದೆ ಘನವಾದ ಶೋಕ ತುಂಬಿದ ಕಂಠದಿಂದ.

"ಮಿ. ರಾಘವನ್, ಮೇ ಐ ಎಕ್ಸ್‌ಪೆಕ್ಟ್ ಯುವರ್ ಕೋಆಪರೇಶನ್ ರಿಗಾರ್ಡಿಂಗ್ ದಿಸ್ ಮಿಜರೇಬಲ್ ಇನ್ಸಿಡೆಂಟ್?"

"ಶ್ಯೂರ್," ನನ್ನ ಕಂಠ ಭಾರವಾಗತೊಡಗಿತು.

"ನಿಮ್ಮ ಸ್ನೇಹಿತ ಪ್ರತಾಪನ ಬಗ್ಗೆ ಕೆಲವು ಪ್ರಶ್ನೆಗಳು..."

ಇನ್ಸ್‌ಪೆಕ್ಟರರು ಕೇಳಲು ಶುರುಮಾಡಿದರು. ನಾನು ಅವರಿಗೆ ಉತ್ತರ ಕೊಡುತ್ತಲಿದ್ದರೂ ಹೃದಯ ಮಾತ್ರ ಬ್ಲಾಟಿಂಗ್ ಪೇಪರಿನಲ್ಲಿ ತಾಗಿದ ಮಸಿಯು ತೊಟ್ಟನಂತೆ ಅವನ ನೆನಪುಗಳನ್ನು ಹೀರಿಕೊಳ್ಳುತ್ತಿತ್ತು.

■

ಪ್ರತಾಪ ಎಂಬ ಆ ಸುಂದರ ಸ್ನೇಹಿತನ ಬಗ್ಗೆ ಒಂದು ಚಿಕ್ಕದಾದ ಪರಿಚಯ. ಮುಂಬಯಿಯ ಮಣ್ಣು, ಆ ಕುಳಿರ್ಗಾಳಿ ಅವನಿಗೆ ಸ್ವಂತ. ಬಿಳಿಯ ಅಂಚಿನ ಹಲ್ಲುಗಳು ಗೋಚರಿಸುವಂತೆ ಜೋರಾಗಿ ನಗುವಾಗ ಬಲಭಾಗದ ಗಲ್ಲದ ಮೇಲೆ ತಟ್ಟನೆ ಮೂಡುತ್ತಿದ್ದ ಗುಳಿಯನ್ನು ಕಂಡು ಮನ ಸೋಲದ ಹೆಂಗಸರೇ ಇಲ್ಲ. ಆದರೆ ಅವನು ಸೋತುಹೋದದ್ದು ಪವಿತ್ರಳೊಡನೆ. ನಾನು ಅವನೊಡನೆ ಪರಿಚಯವಾಗುವುದಕ್ಕೆ ಮೊದಲೇ ಆತ ಪವಿತ್ರಳೊಂದಿಗೆ ಮದುವೆ ಮಾಡಿಕೊಂಡಿದ್ದ.

ಪ್ರತಾಪ ಕಬ್ಬಿಣದ ಗರ್ಡರ್ಸ್ ತಯಾರಿಸುವ ಕಾರಖಾನೆಯಲ್ಲಿ ಚೀಫ್ ಇಂಜಿನಿಯರ್ ಆಗಿದ್ದ. ಮುಂಬಯಿಯ ಬಂದರಿನ ಸಮೀಪಕ್ಕೆ ಹೋಗುವ ಮಾರ್ಗದಲ್ಲಿ ಮಹಾಲಕ್ಷ್ಮಿ ದೇವಾಲಯದ ಹಿಂಭಾಗದಲ್ಲಿ ವ್ಯಾಪಿಸಿದ ಆ ಕೊಳಚೆ ಜಾಗದಲ್ಲಿ ಸ್ಥಾಪಿಸಲ್ಪಟ್ಟಿದ್ದ ಆ ಕಾರಖಾನೆಯಲ್ಲಿ ಅದಕ್ಕೆ ಸಂಬಂಧಪಟ್ಟ ಆಫೀಸು, ಅಧಿಕಾರಿಗಳ ನಿವಾಸಗಳೂ ಇದ್ದವು. ಆರು ತಿಂಗಳಿನ ಹಿಂದೆ ಬಂದ ಕೆಲಸದ ಪತ್ರ ಹಿಡಿದುಕೊಂಡು ಮುಂಬಯಿಯ ವಿ.ಟಿ. ಸ್ಟೇಷನ್ನಿನಲ್ಲಿ ಇಳಿದು ಆ ಜನ ಸಮುದ್ರದಲ್ಲಿ ಗಾಬರಿಯಾಗಿ ನಿಂತು ಏನು ಮಾಡಲೂ ತೋಚದೆ ಇರುವಾಗ ಪ್ರತ್ಯಕ್ಷನಾದ ಆ ವ್ಯಕ್ತಿ.

"ಮೇ ಐ ಹೆಲ್ಪ್ ಯು ಮಿ. ರಾಘವನ್?" ಎಂದಾಗ,

"ನೀವು?" ಎಂದು ನಾನು ಸಂಕೋಚದಿಂದ ಕೇಳಿದೆ.

"ನಾನು 'ಗಂಗಾ ಗರ್ಡರ್ಸ್' ಚೀಫ್ ಇಂಜಿನಿಯರ್ ಆಗಿ ಕಸ ಗುಡಿಸಿಕೊಂಡಿರುವವ. ಹೆಸರು ಪ್ರತಾಪ್. ನನಗೆ ಅಸಿಸ್ಟೆಂಟಾಗಿ ಸೇಲಂ ಜಿಲ್ಲೆಯ ಮುಕುಟಂ ಚಾವಡಿಯಿಂದ ಮಿ. ರಾಘವನ್ ಎಂಬುವರು ಇಂದು ಇದೇ ಗಾಡಿಯಲ್ಲಿ ಬರುವುದಾಗಿ ನನ್ನ ಮನಸ್ಸು ಗಿಳಿ ಭವಿಷ್ಯವನ್ನು ಹೇಳಿತು. ಕಾರು ತೆಗೆದುಕೊಂಡು ನನ್ನ ಅಸಿಸ್ಟೆಂಟನ್ನು ರಿಸೀವ್ ಮಾಡಲು ಬಂದೆ. ರಿಸೀವ್ ಮಾಡಿದ್ದಾಯ್ತು. ಇನ್ನು ಹೋಗಬಹುದೆ ಮಿ. ರಾಘವನ್?" ಎನ್ನುತ್ತಾ ಆತ್ಮೀಯವಾಗಿ ನನ್ನ ಕೈಯಲ್ಲಿದ್ದ ಸೂಟ್‌ಕೇಸನ್ನು ತೆಗೆದುಕೊಂಡ ಪ್ರತಾಪ್.

ನಾನು ಅಚ್ಚರಿಗೊಂಡು ತುಂಬಿದ ಕಣ್ಣುಗಳಿಂದ ನೋಡಿದೆ. ಕ್ಷಣದಲ್ಲಿ ಕಣ್ಣುಗಳಲ್ಲಿ ಆನಂದ ಬಾಷ್ಪ ತುಂಬತೊಡಗಿತು.

"ಥ್ಯಾಂಕ್ ಯು ವೆರಿ ಮಚ್."

"ನೋ ಮೆನ್‌ಶನ್ ಮಿ. ರಾಘವನ್. ಕ್ಯಾರಿ ಆನ್," ಎಂದು ಪ್ರತಾಪ ಸೂಟು ಕೇಸನ್ನು ಹಿಡಿದು ಮುಂದೆ ಅಡಿ ಇಡತೊಡಗಿದ. ನಾನು ಹಿಂಬಾಲಿಸತೊಡಗಿದೆ. ಕಾರಿನ ಡಿಕ್ಕಿಯನ್ನು ತೆಗೆದು, ನನ್ನ ಕೊಳಕು ಲಗೇಜನ್ನು ಅಂದವಾಗಿ ಅಡಗಿಸಿದ. ಹೆಚ್ಚು ಕಡಿಮೆ ಅರ್ಧ ಗಂಟೆಯಲ್ಲಿ ಆ ನೂಕು ನುಗ್ಗಲಿನಿಂದ ಕಾರು ಪ್ರಯಾಸಪಟ್ಟು ಪಳಗಿದವನಂತೆ ಆ ನೀಲ ವರ್ಣದ ಡಿಸ್ಟೆಂಪರ್ ಬಳಿದ ನಿವಾಸದ ಮುಂದೆ ಬಂದು ನಿಂತಿತು.

"ಪ್ಲೀಸ್ ಸ್ಟೆಪ್ ಇನ್ ಮಿ. ರಾಘವನ್. ಈ ಮನೆ ಆಫೀಸ್ ಕ್ವಾಟರ್ಸ್‌ಗೆ ಸೇರಿದ್ದು. ಇದರಲ್ಲಿಯೇ ನಾನು ನನ್ನ ಶ್ರೀಮತಿಯೂ. ಬೈ ದಿ ಬೈ ನನ್ನ ಶ್ರೀಮತಿಯ ಹೆಸರು ಪವಿತ್ರ."

ನಾನು ಏನನ್ನೋ ಕೇಳಲು ತುಟಿ ಅಲುಗಿಸುವಷ್ಟರಲ್ಲಿ ಆಕೆ ಬಾಗಿಲಲ್ಲಿ ಪ್ರತ್ಯಕ್ಷಗೊಂಡಳು. ತಿರುಗಿದೆ. ಕ್ಷಣದಲ್ಲಿ ಸ್ತಂಭಿತನಾದೆ. ಹಾಲಿನಲ್ಲಿ ಮಿಶ್ರವಾದ ಆಕೆಯ ಕುಂಕುಮದ ಹೂವಿನ ಬಣ್ಣ. ಕಣ್ಣುಗಳ ಎವೆ ಬಡಿಯುತ್ತಿದ್ದವು. ಆ ನೀಲಿ ಕಣ್ಣುಗಳು ನನ್ನೆಡೆಗೆ ದಿಟ್ಟಿಸಿದವು. ಒಂದು ಕೈಯಲ್ಲಿ ತನ್ನ ನೀಳ ಕೂದಲನ್ನು ನೇವರಿಸುತ್ತಾ, ನಿಂತ ಆ ಕ್ಷಣದ ನೋಟ ನನ್ನನ್ನು ಸ್ತಂಭಿತಗೊಳಿಸಿತು.

ಭ್ರಮಿಸುವಂಥ ಒಂದು ಶ್ರೇಷ್ಠ ಸೌಂದರ್ಯವೆ!

ಪ್ರತಾಪ ಅವಳನ್ನು ನೋಡಿದೊಡನೆಯೇ ಆವೇಶದಿಂದ ಒಳಗೆ ಅಡಿ ಇಡುತ್ತಾ ಸಂತಸದಿಂದ ಹೇಳಿದ.

"ಪವಿತ್ರಾ, ಮೈ ಆಫೀಸ್ ಕಲೀಗ್ ಮಿ. ರಾಘವನ್. ನೆಡಿಪಿಡಿ ಮುಕುಟಂ ಚಾವಡಿ. ನನಗೆ ಅಸಿಸ್ಟೆಂಟಾಗಿ," ಎಂದು ಹೇಳಿದವನು ನನ್ನೆಡೆಗೆ ತಿರುಗಿ, "ಮಿ. ರಾಘವನ್, ಮೀಟ್ ಮೈ ವೈಫ್ ಮಿಸೆಸ್ ಪವಿತ್ರಾ ಪ್ರತಾಪ್.

ತುಂಬಾ ಸೆಂಟಿಮೆಂಟಲ್ ಟೈಪ್. ಅವಳಿಗೆ ಒಳ್ಳೆಯ ಅಮ್ಮ, ಅಪ್ಪ, ಗಂಡ ಸಿಕ್ಕಿದ ಹಾಗೆ ಒಬ್ಬ ಒಳ್ಳೆಯ ಸಹೋದರ ಇಲ್ಲವಲ್ಲ ಎಂದು ಆಗಾಗ ತುಂಬಾ ಬೇಸರಪಡುತ್ತಿದ್ದಳು. ಇನ್ನು ಆಕೆ ಬೇಸರ ಪಡೋದಿಲ್ಲಾಂತ ಅನಿಸತ್ತೆ..."

ಅಷ್ಟರಲ್ಲಿ ಆಕೆ ಅದೇ ಧಾಟಿಯಲ್ಲಿ ಕರೆದಳು.

"ಬನ್ನಿ ಅಣ್ಣ ಒಳಕ್ಕೆ..."

'ಅಣ್ಣಾ'– ನನ್ನ ಹೃದಯದ ಹಕ್ಕಿ ರೆಕ್ಕೆ ಬಡಿಯಿತು.

"ಓಕೆ ಪವಿತ್ರ. ಅವರು ಸ್ನಾನ ಮಾಡಲಿಲ್ಲ. ಊಟ ಆಗಲಿಲ್ಲ. ಎಲ್ಲವನ್ನೂ ಗಮನಿಸಿಕೊಂಡು ಆಫೀಸಿಗೆ ಕಳುಹಿಸು," ಅವನು ಇಷ್ಟೆಲ್ಲಾ ಬಿರಬಿರನೆ ಉಸುರುತ್ತಾ ಆಫೀಸಿಗೆ ಹೋಗಿಬಿಟ್ಟ. ನಾನು ಅಚ್ಚರಿಯಿಂದ ಸ್ತಂಭಿತನಾಗಿ ನಿಂತುಕೊಂಡೆ.

ಪವಿತ್ರ, "ಬನ್ನಿ ಅಣ್ಣಾ, ಸಂಕೋಚಪಡದೇ ಬನ್ನಿ," ಎಂದಳು.

*

ಸಮೀಪದ ಒಂದೆರಡು ತಿಂಗಳಿನಲ್ಲಿ ಬಹುವಚನದ 'ಅವರು' 'ಇವರು' ಎಲ್ಲವೂ ಅಳಿಸಿ ಹೋಗಿ 'ರಾಘವ' ಎಂದು ಕರೆಯಲು ಪ್ರಾರಂಭವಾಗಿ ಕೆಲವು ದಿನಗಳಲ್ಲಿ 'ಬಾ, ಹೋಗು' ಎಂಬ ಸ್ವರ ಮಟ್ಟಿಗಾಯಿತು. ಈಗಂತೂ ಅದು 'ಬಾರೋ ಪಾಪಿ, ಹೋಗೋ ಮುಠ್ಠಾಳ' ಎಂಬ ಮಟ್ಟಕ್ಕೆ ಬಂದಿತ್ತು. ನಮ್ಮ ಸ್ನೇಹ ಬಾಂಧವ್ಯದ ಬಹು ಎತ್ತರದ ಮೆಟ್ಟಿಲುಗಳಾಗಿದ್ದವು ಈ ಬದಲಾವಣೆಗಳು.

ತಿಂಗಳಿನ ಹೆಚ್ಚು ದಿನಗಳು ಪ್ರತಾಪನ ಮನೆಯಲ್ಲೇ ಊಟವಾಗುತ್ತಿತ್ತು. ನನಗೆ ಆಫೀಸ್ ಕ್ವಾರ್ಟರ್ಸ್ ಸಿಗದಿದ್ದುದರಿಂದ ಒಂದು ಉಡುಪಿ ಹೋಟೇಲಿನಲ್ಲಿ ತಿಂಗಳು ಲೆಕ್ಕದಲ್ಲಿ ಊಟದ ಟಿಕೇಟನಿಂದ ದಿನ ದೂಡಬೇಕಾಯಿತು.

*

ಕೆಂಪಾದ ಕಣ್ಣು ಎವೆಯಿಂದ ನನ್ನ ಪ್ರತಾಪನನ್ನು ನೋಡಿದೆ. ಪ್ರತಾಪನ ರಕ್ತ ಆರಲು ಶುರುವಾಯಿತು, ತುಣುಕು ತುಣುಕಾಗಿ. ಜಜ್ಜಿದ ತಲೆಯ ಸಮೀಪದಲ್ಲಿ ಮೆದುಳು ಛಿದ್ರಗೊಂಡು ಚೆದುರಿ ಬಿದ್ದಿತ್ತು. ಮುಖ ಭೂಮಿಗೆ ಅಂಟಿಕೊಂಡಿತ್ತು. ಕೈಗಳು ಅಡ್ಡಾದಿಡ್ಡಿಯಾಗಿ ತುಂಡಾಗಿ ಬಿದ್ದಿದ್ದವು. ಒಂದು ಕಾಲು ಮಡಿಚಿಕೊಂಡಿತ್ತು. ಇನ್ನೊಂದು ಕಾಲು ಚಾಚಿಕೊಂಡಿತ್ತು...'ಪ್ರತಾಪ್. ನಿನ್ನನ್ನು ಇಂಥ ಸ್ಥಿತಿಯಲ್ಲಿ ನೋಡಲಾಗುವುದಿಲ್ಲ ಕಣೋ...ಪಾಪಿ...ಪಾಪಿ. ನನಗೆ ಸಾವಿರ ಸಾರಿ ಎಚ್ಚರಿಕೆ ಕೊಟ್ಟು ಈ ಫ್ಯಾಕ್ಟರಿಯಲ್ಲಿರುವ ಒಂದು ಗುಂಡು ಸೂಜಿ ಸಹ ನನ್ನ ಶರೀರದಲ್ಲಿ ಚುಚ್ಚಿ ಒಂದು ತೊಟ್ಟು ರಕ್ತವನ್ನು ಸಹ ಹೊರಗೆ ಚಿಮ್ಮದಂತೆ ಎಚ್ಚರಿಕೆ ವಹಿಸಿ ಕೆಲಸದ ಬಗ್ಗೆ ಬಹಳ ಉತ್ಸಾಹದಿಂದ ಹೇಳಿಕೊಟ್ಟ ನಂತರ ನನ್ನನ್ನು ಸೇರಿಸಿ ಹೀಗೆ ಫ್ಯಾಕ್ಟರಿಯ ನೆಲವನ್ನು ರಕ್ತದ ಮಡುವಿನಲ್ಲಿ ತೋಯಿಸಿರುವೆಯಾ?' ಶರೀರ ಅಲುಗುವಂತೆ ಜೋರಾಗಿ ಅತ್ತುಬಿಟ್ಟೆ.

ಯಾರೋ ನನ್ನ ಭುಜವನ್ನು ಮುಟ್ಟಿದರು. ಹಿಂತಿರುಗಿದೆ. ಆಶ್ರು ತುಂಬಿದ ಕಣ್ಣುಗಳಿಂದ ಮ್ಯಾನೇಜರರು ನಿಂತಿದ್ದರು. ಗಂಟಲು ತುಂಬಿದ ಧ್ವನಿಯಲ್ಲಿ ಹೇಳಿದರು, "ಪ್ಲೀಸ್, ಅಳಬೇಡಿ ರಾಘವನ್. ಇನ್ನೂ ಮಾಡಬೇಕಾದ ಕಾರ್ಯವನ್ನು ಮಾಡುವಾ. ಪ್ಲೀಸ್ ಕಮ್ ವಿಥ್ ಮಿ."

ಮ್ಯಾನೇಜರರು ನನ್ನ ಕೈ ಹಿಡಿದು ಮುಂದೆ ನಡೆದರು. ತನ್ನ ಕೋಣೆ ಸೇರುವವರೆಗೆ ಏನನ್ನೂ ಮಾತನಾಡದೆ ಇದ್ದ ಅವರು ಕೊಠಡಿಯೊಳಗೆ ಅಡಿ ಇರಿಸಿದೊಡನೆ ನನ್ನನ್ನು ಕೂರಲು ಹೇಳಿ ಮೃದು ಧ್ವನಿಯಲ್ಲಿ ಕೇಳಿದರು,

"ಪ್ರತಾಪನ ಪತ್ನಿ ತಮ್ಮ ತಾಯಿಯ ಮನೆಗೆ ಯಾವತ್ತು ಹೋದರು?"

"ಎರಡು ದಿನದ ಹಿಂದೆ."

"ಅವರ ತಾಯಿಯ ಮನೆ ಎಲ್ಲಿ ಎಂದು ನಿಮಗೆ ಗೊತ್ತಿದೆಯಾ?"

"ಗೊತ್ತಿದೆ ಸರ್, ಲೋಣಾವಳದಲ್ಲಿ."

"ಮನೆ ಗೊತ್ತಿದೆಯಾ?"

"ಊಹುಂ ಗೊತ್ತಿಲ್ಲ. ಈ ವರೆಗೆ ನಾನು ಹೋಗಿಲ್ಲ."

ಕ್ಷಣಕಾಲ ಮೌನದಿಂದ ಮ್ಯಾನೇಜರ್ ಪೇಪರ್ ವೇಟನ್ನು ಒಂದೆರಡು ಸಾರಿ ತಿರುಗಿಸಿ ತುಂಬಿದ

ಕಂಠದಿಂದ ಕೇಳಿದರು,

"ಮಿಸೆಸ್ ಪವಿತ್ರರಿಗೆ ವಿವರ ತಿಳಿಸಬೇಕಲ್ಲಾ."

"ಖಂಡಿತವಾಗಿಯೂ..." ಎಂದೆ.

"ಪವಿತ್ರಳ ತಾಯಿಯ ಮನೆಗೆ ಫೋನ್ ಇದೆಯಾ?"

"ಫೋನ್ ಮಾತ್ರ ಇಲ್ಲ ಎಂದು ಖಚಿತವಾಗಿಯೂ ಗೊತ್ತಿದೆ."

"ಮತ್ತೆ? ಹೇಗೆ ಅವರಿಗೆ ತಿಳಿಸುವದು?"

ಮ್ಯಾನೇಜರರು ಮಾತು ಮುಗಿಸಿದರು. ತೀಕ್ಷ್ಣವಾಗಿ ನನ್ನನ್ನು ನೋಡಿದರು.

"ಸರ್, ಪ್ರತಾಪನ ಮರಣದ ಬಗ್ಗೆ ಒಂದೇ ಬಾರಿಗೆ ಪವಿತ್ರಳಿಗೆ ತಿಳಿಸಿದರೆ ನಿಜವಾಗಿಯೂ ಅವಳಿಗೆ ಸಹಿಸಲು ಸಾಧ್ಯವಾಗುವುದಿಲ್ಲ. ಐ ನೋ ಹರ್ ಟೆಂಡರ್ ಹಾರ್ಟ್. ಲೋಣಾವಳಕ್ಕೆ ಯಾರಾದರೂ ಖುದ್ದಾಗಿ ಹೋಗಿ ನೇರವಾಗಿ ಪ್ರತಾಪನಿಗೆ ಒಂದು ಚಿಕ್ಕ ಆಕ್ಸಿಡೆಂಟ್, ಭಯ ಪಡುವಂಥದ್ದೇನೂ ಇಲ್ಲ ಎಂದು ಕರೆದುಕೊಂಡು ಬಂದು ವಿಷಯವನ್ನು ಸ್ವಲ್ಪ ಸ್ವಲ್ಪವಾಗಿ ಬಹಿರಂಗ ಪಡಿಸಿ ಅವಳ ಹೃದಯವನ್ನು ಪಕ್ವಗೊಳಿಸಬೇಕು. ಈ ವಿಷಯದಲ್ಲಿ ನಾವು ಆತುರ ಪಟ್ಟರೆ ಇನ್ನೊಂದು ಅಮೂಲ್ಯವಾದ ಜೀವಕ್ಕೆ ಆಪತ್ತು ಸಂಭವಿಸಬಹುದು.

ಅವುಡು ಕಚ್ಚಿಕೊಂಡು ನನ್ನೊಡನೆ ಎದ್ದ ಮ್ಯಾನೇಜರರು ಹೇಳಿದರು,

"ಯೂ ಆರ್ ಕರೆಕ್ಟ ಮಿ. ರಾಘವನ್. ಆದರೆ ಈ ವಿಷಯವನ್ನು ಪವಿತ್ರಳ ಹತ್ತಿರ ಯಾರನ್ನಾದರೂ ಕಳುಹಿಸುವುದರ ಬದಲು ನೀವೇ ನೇರವಾಗಿ ಹೋಗಿ ಕರೆದುಕೊಂಡು ಬರುವುದೇ ಒಳ್ಳೆಯದು." ನಾನು ಬೆಚ್ಚಿಬಿದ್ದೆ.

"ನಾನು!?"

ಮ್ಯಾನೇಜರರು ನನ್ನನ್ನು ನೋಡಿ ದೀರ್ಘವಾದ ಕಂಠದಿಂದ ಹೇಳಿದರು.

"ಮಿ. ರಾಘವನ್, ನಮ್ಮ ಆಫೀಸ್ ಕಾರನ್ನು ತೆಗೆದುಕೊಂಡು ಈಗಲೇ ಹೊರಡಿ. ಎರಡು ಗಂಟೆಯೊಳಗೆ ಲೋಣಾವಳಕ್ಕೆ ಹೋಗಬಹುದು. ಮಿಸೆಸ್ ಪವಿತ್ರಳಿಗೆ ವಿಷಯ ತಿಳಿಸಿ ಜೊತೆಯಾಗಿ ಕರೆದುಕೊಂಡು ಬನ್ನಿ. ಪ್ಲಿಸ್, ಎದುರು ಹೇಳಬೇಡಿ."

ನಾನು ಬೇಸರದಿಂದ ಹೇಳಿದೆ,

"ಲೋಣಾವಳದಲ್ಲಿ ಪವಿತ್ರಳ ತಾಯಿಯ ವಿಳಾಸ ನನಗೆ ಗೊತ್ತಿಲ್ಲವಲ್ಲ."

"ಪ್ಲಿಸ್, ಆಸ್ಕ್ ಸಂಬಡಿ."

ಮ್ಯಾನೇಜರರೊಡನೆ ನಾನು ಹೊರಬಂದೆ. ಹೊರಗಿನ ಕಂಪೌಂಡ್ ಗೇಟನ್ನು ತೆಗೆದು ಪೋಸ್ಟ್‌ಮನ್ ಒಳಗೆ ಬಂದ.

"ಸರ್ ಒಂದು ನಿಮಿಷ," ಎಂದು ಮ್ಯಾನೇಜರರನ್ನು ನಿಲ್ಲಿಸಿದೆ. ಅವರು ನನ್ನನ್ನು ದಿಟ್ಟಿಸಿದರು. ನಾನು ಟಪಾಲಿನವನನ್ನು ತೋರಿಸಿ ಹೇಳಿದೆ,

"ಇವತ್ತು ಪ್ರತಾಪನಿಗೆ ಪವಿತ್ರ ಪತ್ರ ಬರೆದಿದ್ದರೆ ಅದರಲ್ಲಿ ಲೋಣಾವಳದ ವಿಳಾಸ ಖಂಡಿತವಾಗಿಯೂ ಇರುತ್ತೆ. ಲೆಟ್ ಅಸ್ ಸೀ."

ಮ್ಯಾನೇಜರರು ತಲೆ ಆಡಿಸಿದರು.

ಪೋಸ್ಟ್‌ಮನ್ ಗೋಡೆಯ ಬದಿಯಲ್ಲಿ ಸೈಕಲನ್ನು ಒರಗಿಸಿದ. ಫ್ಯಾಕ್ಟರಿಯಲ್ಲಿ ನಡೆದ ದುರ್ಘಟನೆಯ ವಿವರ ಬಹುಶಃ ಅವನಿಗೆ ತಿಳಿದಿರಲಿಲ್ಲವೆಂದು ಭಾಸವಾಯಿತು. ಆತನ ದೈನಂದಿನ ಹವ್ಯಾಸದಂತೆ ಗುಡ್ ಮಾರ್ನಿಂಗ್ ಹೇಳಿದ. ಬದಲಾಗಿ ನಾವು ಅವನನ್ನು ಚಲನೆ ಇಲ್ಲದೆ ನೋಡಿದೆವು.

ಹತ್ತು ಹದಿನೈದು ಕಾಗದಗಳನ್ನು ತೋರಿಸಿದ. ಮ್ಯಾನೇಜರರು ಅವೆಲ್ಲವನ್ನೂ ಕೈಯಲ್ಲಿ ಎತ್ತಿಕೊಂಡವರೆ ಅದರ ಮೇಲೆ ಬರೆದ ವಿಳಾಸವನ್ನು ಓದತೊಡಗಿದರು. ಏಳನೆಯದಾಗಿ ಕೈಗೆ ಸಿಕ್ಕಿದ ಕಾಗದವನ್ನು ನೋಡಿದೊಡನೆ, "ಹಿಯರ್ ಇಟ್ ಇಸ್; ಬಟ್ ಲೆಟರ ನಿಮ್ಮ ಹೆಸರಿಗೆ ಬಂದಿದೆ. ಪ್ರತಾಪನ ಹೆಸರಿನಲ್ಲಿ ಅಲ್ಲ!" ಎಂದರು.

ಮುಖದಲ್ಲಿ ಬೆವರು ಸಾಲುಗಟ್ಟಿತು. ಎದೆಯ ಮೇಲಿನ ರೋಮಗಳ ಸಂದಿನಲ್ಲಿ ಬೆವರು ಹನಿಗೂಡಿ ಜಾರತೊಡಗಿತು. ಯಾಂತ್ರಿಕವಾಗಿ ಕೈ ನೀಡಿ ಲಕೋಟೆಯನ್ನು ಪಡೆದುಕೊಂಡೆ. ಹಿಂದಿನ ವಿಳಾಸವನ್ನು ನೋಡಿದೆ. ದುಂಡಗೆ ಬರೆದ ಕೈ ಬರಹ. ಮ್ಯಾನೇಜರರು ಆಫೀಸಿನ ಕಾರಿನ ಕೀಯನ್ನು ನೀಡಿದರು.

ಪವಿತ್ರಳ ಕಾಗದವನ್ನು ಮೇಲಿನ ಕಿಸೆಯಲ್ಲಿ

ಭಿನ್ನಪಡಿಸಿ ಆ ತಿಳಿಹಸಿರು ಬಣ್ಣದ ಹೆರಾಲ್ಡ್ ಕಾರನ್ನು ನೋಡಿ ಹೆಜ್ಜೆ ಇರಿಸಿದೆ. ನೀರಿನಲ್ಲಿ ಅದ್ದಿದ ಹಂಜಿಯ ಮೂಟೆಯಂತೆ ಮನಸ್ಸು ಭಾರವಾಗ ತೊಡಗಿತು.

•

ಮುಂಬೈಯಿಂದ ಲೋಣಾವಳಕ್ಕೆ ಎಂಬತ್ತು ಕಿಲೋಮೀಟರು ದೂರ. ಒಂದೂವರೆ ಗಂಟೆಯಲ್ಲಿ ಲೋಣಾವಳದ ಕುಳಿರ್ಗಾಳಿಯನ್ನು ಆಸ್ವಾದಿಸಿಕೊಂಡು ಘಟ್ಟಗಳ ಬಳಸು ಹಾದಿಯಲ್ಲಿ ಲೋಣಾವಳದ ಒಳಭಾಗವನ್ನು ಹೊಕ್ಕೆ. ಕಾರಿನ ವೇಗವನ್ನು ಕಡಿಮೆಮಾಡಿಕೊಂಡು ಕ್ರೈರಿ ಕ್ರಾಸಿಂಗ ರಸ್ತೆಯನ್ನು ಹುಡುಕಿದೆ. ಅದು ಶ್ರಮವಿಲ್ಲದೆ ಹತ್ತು ನಿಮಿಷದಲ್ಲಿ ಗೋಚರಿಸಿತು.

ಕೆಂಪು ಹೂ ಅರಳಿ ಹರಡಿ ನಿಂತಿದ್ದ ಅಶೋಕ ವೃಕ್ಷದ ಕೆಳಗೆ ಕಾರನ್ನು ನಿಲ್ಲಿಸಿ ಕೆಲವು ನಿಮಿಷಗಳ ವರೆಗೆ ಹಣೆಯ ಮೇಲೆ ಕೈ ಇರಿಸಿಕೊಂಡು ಆಲೋಚಿಸಿದೆ. "ಪ್ರತಾಪನ ಮರಣವನ್ನು ಅಂತರಂಗದಲ್ಲಿಟ್ಟುಕೊಂಡು ನಾನು ಹೇಗೆ ಅವಳನ್ನು ಕಾಣಲಿ?"

ಪವಿತ್ರಳಿಗೆ ಆಘಾತವಾಗದಂತೆ ಮೊದಲು ಭಿನ್ನಪಡಿಸಬೇಕು...ತಕ್ಷಣ ಪವಿತ್ರ ನನಗೆ ಬರೆದ ಪತ್ರದ ನೆನಪಾಯಿತು. ಪ್ರತಾಪನ ಮರಣದಿಂದ ಪತ್ರವನ್ನು ಬಿಚ್ಚಿ ಓದಲು ಸಾಧ್ಯವಾಗದೆ ಇದ್ದುದನ್ನು ಯೋಚಿಸಿಕೊಂಡು ಪತ್ರವನ್ನು ಒಡೆದು ನೋಡಿದೆ. ಒಳಗೆ ಗುಂಡಗಿನ ಸುಂದರವಾದ ಅಕ್ಷರಗಳು:

"ಪ್ರೀತಿಯ ಅಣ್ಣ, ನಿಮ್ಮ ಸ್ನೇಹಿತರ ಮೇಲೆ ನನಗೆ ಅಸಾಧ್ಯ ಕೋಪ. ನಾವಿಬ್ಬರೂ ಟೂ... ಆದ್ದರಿಂದ ಈ ಕಾಗದವನ್ನು ನಿಮ್ಮ ಹೆಸರಿನಲ್ಲೇ ಬರೆದಿದ್ದೇನೆ. ನಾನು ಅವರೊಡನೆ ಯಾಕೆ ಟೂ... ಬಿಟ್ಟೆ ಎಂಬುದಕ್ಕೆ ಕಾರಣವನ್ನು ನನ್ನ ಒಡಹುಟ್ಟಿದ ಅಣ್ಣನಾದ ನಿಮ್ಮ ಹತ್ತಿರ ನಾನು ಹೇಳಬೇಕಾಗಿದ್ದು ನ್ಯಾಯವೇ...

"ನಾನು ಲೋಣಾವಳಕ್ಕೆ ಹೊರಡುವ ದಿನ ನಿಮ್ಮ ಸ್ನೇಹಿತರರೊಡನೆ ಆಸೆಯಿಂದ ಒಂದು ವಸ್ತುವನ್ನು ಕೇಳಿದ್ದೆ. ಬೇರೇನೂ ಅಲ್ಲ: ಒಂದು ಜತೆ ಹರಳು ಬಳೆಗಳನ್ನು ಅಷ್ಟೆ. ತೆಗೆದುಕೊಂಡು ಬರುತ್ತೇನೆಂದು ಹೋದವರು ಆಫೀಸು ಕೆಲಸದ ಅವಸರದಲ್ಲಿ ನನ್ನ ಬೇಡಿಕೆಯನ್ನು ಸಂಪೂರ್ಣವಾಗಿ ಮರೆತು ರಾತ್ರಿ ಒಂಭತ್ತು ಗಂಟೆಗೆ ಕೈ ಬೀಸುತ್ತಾ ನನ್ನ ಮುಂದೆ ನಿಂತರೆ ನನಗೆ ಕೋಪ ಬರುತ್ತದಾ ಇಲ್ಲವಾ...ನೀವೇ ಹೇಳಿ, ಅಣ್ಣ.

ಪತ್ನಿ ಆಸೆಯಿಂದ ಕೇಳಿದ್ದನ್ನು ಜ್ಞಾಪಿಸಿಕೊಂಡು ತಂದು ಕೊಡದವರಿಗೆ ನಾನು ಮಾತ್ರ ಯಾಕೆ ಮರೆಯದೆ ಕಾಗದ ಬರೆಯಬೇಕು? ಅವರು ಎಂದು ಆ ಬಳೆಗಳನ್ನು ತೆಗೆದುಕೊಂಡು ನನ್ನನ್ನು ನೋಡಲು ಬರುತ್ತಾರೋ ಅಂದೇ ಅವರೊಡನೆ ನನಗೆ ಮಾತು.

"ಅಣ್ಣ, ನಾನು ಇಲ್ಲದ ದಿನಗಳಲ್ಲಿ ನೀವೇ ಅವರನ್ನು ನೋಡಿಕೊಳ್ಳಬೇಕು. ಅವರು ಒಂದು ಮಗು. ಮಕ್ಕಳು ಹೊಸ ಮನುಷ್ಯರನ್ನು ನೋಡಿದರೆ ದೂರ ಹೋಗುತ್ತಾರೆ. ಈ ಮಗುವಿಗೆ ಅಂಥ ಭೇದ ಗೊತ್ತಿಲ್ಲ. ಸಮಯಕ್ಕೆ ಸರಿಯಾಗಿ ಊಟಮಾಡಲು ಹೇಳಿ. ಶನಿವಾರ ಬುಧವಾರ ಖಂಡಿತವಾಗಿಯೂ ಎಣ್ಣೆ ಸ್ನಾನ ಮಾಡಲು ಹೇಳಿ. ಹೊರಗೆ ಮಾಂಸ ತಿಂದರೆ ಅವರಿಗೆ ಆಗುವುದಿಲ್ಲ.

ನಿಮ್ಮ ಸಮೀಪದಲ್ಲಿ ಅವರು ಇರುವಾಗ ನನಗೆ ಯಾವ ಚಿಂತೆಯೂ ಇಲ್ಲ. ನಿಮ್ಮ ಹಿಂದೆ ನಿಂತು ಅವರು ಈ ಪತ್ರವನ್ನು ಕದ್ದು ಓದುತ್ತಿರಬಹುದು. ಅವರ ಬಳಿ ಸಹ ಹೇಳದ ಒಂದು ಸಿಹಿಯಾದ ವಿಷಯವನ್ನು ನಿಮ್ಮ ಬಳಿ ಈ ಪತ್ರದ ಕೊನೆಯ ಗೆರೆಗಳಲ್ಲಿ ಹೇಳುತ್ತೇನೆ.

ಅಣ್ಣ, ನೀವು ಮಾವನಾಗಲು ಇದ್ದೀರಿ. ಏಳು ತಿಂಗಳು ಕಳೆದಿವೆ.

ನಿಮ್ಮ ಒಲವಿನ ತಂಗಿ,
–ಪವಿತ್ರ."

ಪತ್ರದಿಂದ ಮುಖಮುಚ್ಚಿಕೊಂಡು ಶಬ್ದ ಬರದಂತೆ ಕಣ್ಣೀರಿಟ್ಟೆ. ಹೃದಯ ಬಿರಿಯುವಂತೆ ಹೊಡೆಯತೊಡಗಿತು. ಕೈವಸ್ತ್ರದಿಂದ ಮುಖವನ್ನೂ ಕಣ್ಣನ್ನೂ ಒರೆಸಿಕೊಂಡೆ. ಕಾರನ್ನು ಕ್ರೈರಿ ಕ್ರಾಸಿಂಗದ ಬಡಾವಣೆಯಲ್ಲಿ ಚಲಿಸುತ್ತಾ ಏಳನೇ ನಂಬರಿನ ಮನೆಯನ್ನು ಹುಡುಕಿದೆ. ಮನೆಯ ಮುಂದೆ ಕಾರನ್ನು ನಿಲ್ಲಿಸಿದೆ. ಕಾರಿನಿಂದ ಕೆಳಗೆ

ಇಳಿದೆ. ಹಸುರು ಬಣ್ಣ ಬಳಿದ ಬಿದಿರಿನ ಗೇಟನ್ನು ತೆರೆದು ಒಳಗೆ ಅಡಿ ಇರಿಸಿದೆ.

ಬಾಗಿಲಲ್ಲಿದ್ದ ಕಾಲಿಂಗ್ ಬೆಲ್ಲನ್ನು ಒತ್ತಿ ಬಹಳ ಹಿಂದಾಗಿ ಕ್ಷಣ ಕಾದು ನಿಂತೆ. ಒಳಗಿನಿಂದ ಯಾರೋ ಓಡಿ ಬರುವಂತೆ ಶಬ್ದವಾಯಿತು. ಅದರೊಡನೆ ಬಾಗಿಲು ತೆರೆಯಿತು. ಪವಿತ್ರ ಬಂದು ನಿಂತಳು. ಬಾಗಿಲಿನ ಚೌಕಟ್ಟಿನೊಳಗೆ ಅಸಾಧಾರಣ ಸೌಂದರ್ಯದ ದೇವತೆಯಂತೆ ಗೋಚರಿಸಿದಳು. ನನ್ನನ್ನು ಕಂಡೊಡನೆ ಹಾಹಾರಿ ಕಣ್ಣುಗಳನ್ನು ಅರಳಿಸಿ ನಿಟ್ಟುಸಿರಿಟ್ಟು, "ಹಾಯ್ ಅಣ್ಣಾ," ಎಂದಳು.

ನಾನು ಮುಗುಳ್ನಗಲು ಶ್ರಮಿಸಿದೆ.

"ವಾಟ್ ಎ ಪ್ಲೆಸೆಂಟ್ ಸರ್‌ಪ್ರೈಸ್! ನಿಜವಾಗಿಯೂ ನೀವೇನಾ ಅಣ್ಣಾ..."

"ಶೂರ್" ಎಂದೆ. "ಮನೆಯಲ್ಲಿ ಯಾರೂ ಇಲ್ಲವಾ? ಅಮ್ಮ, ಅಪ್ಪ."

"ಇಲ್ಲ. ಅಪ್ಪನೂ ಅಮ್ಮನೂ ಒಂದು ಮದುವೆಗೆಂದು ಪೂನಾಕ್ಕೆ ಹೋಗಿದ್ದಾರೆ. ಸಂಜೆ ಹಿಂತಿರುಗುತ್ತಾರೆ. ಕುಳಿತುಕೊಳ್ಳಿ ಅಣ್ಣ."

"ಕೂರಲಿಕ್ಕೆ ಸಮಯವಿಲ್ಲ ಪವಿತ್ರ. ಅಮ್ಮನಿಗೂ ಅಪ್ಪನಿಗೂ ಒಂದು ತುಂಡು ಕಾಗದದಲ್ಲಿ ನೀನು ಮುಂಬಯಿಗೆ ಹೋಗುವುದಾಗಿ ಬರೆದಿಟ್ಟು ಅವರನ್ನೂ ಅಲ್ಲಿಗೆ ಬರಲಿಕ್ಕಾಗಿ ತಿಳಿಸು. ನೀನು ಈಗಲೇ ನನ್ನೊಡನೆ ಬರಬೇಕು."

ಪವಿತ್ರಳ ಹೂನಗೆ ನಿರ್ಜೀವವಾಯಿತು. ಕ್ಷಣದಲ್ಲಿ ಮುಖ ಒಲೆಯಲ್ಲಿ ಬಿದ್ದ ಗುಲಾಬಿಯಂತೆ ಬಾಡಿತು. ಒಮ್ಮೆ ನನ್ನ ಮೇಲೆ ಪರೀಕ್ಷಾದೃಷ್ಟಿಯನ್ನು ಬೀರಿದಳು.

"ಏನಣ್ಣಾ ವಿಷಯ?" ಈಗ ಅವಳ ಕಂಠದಲ್ಲಿ ಜೀವವಿರಲಿಲ್ಲ. ನನ್ನ ಅವುಡುಗಳು ಅಲುಗಾಡಿದವು. "ಪವಿತ್ರ, ಪ್ರತಾಪನಿಗೆ ಒಂದು ಚಿಕ್ಕ ಆಕ್ಸಿಡೆಂಟ್."

"ಅಣ್ಣಾ..." ಪವಿತ್ರ ದುಃಖದಿಂದ ಕೂಗಿದಾಗ ಅವಸರ ಅವಸರವಾಗಿ ತಡೆದು, "ಹೆದರುವಂತಹದೇನೂ ಆಗ್ಲಿಲ್ಲ ಪವಿತ್ರ, ಕಾಲಿನಲ್ಲಿ ಸಣ್ಣ ಒಂದು ಪೆಟ್ಟು. ದ್ಯಾಟ್ಸ್ ಆಲ್. ಡಾಕ್ಟರ್

ಗೀರು ಸಹ ಇಲ್ಲ. ಮಂಚದಲ್ಲಿ ಕುಳಿತು ಜೋರ್ ಮೊಡೆಸುಕೊಂಡಿದ್ದಾನೆ. ನಿನ್ನ ನೋಡಬೇಕೆಂದು ಬಹಳ ಆಸೆಪಡ್ತಿದ್ದಾನೆ. ಅಷ್ಟೆ."

ಪವಿತ್ರಳ ಮುಖ ಕಪ್ಪಾಗತೊಡಗಿತು. ನನ್ನ ಸಮೀಪಕ್ಕೆ ಬಂದು ಕಣ್ಣಿಗೆ ಕಣ್ಣಿಟ್ಟು ಸತ್ಯವನ್ನು ಸಂಶೋಧಿಸತೊಡಗಿದಳು. ನನ್ನ ಅಂತರಾಳದಲ್ಲಿ ಅವಿತಿಟ್ಟ ಆ ನಗ್ನಸತ್ಯ ಮಾತ್ರ ಅವಳ ಕಣ್ಣಿಗೆ ಗೋಚರಿಸಲು ಅಸ್ಯ ಮಾರ್ಗವಿರಲಿಲ್ಲ.

"ನಿಜವಾಗಿಯೂ ಅವರಿಗೆ ಏನೂ ದೊಡ್ಡ ಪೆಟ್ಟು ಆಗಲಿಲ್ಲವಾ?"

"ಇಲ್ಲ, ಪವಿತ್ರ ಪ್ಲೀಸ್ ನನ್ನ ನಂಬು."

ಪವಿತ್ರ ಕ್ಷಣದಲ್ಲಿ ಒಳಗೆ ನುಗ್ಗಿ ಒಂದು ಕಾಗದವನ್ನೂ ಪೆನ್ನನ್ನೂ ತಂದು ಗೋಡೆಯ ಮೇಲಿರಿಸಿ ತಾಯಿ ತಂದೆಗೆ ಪತ್ರ ಬರೆದು, ಮೇಜಿನ ಮೇಲಿರಿಸಿದಳು. ಕಪಾಟಿನಿಂದ ಬಾಗಿಲ ಬೀಗ ತೆಗೆದುಕೊಂಡಳು.

"ಬನ್ನಿ ಅಣ್ಣ, ಹೋಗುವಾ," ಎಂದು ಮನೆಯನ್ನು ಬೀಗ ಹಾಕಿ ಕೀಯನ್ನು ಪಕ್ಕದ ಮನೆಯಲ್ಲಿ ವಾಸವಿರುವ ಆಂಗ್ಲೊ ಇಂಡಿಯನ್ ಸ್ತ್ರೀಯ ಬಳಿ ಕೊಟ್ಟು ವಿವರ ತಿಳಿಸಿ ಕಾರಿನೊಳಗೆ ನುಸುಳಿದಳು.

*

ಲೋಣಾವಳದ ಪ್ರದೇಶವನ್ನು ದಾಟಿಕೊಂಡು ಅತಿ ವೇಗವಾಗಿ ಮುಂದಕ್ಕೆ ಹೋಗುತ್ತಿತ್ತು ಕಾರು.

ಕುಳಿರ್ಗಾಳಿ ಸುಯ್ಯೆಂದು ಆ ಮಧ್ಯಾಹ್ನದ ವೇಳೆಯಲ್ಲೂ ಕಿವಿಯನ್ನು ಅಪ್ಪಳಿಸುತ್ತಿತ್ತು.

ಹಿಂಬದಿಯ ಸೀಟಿನಲ್ಲಿ ಕುಳಿತಿದ್ದ ಪವಿತ್ರ ಯಾವುದೋ ಬೆಂಕಿಯ ಕುಂಡದಲ್ಲಿ ಬಿದ್ದು ಒದ್ದಾಡುವಂತೆ ಕೂರಲಾಗದೆ ಚಡಪಡಿಸುತ್ತಿದ್ದಳು.

ಪವಿತ್ರ ಕ್ಷಣದಲ್ಲಿ ಅಳಲು ಪ್ರಾರಂಭಿಸಿದಳು.

'ದೇವರೆ ನಾನು ಎಲುಬು ಮುರಿದಿದೆ ಎನ್ನುವಾಗಲೇ ಇಷ್ಟು ರೋದಿಸುತ್ತಿದ್ದಾಳಲ್ಲ. ಇನ್ನು ಅವನ ಛಿದ್ರಗೊಂಡ ಆ ದೇಹವನ್ನು ಕಂಡರೆ...!' ನನ್ನ ಅಂತರಂಗದಲ್ಲಿ ಭೀತಿ ಬೇರು ಬಿಡತೊಡಗಿತು. ಈಗ ಮನಸ್ಸು ಸ್ಪಂದಿಸತೊಡ

ಅಡಗಿಸಿದ್ದ ಬಹಿರಂಗಪಡಿಸಲಾಗದ ವಿಷಯವನ್ನು ಛಿದ್ರ ಮಾಡತೊಡಗಿತು. ಇನ್ನು ನಾನು ಸುಮ್ಮನಿದ್ದರೆ ಆಕೆ ಪ್ರತಾಪನ ಮರಣವನ್ನು ನೋಡಿದರೆ ಸಹಿಸಲಾಗುವುದೇ ?

ಅಳುತ್ತಿದ್ದ ಪವಿತ್ರಳನ್ನು ಕುರಿತು ಗಂಭೀರವಾದ ದನಿಯಲ್ಲಿ ಹೇಳತೊಡಗಿದೆ,

"ಪವಿತ್ರ, ನಿನ್ನ ಕೂಗನ್ನು ನಿಲ್ಲಿಸುತ್ತೀಯಾ ಇಲ್ಲವಾ ?"

ನನ್ನ ಕಂಠದ ಗಂಭೀರತೆಯು ಅವಳ ಕೂಗನ್ನು ನಿಲ್ಲಿಸುವಂತೆ ಮಾಡಿತು.

"ನಿನ್ನ ಪ್ರತಾಪನ ಮೂಳೆಯ ಗಾಯಕ್ಕಾಗಿ ನೀನು ಇಷ್ಟೆಲ್ಲಾ ಅಳುತ್ತೀಯಲ್ಲ. ನಿನ್ನೆ ಫ್ಯಾಕ್ಟರಿಯಲ್ಲಿ ಒಂದು ಆಕ್ಸಿಡೆಂಟ್ ನಡೆದಿತ್ತು."

ಆಕೆ ಕಾತುರದಿಂದ ಕೇಳಿದಳು, "ಲೇಬರರ್...! ಅವರ ಹೆಸರೇನು ?"

"ನನಗೆ ಗೊತ್ತಿಲ್ಲ. ಟೆಂಪರವರಿಗಾಗಿ ಸೇರಿದವನು ಕಬ್ಬಿಣದ ಗರ್ಡರನ್ನು ಸರಪಣಿಯಲ್ಲಿ ಮೇಲೆ ಎತ್ತುವಾಗ ಈತ ಕೆಳಗೆ ನಿಂತು ಡೈರೆಕ್ಷನ್ ಕೊಡುತ್ತಿದ್ದ. ಸರ್ರನೆ ಗರ್ಡರ್ ಸರಪಣಿ ಬಿಟ್ಟು ಕೆಳಗೆ ಅವನ ಮೇಲೆ ಬಿದ್ದು, ಮಾಂಸ ಮೂಳೆ ಛಿದ್ರ ಛಿದ್ರವಾಗಿ ಬೇರೆ ಬೇರೆಯಾಗಿ ಸತ್ತ. ಹೋದ ವರ್ಷ ಮದುವೆ ಆಗಿದ್ದ. ಅವನ ಹೆಂಡತಿ ತುಂಬ ಗರ್ಭಿಣಿ ಬೇರೆ......" ನಾನು ಹೇಳುತ್ತಿರುವುದನ್ನು ಕೇಳುತ್ತಾ ಎವೆ ಇಕ್ಕದೆ ನನ್ನನ್ನು ನೋಡಿದಳು ಪವಿತ್ರ.

"ಅಣ್ಣ ನಿಮ್ಮ ಫ್ಯಾಕ್ಟರಿಯಲ್ಲಿ ಯಾವತ್ತೂ ಈ ಥರಾ ನಡೆದಿಲ್ಲವಲ್ಲ."

"ದಿನವೂ ಹಾಗೆ ಆಗುತ್ತಾ? ಬರೆಯುತ್ತಾ ಹೋಗುತ್ತಿದ್ದಾಗ ಪೆನ್ನಿನಲ್ಲಿದ್ದ ಮಸಿ ತಟ್ಟನೆ ಮುಗಿದು ಹೋಗುವ ಹಾಗೆ ನಮ್ಮ ಆಯುಸ್ಸು ಮುಗಿಯುವಾಗ ಆಕ್ಸಿಡೆಂಟು ಯಾವ ರೂಪದಲ್ಲಾದರೂ ಬರಬಹುದು.ಆ ಲೇಬರರ್ ಕಬ್ಬಿಣದ ಗರ್ಡರ್ ಅಡಿಯಲ್ಲಿ ಬಿದ್ದು ಸತ್ತ. ಹಾಗೆ ಬಹುಶಃ ನಾನು ಸತ್ತಿದ್ದರೆ......?"

"ಅಣ್ಣಾ......"

"ಸುಮ್ಮನೆ ಒಂದು ಮಾತಿಗೆ ಹೇಳಿದೆ ಅಷ್ಟೆ."

"ಹೇಳಬೇಡಿ. ಒಂದು ಮಾತಿಗೂ ಹೇಳಬೇಡಿ." ಎಂದು ಜೋರಾಗಿ ಅಳಲು ಶುರುಮಾಡಿದಳು ಪವಿತ್ರ. ಕಾರು ದಾದರನ್ನು ದಾಟಿ ಮಹಾಲಕ್ಷ್ಮಿ ದೇವಸ್ಥಾನದ ಬಡಾವಣೆಯಲ್ಲಿ ಸಾಗತೊಡಗಿತು.

"ಬೆಂಕಿ ಎಂದೊಡನೆ ಬಾಯಿ ಸುಟ್ಟು ಹೋಗುವುದಿಲ್ಲ. ಕಾರ್ಖಾನೆಯಲ್ಲಿ ಸೇರುವಾಗಲೇ ಜೀವಕ್ಕೇನಾದರೂ ಅಪಾಯವಾದರೆ ನಾನು ಜವಾಬುದಾರನಲ್ಲ ಎಂಬ ಕಾಗದಕ್ಕೆ ನಾವು ಸಹಿ ಹಾಕಿಯೇ ಕೆಲಸಕ್ಕೆ ಸೇರಬೇಕು. ಸಾವಿಗೆ ಯಾರೂ ವ್ಯತ್ಯಾಸವಾಗುವುದಿಲ್ಲ. ಪವಿತ್ರ ಈ ಕಬ್ಬಿಣದ ಗರ್ಡರ ಎಂದಾದರೂ ಒಮ್ಮೆ ಪ್ರತಾಪನ ತಲೆಯ ಮೇಲೂ ಬೀಳಬಹುದು. ಆ ಟೆಂಪರವರಿ ಲೇಬರರ್ ಸತ್ತತರ. ಪವಿತ್ರ ಸ್ವಲ್ಪ ಯೋಚನೆ ಮಾಡಿ ನೋಡು. ನೀನು ಓದಿದವಳು. ಯಾವುದನ್ನೂ ನಿಯಂತ್ರಿಸುವ ಮನಃಶ್ಶಕ್ತಿ ಇರಬೇಕು."

ಕಾರು ಮಹಾಲಕ್ಷ್ಮಿ ದೇವಸ್ಥಾನದ ಬಳಿಯಿಂದ ತಿರುಗಿ 'ಗಂಗಾ ಗರ್ಡರ್ಸ್' ಎಂಬ ದೊಡ್ಡ ಫಲಕ ಕಾಣಿಸಿಕೊಂಡಿತು. ಕಂಪೌಂಡಿನೊಳಗೆ ನುಸುಳಿ ವೆರಾಂಡದಲ್ಲಿ ನಿಂತಿದ್ದ ಕಾರ್ಮಿಕರ ಮೌನಕೂಟದ ಮುಂದೆ ಹೋಗಿ ನಿಂತಿತು.

ನಾನು ಮೊದಲು ಕಾರಿನಿಂದ ಕೆಳಗಿಳಿದೆ. ಹಿಂದಿನ ಬಾಗಿಲನ್ನು ತೆಗೆದು ಮೃದುವಾಗಿ ಉಲಿದೆ:

"ಇಳಿಯಮ್ಮ ಪವಿತ್ರ."

ಬಲಬದಿಗೆ ತುಸುವಾಲಿಸಿಕೊಂಡು ಕನ್ನಡಿಯ ಮೂಲಕ ಹೊರಗೆ ದಿಟ್ಟಿಸಿ ನೋಡಿಕೊಂಡಿದ್ದಳು......"

ಪವಿತ್ರಳ ತೋಳನ್ನು ಮೃದುವಾಗಿ ತಟ್ಟಿದೆ. ಪವಿತ್ರ ಬಿರಿದ ಕಣ್ಣುಗಳಿಂದ ಎಡಬದಿಗೆ ವಾಲಿ ಬಿದ್ದಳು— ಮಿಡಿಯಲು ಮರೆತ ಹೃದಯದೊಡನೆ. ✡



# ಆಹಾರ ಮತ್ತು ಹೃದ್ರೋಗ

ಡಾ. ವೈ. ಎಸ್. ಲೂಯಿಸ್

ರಕ್ತನಾಳಗಳು ತಮ್ಮ ಮೃದುತ್ವವನ್ನೂ ಪುನಶ್ಚೈತನ್ಯ ಶಕ್ತಿಯನ್ನೂ ಕ್ರಮಕ್ರಮವಾಗಿ ಕಳೆದುಕೊಂಡು ಗಡುಸಾಗಿ ಕೊನೆಗೆ ಹೃದಯದ ಬೇನೆ ಅಥವಾ ಸ್ತಂಭನ, ಪಾರ್ಶ್ವವಾಯುಗಳು ತಗಲುವುದು ಸಂಪದ್ಭರಿತ ದೇಶಗಳಲ್ಲಿ ಈಗ ಸಾಮಾನ್ಯವಾಗಿದೆ. ಭಾರತದ ದೊಡ್ಡ ನಗರಗಳಲ್ಲೂ ಸಿರಿವಂತರಲ್ಲಿ ಇದು ಹೆಚ್ಚು ಹೆಚ್ಚಾಗಿ ತೋರಿಬರುತ್ತಿದೆ.

ಆಹಾರದಲ್ಲಿ ವನಸ್ಪತಿ, ತುಪ್ಪ, ಬೆಣ್ಣೆ ಮುಂತಾದ ಜಿಡ್ಡಿನ ಪದಾರ್ಥಗಳು ಹೆಚ್ಚಾಗಿದ್ದರೆ ಈ ಪರಿಸ್ಥಿತಿ ಉಂಟಾಗುವುದೆಂದು ನಂಬಿಕೆ. ಕಡಿಮೆ ಸಾಂದ್ರತೆಯಿರುವ ಜಿಡ್ಡು ಪದಾರ್ಥಗಳು ರಕ್ತದಿಂದ ರಕ್ತನಾಳಗಳ ಒಳಪೈ ಕೋಶಗಳನ್ನು ದಾಟಿ ಬಿಡುತ್ತವೆ. ಇಲ್ಲಿ ಇವು ವಿಭಜನೆ ಹೊಂದಿ ಕೊಲೆಸ್ಟೆರಾಲ್ ಎಂಬ ರಾಸಾಯನಿಕವು ಉತ್ಪತ್ತಿಯಾಗುತ್ತದೆ. ಇದು ರಕ್ತನಾಳಗಳ ಪೈಯಲ್ಲಿ ಉರಿಯೂತ ಬರಿಸುತ್ತದೆ. ಆಗ ನಾರಿನಂತಹ ಪದಾರ್ಥಗಳು ಇಲ್ಲಿ ಶೇಖರವಾಗತೊಡಗುತ್ತವೆ. ನಾಳಗಳ ಒಳ ವ್ಯಾಸ ಕುಂದುತ್ತ, ರಕ್ತದ ಹರಿಯುವಿಕೆ ತಗ್ಗುತ್ತದೆ. ರಕ್ತದಲ್ಲಿರುವ ಸುಣ್ಣದ ಅಂಶ ಅಥವಾ ಕ್ಯಾಲ್ಸಿಯಂ ರಕ್ತನಾಳದ ಪೈಯಲ್ಲಿ ಹೆಚ್ಚಾದ ಜಿಡ್ಡಿನ ಪದಾರ್ಥಗಳ ಜೊತೆ ಸೇರಿ ಮೂಳೆಯಷ್ಟು ಗಟ್ಟಿಯಾದ ಸಂಯುಕ್ತಗಳು ಉಂಟಾಗುತ್ತವೆ. ಇದು ಸಾಮಾನ್ಯವಾಗಿ ರಕ್ತನಾಳಗಳು ಕವಲೊಡೆಯುವ ಕಡೆ ಆಗುತ್ತದೆ. ಈ ಭಾಗಗಳು ದಪ್ಪವಾಗಿ, ಪುನಶ್ಚೈತನ್ಯ ಶಕ್ತಿ ಕಳೆದುಕೊಂಡು ಭಿದುರವಾಗುತ್ತವೆ.

ಇದರಿಂದ ಹೃದಯದ ಕೆಲಸ ಎಷ್ಟು ಕಷ್ಟವಾಗುತ್ತದೆಂದು ತಿಳಿಯಬಹುದು. ದೇಹದ ಎಲ್ಲಾ ಭಾಗಗಳಿಗೂ ಆಮ್ಲಜನಕ ಮತ್ತು ಪೋಷಕ ವಸ್ತುಗಳನ್ನು ಸರಬರಾಜು ಮಾಡುವುದು ಅದರ ಕರ್ತವ್ಯ. ಇದಕ್ಕಾಗಿ ಹೆಚ್ಚಿನ ಪ್ರಮಾಣದ ರಕ್ತವನ್ನು ನಾಳಗಳ ಮೂಲಕ 'ಪಂಪ್' ಮಾಡುತ್ತಿರುತ್ತದೆ. ೩/೪ ಸೆಕೆಂಡಿನಲ್ಲಿ ಅಯೋರ್ಟ ಮೂಲಕ ೭೦ ಮಿಲಿ ಲೀಟರ್ ರಕ್ತ ಹೊರಬೀಳುತ್ತದೆ. ಮೆದುಳಿಗೂ ಹೃದಯದ ಮಾಂಸ ಖಂಡಗಳಿಗೂ ಇದೇ ರೀತಿ ಅಧಿಕ ಪ್ರಮಾಣದಲ್ಲಿ ರಕ್ತನಾಳಗಳ ಮೂಲಕ ರಕ್ತ ಹರಿಯುತ್ತದೆ. ಇದು ಸಾಧ್ಯವಾಗಲು ರಕ್ತನಾಳಗಳು ಸುಲಭವಾಗಿ ಹಿಗ್ಗುವುದು ತಗ್ಗುವುದು ಅವಶ್ಯಕ. ಗಡುಸಾದರೆ 'ಪಂಪ್' ಮಾಡುವ ಹೃದಯಕ್ಕೆ ಕಷ್ಟ. ಒತ್ತಡ ಹೆಚ್ಚಾಗುತ್ತದೆ.

ರಕ್ತದಲ್ಲಿ ಕೊಲೆಸ್ಟೆರಾಲ್ ರಾಸಾಯನಿಕ ಮತ್ತು ಜಿಡ್ಡು ಹೆಚ್ಚಾಗಿರುವುದು ಹೃದ್ರೋಗಕ್ಕೆ ಕಾರಣವಾಗುತ್ತದೆ ಎಂದು ನಂಬಿಕೆ. ಏಕೆಂದರೆ 'ಅತಿರೋಸ್ಕ್ಲರೋಸಿಸ್' ರೋಗವಿರುವವರ ರಕ್ತನಾಳಗಳ ಪೈಯಲ್ಲಿ ಹೆಚ್ಚು ಜಿಡ್ಡಿನ ಪದಾರ್ಥಗಳಿರುತ್ತವೆ ಮತ್ತು ಹೃದ್ರೋಗಿಗಳ ರಕ್ತದಲ್ಲಿ ಕೆಲವು ಜಿಡ್ಡಿನ ಪದಾರ್ಥಗಳು ಮತ್ತು ಕೊಲೆಸ್ಟೆರಾಲ್ ಅಧಿಕವಾಗಿರುತ್ತದೆ. ಆಹಾರದಲ್ಲಿರುವ ಘನ ರೂಪದ ಪೂರಣ ಜಿಡ್ಡುಗಳ ಪ್ರಮಾಣಕ್ಕೂ, ರಕ್ತದ ಕೊಲೆಸ್ಟೆರಾಲ್ ಪ್ರಮಾಣಕ್ಕೂ ಪರಸ್ಪರ ಸಂಬಂಧವಿದೆಯೆಂದು ತಿಳಿದುಬಂದಿದೆ.

ಸಂಪದ್ಭರಿತ ದೇಶಗಳ ಜನರಲ್ಲಿ ರಕ್ತದ ಕೊಲೆಸ್ಟೆರಾಲ್ ಪ್ರಮಾಣ ಬಡದೇಶದ ಜನರ ರಕ್ತದಲ್ಲಿರುವುದಕ್ಕಿಂತ ಬಹಳ ಹೆಚ್ಚಾಗಿರುತ್ತದೆ. ಇವರಲ್ಲಿ ಹೃದ್ರೋಗಗಳೂ ಸಾಮಾನ್ಯ.

೧೯೬೭ ರಲ್ಲಿ ಸರ್ ಜಾನ್ ಪ್ಯಾಕ್ ವೈಕಲ್ ಎನ್ನುವ ವಿಜ್ಞಾನಿ ಆಹಾರದಲ್ಲಿ ಅಪೂರಣ, ಜಿಡ್ಡುಗಳನ್ನು ಮಾತ್ರ ಬಳಸಿ ಪೂರಣ ಜಿಡ್ಡುಗಳನ್ನು ವರ್ಜಿಸುವುದರಿಂದ ಹೃದ್ರೋಗಗಳನ್ನು ತಡೆಗಟ್ಟಲಾಗ ವುದಿಲ್ಲ ಎಂದು ತೋರಿಸಿಕೊಟ್ಟರು. ಇದರಿಂದ ಆಹಾರದ ಜಿಡ್ಡೆ ರಕ್ತನಾಳಗಳು ಗಡುಸಾಗಲು ಕಾರಣ ಎಂದು ತಿಳಿದುಕೊಂಡಿದ್ದವರಿಗೆ ವಿಸ್ಮಯವಾಯಿತು. ಬ್ರಿಟಿಶ್ ಮೆಡಿಕಲ್ ಜರ್ನಲ್ ಪತ್ರಿಕೆಯೂ ಆಹಾರದ ಕೊಲೆಸ್ಟೆರಾಲ್ ಪ್ರಮಾಣಕ್ಕೂ ಹೃದ್ರೋಗಗಳಿಗೂ ಯಾವ ಸಂಬಂಧವೂ ಇರುವಂತಿಲ್ಲ ಎಂಬ ವರದಿಯನ್ನು ಪ್ರಕಟಿಸಿತು.

ಈಚಿನ ವೈಜ್ಞಾನಿಕ ಸಂಶೋಧನೆಯ ಪ್ರಕಾರ ರಕ್ತದಲ್ಲಿ ಜಿಡ್ಡುಗಳು ಕೊಲೆಸ್ಟೆರಾಲ್ ಜೊತೆಗೆ ಹೇಗೆ ಸೇರಿ ಪ್ರವಾಸಿಯಾಗುತ್ತವೆ ಎನ್ನುವುದು ಮುಖ್ಯ. ಜಿಡ್ಡನ್ನು ರಕ್ತದ ಮೂಲಕ ಬೇರೆ ಬೇರೆ ಕಡೆಗೆ ಒಯ್ಯಲು ಕೊಲೆಸ್ಟೆರಾಲ್ ಎರಡು ತೆರನ ಸಂಯುಕ್ತಗಳನ್ನು ತಯಾರಿಸುತ್ತದೆ. ಒಂದು 'ಹೈ ಡೆನ್ಸಿಟಿ ಲಿಪಿಡ್' (HDL) ಅಥವಾ ಹೆಚ್ಚಿನ ಸಾಂದ್ರತೆಯ ಸಂಯುಕ್ತ. ಇನ್ನೊಂದು 'ಲೋ ಡೆನ್ಸಿಟಿ ಲಿಪಿಡ್' (LDL) ಅಥವಾ ಕಡಿಮೆ ಸಾಂದ್ರತೆಯ ಸಂಯುಕ್ತ. ಹೆಚ್ಚಿನ ಸಾಂದ್ರತೆಯ ಸಂಯುಕ್ತಗಿಂದ ಯಾವ ತೊಂದರೆಯೂ ಇಲ್ಲ. ನಿಜಕ್ಕೂ ಇದು ಅಪಾಯಕರವಾದ ಕಡಿಮೆ ಸಾಂದ್ರತೆಯ ಸಂಯುಕ್ತವು ರಕ್ತನಾಳಗಳ ಮೈಯಲ್ಲಿ ಸೇರಿಕೊಳ್ಳುವುದನ್ನು ತಡೆಯಲು ಸಹಕಾರಿ. ಇದನ್ನು ಪ್ರಯೋಗಗಳಿಂದ ತೋರಿಸಿಕೊಡಲಾಗಿದೆ. 'ಲೋ ಡೆನ್ಸಿಟಿ ಲಿಪಿಡ್' ಪದಾರ್ಥಗಳೇ ರಕ್ತನಾಳಗಳಲ್ಲಿ ಸೇರಿಕೊಂಡು ಉರಿಯೂತ, ಪಡಸುತನ ಬರಿಸಿ ಅನರ್ಥಕ್ಕೆ ಕಾರಣವಾಗುವುದು.

ಈ ಎರಡೂ ತೆರನ ಸಂಯುಕ್ತಗಳ ಪರಸ್ಪರ ಪ್ರಮಾಣವೇ ಒಬ್ಬ ವ್ಯಕ್ತಿಯು 'ಅತೀರೋಸ್ಕ್ಲೀರೋಸಿಸ್' ರೋಗಕ್ಕೆ ತುತ್ತಾಗುತ್ತಾನೋ ಇಲ್ಲವೋ ಎನ್ನುವುದನ್ನು ನಿರ್ಧರಿಸುವುದು. ಎಚ್. ಡಿ. ಎಲ್. ಹೆಚ್ಚಿದ್ದರೆ ಚಿಂತೆಯಿಲ್ಲ, ಆದರೆ ಎಲ್. ಡಿ. ಎಲ್. ಕಡಿಮೆಯಿರಬೇಕು.

ಆದರೆ ಈ ಪರಸ್ಪರ ಪ್ರಮಾಣ ಆಹಾರದಲ್ಲಿರುವ ಜಿಡ್ಡಿನ ಗುಣವನ್ನು ಅವಲಂಬಿಸುವುದಿಲ್ಲ. ಅದು ಇತರ ಕೆಲವು ಸಂದರ್ಭಗಳಿಗೆ ಹೊಂದಿಕೊಂಡಿರುತ್ತದೆ, i) ಮನುಷ್ಯನು ದೊರಕಿಸಿಕೊಳ್ಳುವ ಶರೀರದ ಚಟುವಟಿಕೆ (ವ್ಯಾಯಾಮ)– ಇದು ಇದು ಜಿಡ್ಡು ಸಾಗಣೆಯಾಗಲು ಸಹಾಯಕವಾಗಿರುತ್ತದೆ; ii) ಆಹಾರದ ಪ್ರಮಾಣ– ಇದು ಬೇಕಾದುದಕ್ಕಿಂತ ಹೆಚ್ಚಿರಕೂಡದು; iii) ಆಹಾರದ ಶರ್ಕರ ಪದಾರ್ಥಗಳ ಪ್ರಮಾಣ– ಪಿಷ್ಟ, ಸಕ್ಕರೆ ಮುಂತಾದವುಗಳು ಹೆಚ್ಚಿದ್ದಷ್ಟೂ ಅಪಾಯಕರ. ಎಲ್. ಡಿ. ಎಲ್. ಹೆಚ್ಚುತ್ತದೆ; iv) ಧೂಮಪಾನ– ಇದು ಹೆಚ್ಚಿದಷ್ಟೂ ರಕ್ತದ ಎಲ್. ಡಿ. ಎಲ್. ಹೆಚ್ಚುತ್ತದೆ; v) ಆಹಾರದಲ್ಲಿರುವ ಧಾನ್ಯಗಳ ಮಿದು ನಾರಿನ ಅಂಶ (fibre)– ಇದು ಹೆಚ್ಚಿದ್ದರೆ ಎಲ್. ಡಿ. ಎಲ್. ಒಳಗೆ ಸೇರಿಕೊಳ್ಳುವುದನ್ನು ಕಡಿಮೆ ಮಾಡುತ್ತದೆ.

ಆದುದರಿಂದ ಒಬ್ಬನು ಹೃದ್ರೋಗ ಮತ್ತು ಪಾರ್ಶ್ವವಾಯು ರೋಗಗಳಿಗೆ ತುತ್ತಾಗುವುದನ್ನು ತಪ್ಪಿಸಿಕೊಳ್ಳಲು ಕೆಳಕಂಡ ಎಚ್ಚರಿಕೆ ಕ್ರಮ ವಹಿಸುವದು ಅಗತ್ಯ:

೧) ಅತಿಯಾದ ಆಹಾರ ಸೇವೆ ಮತ್ತು ಧೂಮಪಾನ ತ್ಯಜಿಸಬೇಕು.

೨) ಪುಷ್ಟಿಕರವಾದ ಆಹಾರ ತೆಗೆದುಕೊಳ್ಳಬೇಕು. ಆದರೆ ಇದರಲ್ಲಿ ಜಿಡ್ಡು. ಪಿಷ್ಟ, ಸಕ್ಕರೆ ಹೆಚ್ಚಾಗಿರಕೂಡದು. ಧಾನ್ಯಗಳಲ್ಲಿ ಹೆಚ್ಚು ಮಿದು ನಾರಿನ ಅಂಶ ಇರಬೇಕು. ಅತಿಯಾಗಿ 'ಪಾಲಿಷ್' ಆಗಿರಕೂಡದು.

೩) ದೇಹಕ್ಕೆ ಸಾಕಷ್ಟು ವ್ಯಾಯಾಮ ಕೊಡಬೇಕು. ಓಡಾಡುವುದರಿಂದ ಮತ್ತು ಕೆಲಸ ಮಾಡುವುದರಿಂದ ತಿಂದ ಆಹಾರವನ್ನು ಚೆನ್ನಾಗಿ ಅರಗಿಸಿಕೊಳ್ಳಬೇಕು.

ಈ ಎಚ್ಚರಿಕೆಗಳನ್ನು ಚಿಕ್ಕ ವಯಸ್ಸಿನಿಂದಲೇ ಪಾಲಿಸಿಕೊಂಡು ಬರುವುದು ರೋಗಗಳನ್ನು ತಡೆಗಟ್ಟಲು ಮತ್ತು ಆಯುಷ್ಯವನ್ನು ಹೆಚ್ಚಿಸಿಕೊಳ್ಳಲು ಬಹಳ ಮುಖ್ಯ. ✡

# ರೆಕ್ಸೋನಾ ನಿಮ್ಮ ಚರ್ಮದ ಆರೈಕೆ ಮಾಡುತ್ತದೆ...





## ಅದನ್ನು ನಯವಾಗಿ, ಕಾಂತಿಯುಕ್ತವಾಗಿ ಇಡುತ್ತದೆ.

**ರೆಕ್ಸೋನಾದಲ್ಲಿ ನಾಲ್ಕು ನೈಸರ್ಗಿಕ ತೈಲಗಳ ಮಿಶ್ರಣವಿದೆ—**

ಸಪುಶ್ (ದೇವದಾರು ಜಾತಿ), ಲವಂಗದ ತೊಗಟೆ, ಲವಂಗ ಮತ್ತು ಸರಳವ್ (ಇನ್ನೊಂದು ದೇವದಾರು ಜಾತಿ).
ರೆಕ್ಸೋನಾದಿಂದ ಸ್ನಾನ ಮಾಡಿರಿ—ಅದು ನಿಮ್ಮ ಚರ್ಮವನ್ನು ಕೋಮಲ ಹಾಗೂ ಕಾಂತಿಯುಕ್ತವಾಗಿಡುತ್ತದೆ.
ನಿಮ್ಮ ಪ್ರೀತಿ ಪಾತ್ರವಾದ, ಹೆಚ್ಚು ಸಮಯ ಉಳಿಯುವ ಪರಿಮಳವಿರುವ ರೆಕ್ಸೋನಾ ನಿಮ್ಮ ಚರ್ಮಕ್ಕೆ ಅತ್ಯಂತ ಸ್ವಾಭಾವಿಕವಾದ ರಕ್ಷಣೆಯ ಸಾಧನವಾಗಿದೆ.




# ರೆಕ್ಸೋನಾ ನಿಮ್ಮ ಚರ್ಮಕ್ಕೆ ಹಿತಕರ

ಹಿಂದುಸ್ಥಾನ್ ಲೀವರ್' ಅವರ ಉತ್ಕೃಷ್ಟ ತಯಾರಿ

ಸ್ವತಿ ಮಿಕ್ಕೆಲ್ಲ ನದಿಗಳಿಗಿಂತ ಹೆಚ್ಚು. ಋಗ್ವೇದದಲ್ಲಿ ಸರಸ್ವತಿ ನದಿಗೆ ದೊರೆತಿರುವ ಸ್ಥಾನವನ್ನು ಗಮನಿಸಿದರೆ ಪ್ರಾಯಶಃ ಅಂದು ಈ ನದಿ ತುಂಬಿ ಹರಿಯುತ್ತಿದ್ದ ಮಹಾನದಿಯಾಗಿದ್ದಿರಬೇಕು.

ಭಾರತದ ಪ್ರಾಚೀನ ಭೂಗೋಳ ಅಂದಿನ ನೆಲದ ವಿಂಗಡಣೆಯನ್ನು ಮನು ಗುರುತಿಸಿರುವುದು ತುಂಬ ಕುತೂಹಲಕಾರಿ. ಸರಸ್ವತೀ ನದಿಗೆ ಇಲ್ಲೂ ಅಗ್ರಪೂಜೆ. ಮನುವಿನ ರೀತ್ಯ ಸರಸ್ವತಿ ಮತ್ತು ದೃಶದ್ವತಿ ಪವಿತ್ರ ನದಿಗಳ ಮಧ್ಯ ಭಾಗದ ದೈವ ನಿಯಾಮಕ ದೇಶವೇ ಬ್ರಹ್ಮಾವರ್ತ. ಬ್ರಹ್ಮಾವರ್ತದ ಅನಂತರ ಕುರುಕ್ಷೇತ್ರ, ಮತ್ಸ್ಯ, ಪಾಂಚಾಲ, ಶೂರಸೇನ ಮುಂತಾದ ಪ್ರದೇಶಗಳನ್ನೊಳಗೊಂಡ ಭಾಗ ಬ್ರಹ್ಮ ಋಷಿದೇಶ. ಹಿಮಾಲಯ ಹಾಗೂ ವಿಂಧ್ಯ ಪರ್ವತಗಳ ನಡುವೆ ಕುರುಕ್ಷೇತ್ರದ

# ಸರಸ್ವತೀ ನದಿ ಗುಪ್ತಗಾಮಿನಿಯೆ?

**ಟಿ. ಆರ್. ಅನಂತರಾಮು**

ಮಹತಿಗಿಂತಲೂ ಮಹತ್ತರವಾದ ಸರಸ್ವತೀ, ಸರಯೂ, ಸಿಂಧೂ ಮೊದಲಾದ ನದಿಗಳು ತಮ್ಮ ಊರ್ಮಿಗಳಿಂದ ಕೂಡಿ ನಮ್ಮನ್ನು ರಕ್ಷಿಸಲು ನಮ್ಮ ಯಜ್ಞಕ್ಕೆ ಆಗಮಿಸಲಿ. ಪ್ರಕಾಶಯುತರೂ, ಮಾತೃಭೂತರೂ, ಪ್ರೇರಕರೂ ಆದ ಆ ಮಹಾನದಿಗಳು ಘೃತಯುತವೂ, ಮಧುಯುತವೂ ಆದ ತಮ್ಮ ಜಲಗಳನ್ನು ನಮಗೆ ಕರುಣಿಸಲಿ" ಎಂಬ ಪ್ರಾರ್ಥನೆ ಋಗ್ವೇದದ ನದೀಸೂಕ್ತದಲ್ಲಿದೆ. ವೇದಕಾಲದಲ್ಲಿ ಸರಸ್ವತಿ, ಸರಯೂ, ಸಿಂಧೂ ನದಿಗಳನ್ನು ಮಾತ್ರ ಮಹಾನದಿಗಳೆಂದು ಪರಿಗಣಿಸಲಾಗಿತ್ತು. ನದೀಸೂಕ್ತದಲ್ಲಿ ಗಂಗಾ, ಯಮುನಾ, ಶತದ್ರು ಮುಂತಾದ ಇಪ್ಪತ್ತೊಂದು ನದಿಗಳ ವರ್ಣನೆ ಇದ್ದರೂ ಸರಸ್ವತೀ ನದಿಯ

ಪೂರ್ವಕ್ಕೆ ಮತ್ತು ಪ್ರಯಾಗದ ಪಶ್ಚಿಮಕ್ಕೆ ನೆಲೆಸಿರುವ ನಾಡು ಮಧ್ಯ ದೇಶವೆನ್ನಿಸಿದರೆ ಪೂರ್ವ ಪಶ್ಚಿಮ ಸಾಗರಗಳ ನಡುವೆ ಇರುವ ನಾಡು ಆರ್ಯಾವರ್ತ. ಈ ಎಲ್ಲ ನಾಡುಗಳನ್ನು ಒಟ್ಟಿಗೆ ಕೂಡಿಸಿ ಭರತವರ್ಷವೆಂಬ ಹೆಸರು. ಇದು ಮನುವಿನ ಭೌಗೋಳಿಕ ದಿಗ್ಬಂಧನ.

ಮನುವಿನ ಭಾರತದ ಧಾರ್ಮಿಕ ಎಲ್ಲೆಗಳು ಇಂದಿನ ಭೌಗೋಳಿಕ ಎಲ್ಲೆಗೂ ಹೆಚ್ಚು ವ್ಯತ್ಯಾಸಗಳಿವೆ, ನಿಜ. ಸಾವಿರಾರು ವರ್ಷಗಳೇ ಮನುವಿನಿಂದ ನಮ್ಮ ತಲೆಮಾರಿನವರೆಗೆ ಸಂದಿವೆ. ಅಂತೆಯೇ ಭೂಗೋಳದಲ್ಲೂ ಕಾಲ ಕ್ರಿಯೆಗಳಿಗೆ ಒಳಗಾಗಿ ಪ್ರಕೃತಿ ಅನೇಕ ಬದಲಾವಣೆಗಳನ್ನು ಹೊಂದಿದೆ. ಭರತ ವರ್ಷ, ಜಂಬೂ ದ್ವೀಪದ

ನಲ್ಲಿ ಸರಸ್ವತಿಯನ್ನು ಕೂಡಿಕೊಳ್ಳುತ್ತಿತ್ತು. ಯಮುನೆ ಮಹಾಭಾರತದ ಕಾಲಕ್ಕೇ ಪೂರ್ವದತ್ತ ಸರಿದು ತನ್ನ ಹಳೆಯ ಪಾತ್ರವನ್ನು ತೊರೆದು ಅವರ ಜತೆಗೆ ಸರಸ್ವತಿಯನ್ನು ಅನಾಥಳನ್ನಾಗಿ ಮಾಡಿ ನೀರನ್ನೆಲ್ಲಾ ಕಸಿಯಿತು. ಇದು ಸರಸ್ವತಿಯ ಭವ್ಯ ಪ್ರಾಚೀನ ಇತಿಹಾಸಕ್ಕೆ ತಟ್ಟಿದ ಮೊದಲ ಶಾಪ.

ಬಿಕಾನೇರ್ ಮತ್ತು ಸರಸ್ವತೀ ನದೀ ಪಾತ್ರಗಳ ಮಧ್ಯ ಭಾಗದಲ್ಲಿ ಮತ್ತೊಂದು ಪ್ರಾಚೀನ ಶುಷ್ಕ ನದಿಪಾತ್ರ ಹಾಯುತ್ತದೆ. ಹಿಮಾಲಯದ ತಪ್ಪಲಿನವರೆಗೂ ಈ ಬತ್ತಿದ ಪಾತ್ರ ಹರಿದಿದ್ದು ಕೊನೆಗೆ ಸಟ್ಲೇಜ್ ನದಿ ಹುಟ್ಟುವ ರೂಪಾರ್ ಬಳಿ ಭಾಗವನ್ನು ಸಂಪರ್ಕಿಸುತ್ತದೆ ಇದು ಸಟ್ಲೇಜ್‌ನದಿಯ ಹಿಂದಿನ ಪಾತ್ರವಾಗಿರಲೂ ಸಾಧ್ಯ. ಉತ್ತರದಲ್ಲಿ ಸಟ್ಲೇಜ್ ನದಿ ಕವಲೊಡೆದ ಇಂತಹ ಮೂರು ಪಾತ್ರಗಳನ್ನು ಇಂದು ಗುರುತಿಸಬಹುದು. ಹಿಮಾಲಯದಲ್ಲಿ ಹುಟ್ಟುವ ಬಹುಪಾಲು ನದಿಗಳ ಬದುಕಿನಲ್ಲಿ ಇಂತಹ ಪಾತ್ರ ಬದಲಾವಣೆ ಭೂಚರಿತ್ರೆಯಲ್ಲಿ ಘಟಿಸಿದೆ. ಬದಲಾಗುವ ಭೂ ಮೇಲ್ಮೈ ಲಕ್ಷಣಗಳಿಗನುಗುಣವಾಗಿ ನದಿಗಳು ತಮ್ಮ ಪಾತ್ರವನ್ನು ಕೊರೆಯುವುದು ಸ್ವಾಭಾವಿಕ. ಸಟ್ಲೇಜ್ ಹಾಗೂ ಯಮುನಾ ನದಿಗಳು ಮಾಡಿದ್ದು ಈ ಕೆಲಸವನ್ನೇ.

## ಗತವೈಭವ

ಹಾಗಾದರೆ ವೇದಕಾಲದಲ್ಲಿ ತುಂಬಿ ಹರಿಯುತ್ತಿದ್ದ ಸರಸ್ವತೀ ನದಿ ಯಾವುದು? ಇತ್ತೀಚಿನ ಅಧ್ಯಯನಗಳು ತಿಳಿಸುವಂತೆ ರಸೂಲದ ಬಳಿ ಇರುವ ಹಾಕ್ರ ನದಿಯ ಬತ್ತಿದ ಪಾತ್ರವೇ ಮೂಲ ಸರಸ್ವತೀನದಿ. ಬಿಕಾನೇರ್ ಸೀಮೆಯಲ್ಲಿ ಈ ಪಾತ್ರ ನೂರ ಅರವತ್ತು ಕಿಲೋಮೀಟರುಗಳಷ್ಟು ದೂರ ಹಬ್ಬಿದೆ. ಇದರ ಅಗಲವೇ ಸುಮಾರು ಎಂಟು ಕಿ.ಮೀ.ಗಳಷ್ಟು. ಪಾತ್ರದುದ್ದಕ್ಕೂ ಜಿಗುಟಾದ ಕಪ್ಪು ಮಣ್ಣು: ಸ್ಥಳೀಯರು ಇಂದಿಗೂ ಇದನ್ನೇ ಮೂಲ ಸರಸ್ವತೀ ನದಿ ಎನ್ನುತ್ತಾರೆ. ನದಿಯ ಇಕ್ಕೆಲ್ಲದಲ್ಲೂ ಮರಳು ಭೂಮಿ. ಸದಾ ಮರಳಿನ ಆಕ್ರಮಣ ನಡೆದೇ ಇದೆ. ತೀರದುದ್ದಕ್ಕೂ ಸಮವಾಗಿ ಬೆಳೆದಿರುವ ವೃಕ್ಷಗಳ ತಡೆ ಇಲ್ಲದಿದ್ದರೆ ಪ್ರಾಯಶಃ ನದಿಯ ಈ ಅಸ್ಥಿಪಂಜರವೂ ಇಂದು ಗೋಚರಿಸುತ್ತಿರಲಿಲ್ಲ. ಸರಸ್ವತಿ ನದಿ ಇಲ್ಲಿ ಹರಿದಿರುವುದಕ್ಕೆ ಪುರಾವೆಗಳು ಹಲವಾರು. ಬತ್ತಿದ ಪಾತ್ರದ ಜತೆಗೆ ದಡದಲ್ಲಿ ಹೇರಳವಾಗಿ ದೊರೆಯುವ ವೇದಕಾಲದ ಕುಟೀರಗಳು ಸಾಕ್ಷಿಯೊದಗಿಸುತ್ತವೆ. ಭಾರತೀಯ ಪುರಾತತ್ವ ಇಲಾಖೆಯವರು ನಡೆಸಿದ ಉತ್ಖನನದಿಂದಾಗಿ ಕುಟೀರಗಳ ಜತೆಗೆ ದೇವಾಲಯ ಹಾಗೂ ಇತರ ವಸಾಹತುಗಳು ದಡದುದ್ದಕ್ಕೂ ಗುಡ್ಡದ ರೂಪದಲ್ಲಿ ಹಬ್ಬಿರುವುದು ಬೆಳಕಿಗೆ ಬಂದಿದೆ. ಪಂಡಿತರ ಅಭಿಪ್ರಾಯದಲ್ಲಿ ಇವು ಮೊಹೆಂಜೋದಾರೋ ಕಾಲದ ಹಾಗೂ ಅನಂತರದ ಸಂಸ್ಕೃತಿಗೆ ಸೇರಿದ ಉಳಿಕೆಗಳು. ಚಾರಿತ್ರಿಕ ದೃಷ್ಟಿಯಿಂದ ಇವು ಮಹತ್ವಪೂರ್ಣವೆನ್ನಿಸಿವೆ





ಭೌಗೋಳಿಕವಾಗಿ ಮತ್ತೊಂದು ಅಂಶ ಕೂಡಾ ಪ್ರಕಾರಿ ಸಿದ್ಧವಿದೆ.

## ಅನಾಥೆ

ಸರಸ್ವತೀ ನದಿಯು ಶುಷ್ಕಪಾತ್ರ ಇನ್ನೂ ಪಂಜಾಬಿನವರೆವರೆ ಭಾವಲ್‌ಪುರದಿಂದ ಸಿಂಧ್‌ವರೆಗೆ ವಿಸ್ತರಿಸಿದ್ದು ಕೊನೆಗೆ ಇದು ಕೂಡುವದು ಗುಜರಾತಿನ ಕಚ್ ತೀರವನ್ನು. ನದೀಪಾತ್ರದ ಈ ವೈಶಾಲ್ಯವನ್ನು ಗಮನಿಸಿದರೆ ಸರಸ್ವತಿ ಸಜೀವನದಿಯಾಗಿದ್ದಾಗ ಕೊನೆಯ ಪಕ್ಷ ಹದಿನೆಂಟು ಸಾವಿರ ಚದರ ಕಿಲೋಮೀಟರು ನೆಲಕ್ಕೆ ನೀರುಣಿಸುತ್ತಿತ್ತೆಂಬ ಭೂ-ವಿಜ್ಞಾನಿಗಳ ಲೆಕ್ಕಾಚಾರದಲ್ಲಿ ಅತಿಶಯೋಕ್ತಿ ಇಲ್ಲವೆನ್ನಿಸುತ್ತದೆ. ಇಂದು ಇಡೀ ಈ ಭಾಗ ರಾಜಸ್ಥಾನದ ಮರುಭೂಮಿಯ ಆಕ್ರಮಣಕ್ಕೆ ತುತ್ತಾಗಿ ಬೆಂಗಾಡಾಗಿದೆ. ಸರಸ್ವತೀ ನದಿಯದು ಇಂದು ಗತ ವೈಭವ ಮಾತ್ರ. ವಾಸ್ತವವಾಗಿ ಕ್ರಿ. ಪೂ. ನಾಲ್ಕನೇ ಶತಮಾನದಲ್ಲಿ ಅಲೆಕ್ಸಾಂಡರ್ ಭಾರತದ ಮೇಲೆ ದಂಡೆತ್ತಿ ಬಂದಾಗ ಬಿಕಾನೆರ್, ಭಾವಲ್‌ಪುರ, ಸಿಂಧ್ ಪ್ರಾಂತದ ಜನ ಸಂತುಷ್ಟಿ ಹೊಂದಿದ್ದರೆಂಬುದಕ್ಕೆ ಚಾರಿತ್ರಿಕ ದಾಖಲೆಗಳಿವೆ. ಆಗ ಕಚ್ ಕೊಲ್ಲಿ ಅತ್ಯಂತ ಆಳವಾಗಿದ್ದುದೇ ಅಲ್ಲದೆ ಇಲ್ಲಿಂದ ಸಿಂಧ ಪ್ರಾಂತ್ಯಕ್ಕೆ ಹಡಗುಗಳು ಯಾನ ಮಾಡುತ್ತಿದ್ದವೆಂಬುದಕ್ಕೆ ನಿದರ್ಶನಗಳಿವೆ. ಕ್ರಿ. ಶ. ೧೨೪೪ರಲ್ಲಿ ಪ್ರಪ್ರಥಮ ಬಾರಿಗೆ ಬಿಕಾನೇರಿನ ಇಂದಿನ ಹಕ್ರಾ ನದಿ ಬತ್ತಿ ಹೋಯಿತೆಂದು ರಾಜಸ್ಥಾನದ ಕಥೆಯಲ್ಲಿ ಉಲ್ಲೇಖವಿದೆ.

ವೇದಕಾಲದ ಶತದ್ರು ನದಿಯೋ ಇಂದಿನ ಸಟ್ಲೇಜ್. ಕ್ರಿ.ಶ. ೧೩೦೦ರ ವರೆಗೆ ವಾಸ್ತವವಾಗಿ ಈ ನದಿ ಪಂಜಾಬಿನಲ್ಲಿ ಹರಿಯುತ್ತಲೇ ಇರಲಿಲ್ಲ. ಇದನ್ನು ಗ್ರೀಕ್ ಹಾಗೂ ಅರಬ್ಬರ ಚಾರಿತ್ರಿಕ ದಾಖಲೆಗಳಿಂದ ರುಜುವಾತು ಮಾಡಬಹುದು. ಹದಿಮೂರನೆಯ ಶತಮಾನದ ಮಧ್ಯದಲ್ಲಿ ಶತದ್ರು ತನ್ನ ದಕ್ಷಿಣ ಪಾತ್ರವನ್ನು ತೊರೆಯಿತು. ಯಮುನಾ ನದಿ ಸರಸ್ವತಿಯನ್ನು ಕೈ ಬಿಟ್ಟ ಮೇಲೆ ಈ ನದಿ ಅವಲಂಬಿಸಿದ್ದು ಶತದ್ರು ಜಲಸಂಪನ್ಮೂಲವನ್ನು. ಅನಂತರ ಶತದ್ರು ಸಿಂಧೂ ನದಿ ಸಮೂಹದಲ್ಲಿ ವಿಲೀನವಾಗಿ ಬಿಯಾಸನ ಭಾಗವಾಗಿ ಒಂದುಗೂಡಿದ ಮೇಲೆ ಸರಸ್ವತೀ ನದಿ ಸಂಪೂರ್ಣವಾಗಿ ಅನಾಥ. ಇದರ ಜತೆಗೆ ಒತ್ತಿ ಬರುತ್ತಿದ್ದ ರಾಜಸ್ಥಾನದ ಮರುಭೂಮಿ, ಹೂಳು ತುಂಬಿಬಂದು ವ್ಯಾಪಿಸಿದ ಕಚ್ ಕೊಲ್ಲಿ ಸರಸ್ವತಿಯನ್ನು ಸಂಪೂರ್ಣವಾಗಿ ಬತ್ತುವಂತೆ ಮಾಡಿದವು. ಪ್ರಯಾಗದಲ್ಲಿ ಯಮುನೆ ಗಂಗೆಯರ ಸಂಗಮವಾಗುತ್ತದೆ. ಆದರೆ ಸರಸ್ವತಿ ಮತ್ತೆ ಈಶಾನ್ಯಕ್ಕೆ ಹರಿಯಲು ಮೂಲವಾಗಲೀ ಅಥವಾ ಪಾತ್ರವಾಗಲೀ ಯಾವ ಅಧ್ಯಯನದಿಂದಲೂ ಅರಿವಿಗೆ ಬಂದಿಲ್ಲ. ಸರಸ್ವತಿ ಹೀಗಾಗಿ ಇತಿಹಾಸದಲ್ಲಿ ಸೇರಿಹೋದ ನದಿಯಾಗಿದೆ.

"ಇಮಂ ಮೇ ಗಂಗೇ ಯಮುನೇ, ಸರಸ್ವತಿ," ಎಂದು ಯಜ್ಞಕ್ಕೆ ಆಹ್ವಾನಿಸುತ್ತಿದ್ದ ವೈದಿಕ ಸ್ತೋತ್ರದಲ್ಲಿ ಸಪ್ತನದಿಗಳಲ್ಲಿ ಒಂದು ಕೊಂಡಿ ಕಳಚಿದೆ. ಕಾಲಕ್ಕೆ ನಾವು ತಲೆಬಾಗಿದ್ದೇವೆ. ಕಾಲಕಾಲಕ್ಕೆ ಭೂ-ಇತಿಹಾಸದಲ್ಲಾಗುವ ಬದಲಾವಣೆಗಳಿಗೆ ನದಿಗಳೂ ತಲೆ ಬಾಗಬೇಕು. ಸರಸ್ವತೀ ನದಿ ಈ ಮಾತಿಗೆ ಹೊರತಲ್ಲ. ✡

(ಆಧಾರ)



**ಈ ಹೊಲಗಳನ್ನು ನೋಡಿರಿ. ಇಲ್ಲಿ ಬಿತ್ತಿರುವ ಬೀಜಗಳು ಕೆಲ ಕಾಲ ಭೂಮಿಯಲ್ಲಡಗಿರಬೇಕಾಗುತ್ತದೆ. ನಂತರ ಇವು ಅಂಕುರಿಸಿ ಸಮಯಾನುಸಾರ ಬಿತ್ತಲ್ಪಟ್ಟ ಬೀಜದ ಸಾವಿರಪಟ್ಟು ಬೀಜಗಳು ನಮಗೆ ದೊರಕುತ್ತವೆ. ಇದು ಪ್ರತಿಯೊಂದು ವಿಷಯಕ್ಕೂ ಅನ್ವಯಿಸುವ ಮಾತು. ನಿಜ ಶ್ರಮವಿದ್ದರೆ ಅದರ ಪರಿಣಾಮ ನೂರುಪಟ್ಟಿನ ಫಲ.**

**— ಅಬ್ದುಲ್ ಗಫಾರ್ ಖಾನ್**

# ಧೀರಜಲಾಲ ಅಂಬಾನಿ

**ನರಸಿಂಹ ಮೋಟನ್ನರ**

"ವಿಮಲ" ಎಂಬ ಹೆಸರು ಇಂದು ಭಾರತದ ಜವಳಿ ಉತ್ಪಾದನೆಯಲ್ಲಿ ಬಹುವಾಗಿ ಕೇಳಿ ಬರುತ್ತಿರುವ ಹೆಸರು. ಬಿನ್ನಿಗಳಲ್ಲಿ ರೇಮಾಂಡ್ ಮತ್ತು ಗ್ವಾಲಿಯರ್ ನಂತರ ಈಗ 'ವಿಮಲ'ದ್ದೇ ಸರತಿ. ಹತ್ತು ಹನ್ನೆರಡು ವರ್ಷಗಳ ಹಿಂದೆ ಕೇವಲ ರೂ. ೮೩ ಲಕ್ಷ ವಹಿವಾಟಿನ ಸಾದಾ ಸಂಸ್ಥೆಯಾಗಿದ್ದ ರಿಲಾಯನ್ಸ್ ಟೆಕ್ಸ್‌ಟೈಲ್ಸ್ ಕಾರ್ಪೊರೇಶನ್ ಈಗ ಜವಳಿ ಉದ್ದಿಮೆಯ ವಿಶ್ವದ ಖ್ಯಾತನಾಮ ತಾಂತ್ರಿಕ ಜ್ಞಾನಮಟ್ಟಕ್ಕೆ ಸರಿದೂಗುತ್ತಿದೆಯೆಂದು ಜಾಗತಿಕ ಬ್ಯಾಂಕಿನ ಅಧಿಕಾರಿಗಳು ಅಭಿಪ್ರಾಯ ಪಟ್ಟಿದ್ದಾರೆ. ಈ ರಿಲಾಯನ್ಸ್ ಟೆಕ್ಸ್‌ಟೈಲ್ಸ್ ಸಂಸ್ಥೆ ಅತ್ಯಾಧುನಿಕ ಸೂಕ್ಷ್ಮ ಉಪಕರಣಗಳಿಂದ ಮತ್ತು ತಾಂತ್ರಿಕ ಜ್ಞಾನದಿಂದ ಸುಸಜ್ಜಿತವಾದ ಅಹಮದಾಬಾದ ಫ್ಯಾಕ್ಟರಿಯಲ್ಲಿ ತೀವ್ರ ಸ್ಪರ್ಧಾತ್ಮಕವಾದ ಜವಳಿ ಉದ್ದಿಮೆಯಲ್ಲಿ ಕಳೆದ ಹದಿನಾಲ್ಕು ವರ್ಷದಲ್ಲಿ ಇತರರನ್ನು ಮೀರಿಸಿದೆ.



ಈ ರಿಲಾಯನ್ಸ್ ಅಥವಾ "ವಿಮಲ" ಸಾಮ್ರಾಜ್ಯದ ಕಥೆ ಇವಕ್ಕೆ ಕಾರಣೀಭೂತವಾದ ವ್ಯಕ್ತಿಯ ಕಥೆಗಿಂತ ಬೇರೆ ಏನೂ ಅಲ್ಲ. ಆ ವ್ಯಕ್ತಿಯೇ ಧೀರೂಭಾಯಿ ಅಂಬಾನಿ. ರಿಲಾಯನ್ಸ್ ಟೆಕ್ಸ್‌ಟೈಲ್ಸಿನ ಚೇರಮನ್ ಮತ್ತು ಮ್ಯಾನೇಜಿಂಗ್ ಡೈರೆಕ್ಟರ್ ಆದ ರಚನಾಶಿಲ್ಪಿಯೇ ಭಾರತದ ಜವಳಿ ಉದ್ದಿಮೆಯ ನೇತಾರರಾಗುತ್ತಿದ್ದಾರೆ. ದಶಕದ ಮಹಾನ್ ಉದ್ಯೋಗಪತಿಯಾಗಿ ಖಾಸಗಿ ಕ್ಷೇತ್ರದಲ್ಲಿ ಅತಿ ದೊಡ್ಡ ಸಂಸ್ಥೆಯಾಗಿ ಮಾರ್ಪಾಡು ಮಾಡಲು ತನ್ನ ಸಂಸ್ಥೆಯನ್ನು ಬೆಳೆಸುತ್ತಿರುವ ಅಂಬಾನಿಗೆ ಈಗ ನಾಲ್ವತ್ತೊಂಬತ್ತು ವಯಸ್ಸು. ಆದರೂ ಹತ್ತು ವರ್ಷಗಳು ಇನ್ನೂ ಚಿಕ್ಕವರಾಗಿಯೇ ಕಾಣುತ್ತಾರೆ. ಇತರ ಅನೇಕ ಉದ್ದಿಮೆದಾರರಂತೆ ಬಾಯಲ್ಲಿ ಬೆಳ್ಳಿ ಚಮಚೆಯನ್ನೇ ಇಟ್ಟುಕೊಂಡು ಜನ್ಮ ತಳೆದವರೇನಲ್ಲ. ಸೌರಾಷ್ಟ್ರದ ಜುನಾಗಡದಲ್ಲಿ ಒಬ್ಬ ಸಾಮಾನ್ಯ ಬಡ ಶಾಲಾ ಶಿಕ್ಷಕ ತಂದೆ, ದೈವೀಭಕ್ತೆಯ ಕರುಣಾಳು ತಾಯಿಗೆ ಮಗನಾಗಿ ಜನಿಸಿದ ಧೀರಜಲಾಲ ತನ್ನ ೧೬ನೇ ವಯಸ್ಸಿನಲ್ಲಿ ಶಾಲಾ ಶಿಕ್ಷಣ ಮುಗಿಸಿ ಏಡನ್ನಿನಲ್ಲಿ ವ್ಯಾಪಾರಕ್ಕೆಂದು ತೆರಳಿದರು. ಎಂಟು ವರ್ಷ ಏಡನ್ನಿನಲ್ಲಿ ವಾಸಿಸಿ ಸ್ಪರ್ಧಾತ್ಮಕ ವ್ಯಾಪಾರಿ ರಂಗದ ಅನುಭವವನ್ನು ಚೆನ್ನಾಗಿ ಪಡೆದರು. ಫ್ರೆಂಚ್ ಒಡೆತನದ ಕಂಪನಿಯೊಂದರಲ್ಲಿ ಸಾದಾ ಕಾರಕೂನನಾಗಿ ಅವರ ಜೀವನ ಪ್ರಾರಂಭವಾಯಿತು. ಅವರಿಗೆ ಜಾಗತಿಕ ವ್ಯಾಪಾರಿ ರಂಗದ ಅನುಭವ ಕೂಡಾ ಕರಗತವಾಯಿತು. ತನ್ನ ೨೬ರ ಹರೆಯದಲ್ಲಿ ಭಾರತಕ್ಕೆ ಮರಳಿದ

ಧೀರೂಭಾಯಿ ಯುವ ಉದ್ಯಮಿಯಾಗಿ ತನ್ನ ಸ್ವಂತ ಉದ್ಯಮ ಸ್ಥಾಪಿಸಲು ಮುಂದಾದರು. ಬಂದವರೇ ರಿಲಾಯನ್ಸ್ ಕಮರ್ಶಿಯಲ್ ಕಾರ್ಪೋರೇಶನ್ ಎಂಬ ಹೆಸರಿನ ಕಂಪನಿ ತೆರೆದು ನೂಲಿನ ವ್ಯಾಪಾರ ಪ್ರಾರಂಭಿಸಿದರು. ೧೯೫೦ ರಿಂದ ೧೯೬೦ರ ವರೆಗೆ ನೈಲಾನು ಎಳೆಗಳಿಗೆ ತುಂಬಾ ಬೇಡಿಕೆ ದೇಶದಲ್ಲಿತ್ತು. ಅದರೆಡೆಗೆ ಇವರ ಗಮನ ಹರಿದು ವಿಸ್ತಾರವಾದ ಆಂತರಿಕ ಮಾರುಕಟ್ಟೆ ದೊರೆಕಿತು. ಆಗ ನೈಲಾನು ತಂತು ಮತ್ತು ಪಾಲಿಸ್ಟರ್ ನೂಲನ್ನು ಆಯಾತ ಮಾಡಿಕೊಂಡರೆ ರೇಯಾನ್ ಮತ್ತು ರೇಶ್ಮೆ ಬಟ್ಟೆಗಳನ್ನು ನಿರ್ಯಾತಮಾಡುವ ನಿಯಮವಿತ್ತು. ಅಂತೆಯೇ ಅದರಲ್ಲೂ ಸಾಕಷ್ಟು ಲಾಭ ಧೀರೂಭಾಯಿಯ ಸಂಸ್ಥೆಗೆ ಗಿಟ್ಟಿತು. ಬೇಗನೇ ಅವರ ಸಂಸ್ಥೆ ನಿರ್ಯಾತದಲ್ಲಿ ಶರವೇಗವನ್ನು ಸಾಧಿಸಿತು. ಆಗಲೇ ಆ ಸಂಸ್ಥೆ ಔದ್ಯೋಗಿಕ ಕ್ರಾಂತಿಯೆಡೆಗೆ ಮುನ್ನಡೆದಿತ್ತು. ಅಲ್ಲದೆ ಅದು ಪ್ರಥಮ ಹೆಜ್ಜೆಯೂ ಆಗಿತ್ತು. ಆ ಅನುಭವವೇ ಅವರನ್ನು ಬಟ್ಟೆ ತಯಾರಿಸುವ ಉದ್ಯಮಕ್ಕೆ ಎಳೆದದ್ದು. ಅಲ್ಲದೇ ಆಗ ಉತ್ತಮ ಗುಣ ಮಟ್ಟದ ನಿರ್ಯಾತವಾಗಬಲ್ಲ ಬಟ್ಟೆಯ ತಯಾರಿಕೆಯ ಕೊರತೆ ಉದ್ಯಮದಲ್ಲಿ ಕಂಡು ಬರುತ್ತಿತ್ತು. ಭಾರತದ ಹಳೆಯ ಮತ್ತು ವಿಪರೀತ ಸ್ಪರ್ಧಾತ್ಮಕ ರಂಗವಾದ ಬಟ್ಟೆ ಉದ್ಯಮಕ್ಕೆ ರಿಲಾಯನ್ಸ್ ಟೆಕ್ಸ್ಟೈಲ್ಸ್ ಪ್ರವೇಶ ಫೆಬ್ರುವರಿ ೧೯೬೬ ರಲ್ಲಿ. ಅಹಮದಾಬಾದಿನ ಹತ್ತಿರದ ನರೋಡಾದಲ್ಲಿ ಒಂದು ತಯಾರಿಕಾ ಘಟಕ ಸ್ಥಾಪಿಸಿದರು. ಸ್ವತಃ ಯಾವ ತಾಂತ್ರಿಕ ತಜ್ಞನಲ್ಲದಿದ್ದರೂ ಅತ್ಯಾಧುನಿಕ ತಾಂತ್ರಿಕತೆಯೆಡೆಗೆ ಹೆಜ್ಜೆಹಾಕಿದರು. ಆಧುನಿಕ ಉಪಕರಣ ಯಂತ್ರಗಳ ಸ್ಥಾಪನೆ ಮಾಡಿದರು.

ಅಂಬಾನಿಯವರ ದೂರದರ್ಶಿತ್ವ ಎಷ್ಟೆಂದರೆ ಅವರ ಕರಗಳ ಯೋಜನೆಯಿಂದಾಗಿ ಅವರು ಎಂದೂ ಕರ ಬಾಕಿದಾರರಾಗುವದೇ ಇಲ್ಲ. ತನ್ನ ಸಂಸ್ಥೆಯ ಬೆಳವಣಿಗೆಗೆ ಮೂರು ಕಾರಣಗಳು ಎನ್ನುತ್ತಾರೆ: ಸರಿಯಾದ ತಯಾರಿಕಾ ಸಾಧನೆ ಉತ್ತಮ ಗುಣ ಮಟ್ಟ ಮತ್ತು ಪರಿಣಾಮಕಾರಿಯಾದ ವಿತರಣೆ ಮತ್ತು ಮಾರಾಟ! ೧೯೭೦ ರಲ್ಲಿ ಸರಕಾರ ರೂಪಿಸಿದ ಯೋಜನೆಯಂತೆ, ಪಾಲಿಸ್ಟರ್ ಆಮದು ಮಾಡಿಕೊಂಡು ಆರ್ಟ್ ಸಿಲ್ಕ್ ನಿರ್ಯಾತದಲ್ಲಿ ೬೦% ರಫ್ತು ಸಿಂಹ ಪಾಲು "ವಿಮಲ" ಸಂಸ್ಥೆಯದೇ. ಅಲ್ಲೂ ಲಾಭಾಂಶ ತುಂಬ ಬಂತು. ಆಗಲೇ ರಿಲಾಯನ್ಸ್ ಔದ್ಯೋಗಿಕ ಕ್ರಾಂತಿಯೊಡನೆ ದಾಪುಗಾಲು ಹಾಕುವ ಸನ್ನಿವೇಶ. ಈ ಅನುಭವವೇ ಅವರನ್ನು ಎಳೆಗಳ ಮಾರಾಟದಿಂದ ಬಟ್ಟೆ ತಯಾರಿಸುವ ಉದ್ದಿಮೆಗೆ ಎಳೆದದ್ದು. ಉತ್ತಮ ಮಟ್ಟದ ನಿರ್ಯಾತವಾಗಬಲ್ಲ ಬಟ್ಟೆಯ ಕೊರತೆಯೂ ಜವಳಿ ಉದ್ಯಮದಲ್ಲಿ ಕಂಡುಬರುತ್ತಿತ್ತು. ಆದ್ದರಿಂದಲೇ ಶ್ರೇಷ್ಠ ಗುಣಮಟ್ಟವನ್ನೇ ಧ್ಯೇಯವನ್ನಾಗಿಟ್ಟುಕೊಂಡು ಈ ರಂಗ ಪ್ರವೇಶಿಸಿದೆ ಎನ್ನುತ್ತಾರೆ. ಮೂರೋ ನಾಲ್ಕೋ ಯಂತ್ರಗಳು, ಒಟ್ಟು ಹದಿನೈದು ಲಕ್ಷ ಬಂಡವಾಳ ಸ್ವಯಂ ತರಬೇತಾದ ಅನುಭವಿಕ ಕೆಲಸಗಾರ ತಂಡದಿಂದ ಪ್ರಾರಂಭವಾಗಿ ಇದೀಗ ಹದಿನೈದು ವರ್ಷಗಳಲ್ಲಿ ಅಗಾಧವಾಗಿ ೬೪೦೦೦ ಕ್ಕೂ ಹೆಚ್ಚಿನ ಬಟ್ಟೆ ತಯಾರಿಕಾ ಯಂತ್ರಗಳು ೨೦೦ ಕೋಟಿಗಿಂತ ಅಧಿಕವಾದ ಹಣದ ವಹಿವಾಟು, ೭೫೦೦ ಕ್ಕೂ ಹೆಚ್ಚಿನ ಕೆಲಸಗಾರರನ್ನೂ ಹೊಂದಿ ಕಳೆದ ಹದಿನಾಲ್ಕು ವರ್ಷಗಳಲ್ಲಿ ಅದ್ಭುತ ಯಶಸ್ಸು ಸಾಧಿಸಿದೆ. ಈಗ "ವಿಮಲ" ಕಂಪನಿ ೭೭,೨೦,೦೦೦ಕಿಲೋಗ್ರಾಂನಷ್ಟು ನೂಲು ಮತ್ತು ಸುಮಾರು ೬॥ ಕೋಟಿ ಮೀಟರಿನಷ್ಟು ಬಟ್ಟೆಗಳನ್ನು ಉತ್ಪಾದಿಸುತ್ತಿದೆ. ಪ್ರತಿ ತಿಂಗಳಿಗೆ ೨೦೦ ಕ್ಕೂ ಹೆಚ್ಚಿನ ಕಲಾವಿದರು ಹೊಸ ಹೊಸ ವಿನ್ಯಾಸಗಳನ್ನು ರೂಪಿಸುತ್ತಾರೆ. ೧೦೦೦ ಕ್ಕೂ ಹೆಚ್ಚಿನ, ದೇಶದಾದ್ಯಂತಲೂ ಹರಡಿರುವ, ಚಿಲ್ಲರೆ ಮಾರಾಟಗಾರರ ಮೂಲಕ – ಅದು ಸೀರೆಯೇ ಇರಲಿ ಸೂಟು ಇರಲಿ ಅಥವಾ ಇನ್ನಿತರ ಸಿದ್ಧ ಉಡುಪೇ ಇರಲಿ – ಮಾರುಕಟ್ಟೆಯಲ್ಲಿ ಇರುವ ೬೫% ರಷ್ಟು ಬೇಡಿಕೆಯನ್ನು ಅಂಬಾನಿಯವರ ಸಂಸ್ಥೆಯೇ ಪೂರೈಸುತ್ತದೆ.

ಅಂಬಾನಿಯವರ ಈ ದಿಗ್ವಿಜಯಕ್ಕೆ ಕಾರಣಗಳೆಂದರೆ ದೂರದೃಷ್ಟಿ ಆಧುನಿಕ

ಿತೆ, ಮತ್ತು ಅತ್ಯಂತ ಉತ್ತಮ ಆರ್ಥಿಕ ನಿರ್ವಹಣೆ. ವಿಶ್ವದ ಯಾವ ಮೂಲೆಯಲ್ಲಿಯೇ ಜವಳಿ ಉತ್ಪಾದನ ಅತ್ಯಾಧುನಿಕ ತಂತ್ರಜ್ಞಾನವಿದ್ದರೂ ಅವರು ಅದನ್ನು ಸ್ವೀಕರಿಸಿ ಭಾರತಕ್ಕೆ ಮೊತ್ತ ಮೊದಲು ತರುತ್ತಾರೆ. ತಮ್ಮ ಗಿರಾಕಿಗೆ ಅವರ ಹಣಕ್ಕೆ ತಕ್ಕುದಾದ ಬಟ್ಟೆ ನೀಡಬಲ್ಲ ಸಂಸ್ಥೆ ತಮ್ಮದು ಎನ್ನುತ್ತಾರೆ.

ಈ ಅದ್ಭುತ ಸಾಧನೆಯಲ್ಲಿ ಅವರಿಗೆ ನೆರವಾಗುತ್ತಿರುವವರೆಂದರೆ ಅವರ ಬಂಧುಗಳಾದ ರಮಣೀಕಭಾಯಿ ಮತ್ತು ನಾತೂಭಾಯಿ. ಅಲ್ಲದೇ ಅವರ ಹಿರಿಮಗ ಮುಖೇಶ ಪ್ರಥಮ ದರ್ಜೆಯಲ್ಲಿ ಪ್ರಥಮನಾಗಿ ರಸಾಯನಿಕ ತಾಂತ್ರಿಕ ವಿಭಾಗದಲ್ಲಿ ಉತ್ತೀರ್ಣನಾಗಿ ಅಮೇರಿಕದಲ್ಲಿ ಎಂ. ಬಿ. ಎ. ಮುಗಿಸಿ ಇದೀಗ ತಂದೆಗೆ ಸಹಾಯ ನೀಡಲು ಭಾರತಕ್ಕೆ ಮರಳಿದ್ದಾನೆ. ಇನ್ನೊಬ್ಬ ಮಗನೂ ಎಂ. ಬಿ. ಎ. ಓದುತ್ತಿದ್ದಾನೆ. ಹೆಣ್ಣು ಮಕ್ಕಳಿಬ್ಬರೂ ಓದುತ್ತಿದ್ದಾರೆ. ಇಂಥ ಸಾಮ್ರಾಜ್ಯದ ಅಧಿಪತಿಯಾದರೂ ಅಂಬಾನಿ ಸರಳ ಮನುಷ್ಯ. ತಾನು ಕಾಲೇಜು ಓದಲಿಲ್ಲವೆಂದು ಹೇಳಿಕೊಳ್ಳಲು ಯಾವ ಸಂಕೋಚವೂ ಅವರಿಗಿಲ್ಲ. ಸಫಾರಿ ಉಡುಪು ತೊಟ್ಟು ಸದಾ ನಗುನಗುತ್ತ ಮಾತನಾಡುವ ಮನುಷ್ಯ. ಊಟದ ನಂತರ ಪಾನ್ ತಿನ್ನುವ ಅಂಬಾನಿ, ಸಂಜೆಯಾದೊಡನೆ ಕುಟುಂಬದೊಡನೆ ಮನೆಯಲ್ಲಿ ಇರಲು ಮೆಚ್ಚುತ್ತಾರೆ. ಹಾಗೆಂದು ಅವರು ಸಾಮಾಜಿಕವಾಗಿ ಬೆರೆಯುವವರಲ್ಲ ಎಂದು ಭಾವಿಸಲಾಗದು. ತಾನು ದೊಡ್ಡ ಸಂಸ್ಥೆಯ ಮ್ಯಾನೇಜಿಂಗ್ ಡೈರೆಕ್ಟರ್–ಚೇರಮನ್ ಎಂಬ ಅಹ್ಮತೆಯಿಂದ



ಕುಲೀನನಾಗದೇ ಸಮಾಜದ ಎಲ್ಲ ಸ್ತರಗಳ ವ್ಯಕ್ತಿಗಳೊಂದಿಗೂ ಸ್ನೇಹ ಬೆಳೆಸುತ್ತ ಜನಾನುರಾಗಿಯಾಗಿದ್ದಾರೆ. ಮುಂಚೂಣಿಯ ಮಾರಾಟ ತಂತ್ರ ಮತ್ತು ಶ್ರಮವಂತ ಉತ್ತುಂಗ ಪ್ರಚಾರ ಸತ್ರದಿಂದ ಭಾರತೀಯ ಉದ್ಯಮಶೀಲತೆಯ ಪ್ರತೀಕವಾಗಿದ್ದಾರೆ. ಸತತ ಕಾರ್ಯನಿರತರಾಗಿ ಹತ್ತು ತಾಸುಗಳ ಅವಿರತ ದುಡಿಮೆಯುಳ್ಳವರಾದ ಈತ ದೇಶ ವಿದೇಶಗಳನ್ನೂ ಕಾರ್ಯಾರ್ಥ ಸುತ್ತುವನುಂಟು. ಅಲ್ಲದೆ ಆರೋಗ್ಯದ ಕಡೆ ತುಂಬ ಗಮನವೀಯುವ ಅಂಬಾನಿ ಪಾನ ಕ್ಯಾಂಡಿ ಆರೋಗ್ಯ ಕೇಂದ್ರಕ್ಕೆ ಭೇಟಿಯಿತ್ತು ವ್ಯಾಯಾಮದೆಡೆಗೆ ಗಮನವಿಯುತ್ತಾರೆ. ಈ ವಯಸ್ಸಿನಲ್ಲಿ ಅವರ ಚಟುವಟಿಕೆ ಉದ್ಯಮಶೀಲತೆ ಎಳೆಯರನ್ನೂ ನಾಚಿಸುತ್ತದೆ. ಇತ್ತ ಪತಿ ಮುಂಬಯಿಯಲ್ಲಿಯ ನಾರಿಮನ್ ಪಾಯಿಂಟಿನ ತುಲಸಾನಿಯ ಕಟ್ಟಡದ ಹತ್ತನೇ ಅಂತಸ್ತಿನಿಂದ ದೇಶದ ಜವಳಿ ಉದ್ಯಮವನ್ನು ನಿಯಂತ್ರಿಸಿದರೆ ಅತ್ತ ಬಹ್ವಂತಸ್ತಿನ ಕಟ್ಟಡ 'ಉಷಾಕಿರಣ'ದ ಹದಿನಾಲ್ಕನೇ ಅಂತಸ್ತಿನಿಂದ ಅವರ ಪತ್ನಿ ಕೋಕಿಲಾಬೇನ್ ಅಷ್ಟೇ ದಕ್ಷತೆಯಿಂದ ಅವರ ಇಡೀ ಕುಟುಂಬವನ್ನು ನಡೆಸುತ್ತಾರೆ. ತನ್ನ ಕೆಲಸದ ತೀವ್ರತೆಗಾಗಿ ಫ್ಯಾಕ್ಟರಿಯಿಂದ ಮುಂಬಯಿಯ ತನ್ನ ಕಾರ್ಯಾಲಯಕ್ಕೆ ಟೆಲೆಕ್ಸ್ ಸಂಪರ್ಕವನ್ನು ಇಟ್ಟುಕೊಂಡಿದ್ದಾರೆ. ಈಗ ರಿಲಾಯನ್ಸ್ ಕಂಪನಿ ವಿಸ್ತರಿಸುತ್ತಲೇ ನಡೆದಿದೆ.

ಅಮೇರಿಕನ್ ಸಹಭಾಗಿತ್ವದೊಡನೆ ಐವತ್ತು ಕೋಟಿಯ ರೂಪಾಯಿ ವೆಚ್ಚದಲ್ಲಿ ಪಾಲಿಸ್ಟರ್ ನೂಲು ತಯಾರಿಸುವ ಕಾರಖಾನೆ ಸ್ಥಾಪಿತವಾಗಲಿದೆ. ಇದೇ ವರ್ಷ ಮುಂಬಯಿಯ ಔದ್ಯಮಿಕ ಔಪಚಾಳಿದ ಪ್ರದೇಶವೊಂದರಲ್ಲಿ ಸ್ಥಾಪಿಸಲ್ಪಡುವ ಈ ಕಾರಖಾನೆ ೧೦,೦೦೦ಟನ್ ಪಾಲಿಸ್ಟರ್‌ನೂಲಿನ ವಾರ್ಷಿಕ ಉತ್ಪಾದನೆಯ ಗುರಿ ಹೊತ್ತಿದೆ. ಅಲ್ಲದೆ ಪಾಲಿಸ್ಟರ್ ತಯಾರಿಕೆಗೆ ಬೇಕಾದ ಅತ್ಯಗತ್ಯ ಕಚ್ಚಾವಸ್ತು ಶುದ್ಧೀಕೃತ ಟೆರಿಪ್ಥಾಲಿಕ್ ಆಮ್ಲವನ್ನು ತಯಾರಿಸುವ ಘಟಕವೂ ನಿರ್ಮಾಣವಾಗಲಿದೆ. ಈಗ ಅದನ್ನು ಆಮದು ಮಾಡಿಕೊಳ್ಳಲಾಗುತ್ತಿದೆ. ಇದು ಭಾರತದಲ್ಲೇ ಈ ಉದ್ಯಮದಲ್ಲಿ ಮೊತ್ತಮೊದಲನೆಯದಾದ ಉತ್ತಮ ನಿರ್ಮಾಣವೆನಿಸುತ್ತದೆ. ಅವರ ಕಾರಖಾನೆಯಲ್ಲಿ ಭಾರತದಲ್ಲೇ ಏಕಮೇವಾದ್ವಿತೀಯವಾದ ಬಟ್ಟೆಗಳಿಗೆ ಕಲರ್ ಮ್ಯಾಚಿಂಗ್ ಕಂಪ್ಯೂಟರ್ ಇದೆ. ಕೃತ್ರಿಕ ನೂಲನ್ನು ಕಂಪನಿಯು ಆಮದು ಮಾಡಿ ದಿನ ಕಾರ್ಖಾನೆಗೆ ಉತ್ತಮ ಗುಣ ಮಟ್ಟದ ಬಟ್ಟೆ ತಯಾರಿಕೆಗಾಗಿ ಪೂರೈಸಲಾಗುವದು. ವರ್ಷಕ್ಕೆ ೨೦–೨೫ ಕೋಟಿ ರೂಪಾಯಿ ಲಾಭದಾಯಕವಾಗಬಲ್ಲ ಉದ್ದಿಮೆ ಇದು. ಅಲ್ಲದೇ ಅದರಿಂದ ವಿದೇಶ ವಿನಿಮಯದ ಉಳಿತಾಯವೂ ಆಗಬಲ್ಲದು. ಆದರೂ ಅಮೇರಿಕ ಮತ್ತು ಜಪಾನುಗಳ ಜವಳಿ ಉದ್ಯಮದ ಎದುರು ಭಾರತದ ಜವಳಿ ಉದ್ದಿಮೆ ವಾಮನಾಕಾರದ್ದು' ಎಂದು ಸವಿನಯವಾಗಿ ಹೇಳುತ್ತಾರೆ. ಅವರ ಲಾಭಾಂಶ ಈಗ ೩೦೦%ರಿಂದ ೪೦೦%ಕ್ಕೆ ನಾಗಾಲೋಟದಲ್ಲಿ ಮುಂದುವರಿಯುತ್ತಿರುವದನ್ನು ನೋಡಿದರೆ ಈ ದಶಕದ ಕೊನೆಯಲ್ಲಿ ಪ್ರಾಯಶಃ ಈ ಸಂಸ್ಥೆಯು ಲಾಭಾಂಶ ಟಾಟಾ ಮತ್ತು ಬಿರ್ಲಾ ಸಂಸ್ಥೆಗಳಿಗೆ ಸರಿಸಾಟಿಯಾಗಬಲ್ಲದು ಎಂದು ಅರ್ಥ ಶಾಸ್ತ್ರಜ್ಞರು ಊಹಿಸುತ್ತಾರೆ. ಅಲ್ಲದೇ ಅಂಬಾನಿಗೆ ಪೆಟ್ರೋಕೆಮಿಕಲ್ಸ್ ಉದ್ದಿಮೆಯನ್ನು ಪ್ರವೇಶಿಸುವ ಯೋಜನೆ ಇದ್ದು ಅದನ್ನು ಶೀಘ್ರವೇ ಕಾರ್ಯಗತ ಮಾಡಲು ಸಿದ್ಧರಾಗುತ್ತಿದ್ದಾರೆ. ಅವರ ಸಂಸ್ಥೆಯ ಶೇರುಗಳಿಗೆ ವಿಪರೀತ ಬೇಡಿಕೆ ಇದೆ.

ಈ ಮೂಲಭೂತವಾದ ತಾದಾತ್ಮ್ಯ, ಭಾರತೀಯ ಜವಳಿ ಉದ್ಯಮದ ಅಗಾಧ ಜ್ಞಾನ ಓತಪ್ರೋತವಾಗಿ ಹರಿಯುತ್ತಿರುವ ಉತ್ಸುಕತೆ ಅವಿಶ್ರಾಂತವಾದ ಚಟುವಟಿಕೆ ಇವುಗಳ ಸಂಯುಕ್ತ ಪ್ರಭಾವವೇ ಮೂರ್ತಿವೆತ್ತಂತೆ ಧೀರೂಭಾಯಿ ಅಂಬಾನಿ ಭಾರತೀಯ ಜವಳಿ ಉದ್ಯಮದ ಉದಯೋನ್ಮುಖ ತಾರೆ ಎನ್ನಬೇಕು. ✡

ಆಂಕುಳಿಯೋ, ದಿಟ್ಲಕುಳಿಯೋ, ಉಸ್ವಾಣ
ಕುಳಿಯೊ
ಉರಿ ಕುಳಿಯೊ, ಪೋದ ಕುಳಿಯೊ
ಮರಿ ಕುಳಿಯೊ, ಕುಡಿ, ಕಿಣಾರು.
ರುಂಜಿ, ಮದಿಲ, ಕಾಪುಕಯು...

“ಹಾಲು ಬರುವ ಮರದಡಿಯಲ್ಲಿ ಹುಟ್ಟಿದ, ಕಲ್ಲುಕಟ್ಟಡದಲ್ಲಿ ಹುಟ್ಟಿದ ಅಥವಾ ಮಣ್ಣಿನ ಗುಡಿಯಲ್ಲಿ ಹುಟ್ಟಿದ ಗಂಡು (ದೇವರು) ಕುಳಿಯನೇ ಇರಲಿ, ಹೆಣ್ಣು ಕುಳಿಯಾಳೆ ಆಗಿರಲಿ, ದಿಟ್ಟಿಸಿ ನೋಡುವ, ಮಂಗಮಾಯ ಮಾಡುವ, ಉರಿ ಯೆಬ್ಬಿಸುವ ಅಥವಾ ಮಕ್ಕಳನ್ನು ಭಕ್ಷಿಸುವ ಯಾವುದೇ ಕುಳಿಯನಾಗಲಿ ಅಥವಾ ದೇವರಾಗಲಿ ಈ ಅಲ್ಪ ಕಾಣಿಕೆಯಿಂದ ತೃಪ್ತಿಪಡತಕ್ಕದ್ದು” ಎಂದು ಅರ್ಪಣೆಮಾಡಿ. ಕೋಳಿಯ ಮುಂಡವನ್ನು ಎತ್ತಿ ಹತ್ತು ಮಾರು ಎಳೆದಾಗ, ಪಾಟಾಳಿಯ ಜಂಘಾಬಲವೇ ಉಡುಗಿಹೋಯಿತು. ತಲೆಯಿಲ್ಲದ ಕೋಳಿ, ನೆಲಕ್ಕೆ ಬಿದ್ದು ಆಳೆತ್ತರ ಹಾರುವುದೆಂದರೆ, ಆಕೆಗೆ ಹಿಡಿದಿರುವ ಭೂತದ ಬಿಸ್ತಾರ ಶಕ್ತಿಸಾಮರ್ಥ್ಯದ ಅರಿವಾಗದೆ? ಅದನ್ನು ತೃಪ್ತಿ ಪಡಿಸಲು ಮತ್ತೊಂದು ಬಲಿ ಬೇಕೇ ಬೇಕು. ಮತ್ತೊಂದು ಕೋಳಿಯನ್ನು ಕತ್ತರಿಸುವಲ್ಲಿ, ಬೊಳ್ಳಿಯು ಜಗ್ಗನೆದ್ದು ಕುಣಿಯುತ್ತಿದ್ದಳು. ಬೊಳ್ಳಿಯ ಮೈಯಲ್ಲಿ ಹಿಡಿದಿದ್ದ ಭೂತದ ಆವೇಶ ಏರಿತ್ತು. ಜೀನಿ, ದುಡಿ ವಾದ್ಯಕ್ಕೆ ಸರಿಯಾಗಿ ಕುಣಿಯುತ್ತಾ, ಅಲ್ಲೇ ಬಿದ್ದಿದ್ದ ಕತ್ತಿಯನ್ನು ತೆಗೆದುಕೊಂಡು ರಭಳಿಸುತ್ತಾ, “ನನಗೆ ರಕ್ತ ಬೇಕು, ಬಲಿ ಬೇಕು,” ಎಂದು ಅಂಗಲಾಚಿತು. ಬಲಿಗೆ ತಯಾರು ಮಾಡಿದ್ದ ಮತ್ತೊಂದು ಕೋಳಿಯನ್ನು ಆಕೆಗೆ ಒಪ್ಪಿಸಿದಾಗ, ಕೋಳಿಯ ಕುತ್ತಿಗೆಯನ್ನು ಬಾಯಿಂದ ಕಡಿದು ಅದರ ರಕ್ತ ಹೀರಿ, ಕುಡಿದು, “ಇನ್ನ್ನ ಬೋಡೆ” (ಇನ್ನೂ ಬೇಕು) ಎಂದರಚಿತು.

ಪಾಟಾಳಿಗೆ ಇನ್ನೇನು ಮಾಡಬೇಕೆಂದು ತಿಳಿಯಲಿಲ್ಲ. ಕುದಿ ನೀರನ್ನು ಮಂತ್ರಿಸಿ ಆಕೆಯ ಮುಖಕ್ಕೆ ಪ್ರೋಕ್ಷಿಸಿದ. ದೆವ್ವ ಆತನೊಡನೆ ಜಿದ್ದು ಕಟ್ಟಿದಂತೆ, ಕೇಕೆ ಹಾಕಿ ಕುಣಿಯಿತು.

ಎಂದು ತನ್ನ ಕೈಯಲ್ಲಿದ್ದ ಕತ್ತಿಯನ್ನು ಪಾಟಾಳಿಯತ್ತ ಬೀಸಿತು. ಪಾಟಾಳಿಗೆ ಅಲ್ಲಿ ನಿಲ್ಲಲು ಸಾಧ್ಯವಾಗಲಿಲ್ಲ. ಅಂಗಳದಿಂದ ಹೆದರಿ ಹಲಸಿನ ಮರದತ್ತ ಜಾರಿಕೊಂಡ. ದೆವ್ವ ಮಂತ್ರಮಾಡಿ ಅಲಂಕರಿಸಿ, ಮಡಗಿದ್ದ ಕುಡಿಕೆ, ಮಡಿಕೆಗಳನ್ನೆಲ್ಲಾ ಪುಡಿ ಮಾಡಿ ಹೂಂಕರಿಸಿತು. ಜೀನಿ, ದುಡಿಯವರು ನಿಬ್ಬೆರಗಾಗಿ ವಾದ್ಯ ನಿಲ್ಲಿಸಿದರು. ಆಕೆಯನ್ನು ತಡೆಯುವ ಧೈರ್ಯ ಯಾರಲ್ಲೂ ಇದ್ದಂತಿರಲಿಲ್ಲ.

ಇದನ್ನೆಲ್ಲಾ ನೋಡುತ್ತಿದ್ದ ಮಾರನಿಗೆ ಆಕಾಶವೇ ಕಳಚಿ ಬಿದ್ದಂತಾಯಿತು. ತನ್ನ ಜೀವನದ ರುದ್ರನಾಟಕವೇ ತನ್ನ ಮನೆಯ ಅಂಗಳದಲ್ಲಿ ಕೇಕೆ ಹಾಕಿ ಕುಣಿಯುತ್ತಿರುವಂತೆ ಭಾಸವಾಯಿತು. ಹುಚ್ಚು ಹಿಡಿದಂತೆ ಜಿಗಿದು ಕುಣಿಯುವ ಆ ತುಂಬು ಗರ್ಭಿಣಿಯನ್ನು ತಡೆಯಲು ಯಾರೂ ಮುಂದಾಗದ್ದನ್ನು ಕಂಡು, ಮಾರ ಅಂಗಳಕ್ಕಿಳಿದು ಬೊಳ್ಳಿಯ ಹಿಂಬದಿಯಿಂದ ಕೈಯಲ್ಲಿದ್ದ ಕತ್ತಿಯನ್ನು ಕಸಿದುಕೊಂಡನು. ಹೀಗೆ ಕುಪ್ಪಳಿಸಿ, ಬಲಿ ಕೇಳುವ ಆಕೆಯನ್ನು ಹಿಡಿಯಲು ಬೇರೆ ಉಪಾಯ ಕಾಣದ ಮಾರ, ಆಕೆಯನ್ನು ಗಟ್ಟಿಯಾಗಿ ತಬ್ಬಿ ಹಿಡಿದು



ಮಾರ. ಆದರೆ. ಕಾಣದ ಕೈಯ ಕೈವಾಡವೊಂದು ಆತನ ಜೀವನದ ದಿಕ್ಕನ್ನೇ ಬದಲಿಸಿತ್ತು. ತಾನು, ಈ ಜಂಜಾಟದಲ್ಲಿ ದಡ ಸೇರಿಯೇನೋ ಎಂದು ಮಾರ ಚಿಂತಿಸುತ್ತಿದ್ದ.

ಬೊಳ್ಳಿ. ಆಸ್ಪತ್ರೆಯಲ್ಲಿ ಜೀವನ್ಮೃತಳಾದೊಡನೆ ಹೊಡೆದಾಡಿ. ನಿರ್ಜೀವಳಾಗಿಯೇ ಪಿರಗೆ ಬಂದಳು. ಬಡಕಲು ದೇಹ ಹೊತ್ತ ಆ ತನ್ನ ಸೌಂದರ್ಯ ತಾರುಣ್ಯವನ್ನೆಲ್ಲಾ ಆ ಮಗುವಿನೊಡನೆ ಕಳೆದು ಕೊಂಡಿದ್ದಳು. ಆಕೆಯು ಪಿರಗೆ ಬಂದ ರಾತ್ರಿಯೇ ಮತ್ತೊಮ್ಮೆ ಭೂತ ಆಕೆಯ ಮೈಮೇಲೇರಿ ಬಂತು. ರಾತ್ರಿಯಿಡೀ ಮಾರನನ್ನು "ರಕ್ತ ಬಲಿ ಕೊಡು," ಎಂದು ಕಾಡುತ್ತಿತ್ತು. ತಲೆ ಕೆದರಿ. ಕಟಕಟನೆ ಹಲ್ಲು ಕಡಿದು, "ನಿನ್ನ ವಂಶವನ್ನೇ ನಾಶಪಡಿಸುತ್ತೇನೆ" ಎಂದು ಬೆದರಿಸುತ್ತಿತ್ತು. "ರಕ್ತ ಕೊಡು ಇಲ್ಲವೇ ಜೀವಕೊಡು," ಎಂದು ಪೀಡಿಸುತ್ತಿದ್ದ ಭೂತವನ್ನು ಸಹಿಸುವುದಾದರೂ ಹೇಗೆ?

ಬೆಳಗಾದ ಕೂಡಲೇ ಮಾರ, ತನ್ನ ಯಜಮಾನನಲ್ಲಿ ಅತ್ತು ಕರೆದು, ತನ್ನ ಸ್ಥಿತಿಯನ್ನು ವಿವರಿಸಿಕೊಂಡ. ಇದಕ್ಕೆ ಸರಿಯಾದ ಬಂದೋಬಸ್ತು ಮಾಡದಿದ್ದರೆ, ತನ್ನ ಸರ್ವನಾಶವಾಗುವುದೆಂದು ಯಜಮಾನನ ಕಾಲು ಹಿಡಿದ. ಯಜಮಾನನೂ ತನ್ನನ್ನೇ ನಂಬಿರುವ ಮಾರನ ಸ್ಥಿತಿಯನ್ನು ಅರಿತು ಬಂದೋಬಸ್ತುಮಾಡಲು ಒಪ್ಪಿದ.

ಪೈನಾಡಿನ 'ಇಪ್ಪಿ ಮಲೆ' ಪಾಟಾಳಿ, ಪಣಿಯರಿಗೆಲ್ಲಾ ಗುರುಸಮಾನ. ಆತನು ಬಂದ ದಿವಸ ಮಾರನ ಪಿರೆಯಲ್ಲಿ ಪಣಿಯರ ಸಂತೆಯೇ ಕೂಡಿತ್ತು. ಇಪ್ಪಿಮಲೆ ಪಾಟಾಳಿಯೆಂದ ಮೇಲೆ, ಆತನ ವಿಚಾರ ಪಣಿಯರಿಗೆ ಹೇಳಬೇಕೆ? ಕೈಯಲ್ಲಿ ಧಗಧಗಿಸುವ ಬೆಂಕಿ ಕೆಂಡವನ್ನೇ ಹಿಡಿದು, ಬಾಯಲ್ಲಿ ಬೆಂಕಿ ಕಾರುವ ಆತನ ಶಕ್ತಿಯ ವಿಚಾರದಲ್ಲಿ ಸಂಶಯಕ್ಕೆಡೆಯೆಲ್ಲಿ?

ಪಾಟಾಳಿ ಮತ್ತೊಮ್ಮೆ ಅಂಗಳದಲ್ಲಿ ವಿಧಿಪೂರ್ವಕವಾಗಿ ಕಾರ್ಯಮಗ್ನನಾದ. ಬಿಳಿಚಿ ಹೋದ ಬೊಳ್ಳಿಯನ್ನು ಒಂದು ಆಸನದಲ್ಲಿ ಪಾಟಾಳಿಯ ಮುಂದೆ ಕೂರಿಸಿದ್ದರು. ಹಲಸಿನ ಮರದಡಿಯಲ್ಲಿ ಚೆಂಡೆ. ದುಡಿಯ ಸ್ಪರ್ಧೆಯೇ ನಡೆದಿತ್ತು. ಪಾಟಾಳಿಯು ತನ್ನ ಕ್ರಿಯೆಯನ್ನೆಲ್ಲಾ ಮುಗಿಸಿ, ತನ್ನ ಮುಖಕ್ಕೊಂದು ಮುಖವಾಡವನ್ನು ಕಟ್ಟಿಕೊಂಡು ಕುಣಿಯತೊಡಗಿದ. ಅಲ್ಲಿಯೇ ಇದ್ದ ಬೈನೆ ಹೆಂಡದ ಗಡಿಗೆಯನ್ನೆತ್ತಿ ಅರ್ಧ ಕುಡಿದು. ಬೊಳ್ಳಿಯ ಕೈಗಿತ್ತ. ಕೈಯಲ್ಲಿದ್ದ ಅಕ್ಕಿಯನ್ನು ಬೊಳ್ಳಿಯ ತಲೆಗೆ ಎಸೆದು, ರಾಗಬದ್ಧವಾಗಿ

"ಹಾಲನಾಡೆ ತಾಯಿ ಹಾಲನಾಡೆ.
ಪುಳ್ಳೀನ ಮೇಲೆ ಮೈಮರಂದು
ಹಾಲನಾಡೆ..."

ಎಂದು ಹಾಡುತ್ತಾ, ಹಿಡಿದ ದೆವ್ವವನ್ನು, "ತಲೆದೂಗಿ ಬಾ ತಾಯಿ, ತಲೆದೂಗಿ ಬಾ, ಮಗಳ ಮೇಲೆ ಪ್ರೀತಿಯಿಟ್ಟು ತಲೆದೂಗಿ ಬಾ" ಎಂದು ಹುಸಲಾಯಿಸುತ್ತಾ. ಕೇಳಿದಾಗ "ಅವ್ಯಕ್ತ (ಕಂಡಿಕೆಯಲ್ಲಿನ್ನ ಬೈನೆ ಸೇಂದಿ)ವನ್ನು ಕೊಡುತ್ತಾ, ಕುಣಿಯುತ್ತಿದ್ದ. ಈ ಪಾಟಾಳಿ ಅಂದಿನ ಪಾಟಾಳಿ




"ತುರ್ತು ಪರಿಸ್ಥಿತಿಯ ಕರಾಳ ದಿನಗಳನ್ನು ನೆನೆಸಿಕೊಳ್ಳಿ...ಈಗ ಹೇಳಿ ನಿಮಗೆ ಸರ್ವಾಧಿಕಾರ ಬೇಕೋ? ಪ್ರಜಾಪ್ರಭುತ್ವ ಬೇಕೊ?"

"ಸಾರ್, ಸಾರ್ ನೀವು ಪಕ್ಷಾಂತರಿಸಿರೋದನ್ನು ಮರೆತು ಮಾತಾಡ್ತಾ ಇದೀರ!

ರಂತೆ ಕೈ ಕಟ್ಟಿನಿಂತಿರಲು ಸಾಧ್ಯವಾಗಲಿಲ್ಲ. ವಿಶ್ವಪ್ರಯತ್ನ ಮಾಡಿ, ನೀರಡಿಯಲ್ಲಿ ತಡ ಕಾಡಿ, ಬೊಳ್ಳಿಯ ತಲೆಗೂದಲನ್ನು ಹಿಡಿದು ಮೇಲಕ್ಕೆ ತಂದ. ಅವರಿವರ ಸಹಾಯದಿಂದ ಆಕೆಯ ದೇಹವನ್ನು ದಂಡೆಗೆ ತಂದು ಮಲಗಿಸಿ ದಾಗ, ಆ ನಿಶ್ಶಕ್ತೆಯು ಹೆಣ್ಣು ಹೆಣವಾಗಿದ್ದಳು. ಪಾಟಾಳಿಸ್ತನಿಗೆ ತಿಳಿದ ಶುಶ್ರೂಷೆಗಳನ್ನೆಲ್ಲಾ ಮಾಡಿ, ಕಡೆಗೊಮ್ಮೆ ನಿಟ್ಟುಸಿರು ಬಿಟ್ಟು "ಪೋಯಿ ಕಾಂಜಳು" (ಹೋಗಿಬಿಟ್ಟಳು) ಎಂದು ತಲೆ ಮೇಲೆ ಕೈಯಿಟ್ಟು ಕುಳಿತ. "ಬಲಿ ಬೇಕು, ರಕ್ತ ಬೇಕು ಎಂದು ಆಗಲಾಚುತ್ತಿದ್ದ ದೆವ್ವ ಆಕೆಯ ಬಲಿ ತೆಗೆದುಕೊಂಡಿತು" ಎಂದು ಗೋಳಾಡಿದ. ಅಚಾತುರ್ಯದಿಂದ, ಪೂರ್ವಸಿದ್ಧತೆಯಿಲ್ಲದೆ ಕೆರೆಗೆ ನೂಕಿ ಬಲಿ ಕೊಟ್ಟರೂ, ಬಲಿ ಬೇಕೆಂದು ಹಟ ಹಿಡಿಯುತ್ತಿದ್ದ ಆ ಭೂತವೇ ಆಕೆಯನ್ನು ಬಲಿ ತೆಗೆದುಕೊಂಡಿತೆಂದು ಜನರಾಡಿಕೊಂಡರು. ಇಂದೂ, ಆ ಕೆರೆಗೆ ಅಮಾವಾಸ್ಯೆಯ ಅಥವಾ ಶನಿವಾರದ ಕತ್ತಲ ದಿನಗಳಲ್ಲಿ ಹೋದವರಿಗೆ, ಯಾರೋ ಕ್ಷೀಣ ಸ್ವರದಲ್ಲಿ "ಬಲಿ ಬೇಕು, ರಕ್ತ ಬೇಕು," ಎಂದು ಹೇಳುವ ಮಾತು ಕೇಳಬಹುದೆಂದು ಅವರು ಹೇಳುತ್ತಾರೆ. ತಾವು ಕೇಳದಿದ್ದರೂ ಹೇಳಿದ ಮಾತನ್ನು ನಂಬುತ್ತಾರೆ. ✡

---

## ಸೆರೆಮನೆಯಲ್ಲಿ ಸಾಹಿತ್ಯ

ಕಾರಾಗೃಹದಲ್ಲಿ ಮೊಟ್ಟಮೊದಲು ಸಾಹಿತ್ಯ ರಚಿಸಿದ ಕೀರ್ತಿ ಗ್ರೆಯುಸ್ ನೇವಿಯುಸ್‌ಗೆ ಸಲ್ಲುತ್ತದೆ. ಕ್ರಿ. ಪೂ. ೨೬೪-೧೯೪ ರಲ್ಲಿ ಜೀವಿಸಿದ್ದ ಈತ ಸೆರೆಮನೆ ಯಲ್ಲಿರುವಾಗಲೇ ಎರಡು ನಾಟಕಗಳನ್ನು ರಚಿಸಿದ.

ರೋಮಿನ ತತ್ವಜ್ಞಾನಿ ಬೊಯುದ್ದಿಸ್ ಕಾರಾಗೃಹದಲ್ಲಿರುವಾಗ ಪಾಶ್ಚಾತ್ಯ ತತ್ವಶಾಸ್ತ್ರದಲ್ಲಿ ಮೈಲುಗಲ್ಲಾದ 'ಕನ್‌ಸೊಲೇಶನ್ ಆಫ್ ಫಿಲಾಸಫಿ' ಎಂಬ ಕೃತಿ ಯನ್ನು ರಚಿಸಿದ.

ಜಾನ್ ಬನಿಯನ್ 'ಪಿಲ್‌ಗ್ರಿಮ್ಸ್ ಪ್ರೋಗ್ರೆಸ್' ಅನ್ನು ಬರೆದದ್ದು ಜೇಲಿ ನಲ್ಲಿದ್ದಾಗಲೆ.

ಬ್ಯಾಂಕ್ ಆಫ್ ಅಸ್ಟೀನ್‌ನ ನೌಕರನಾಗಿದ್ದ ವಿಲಿಯಂ ಸಿಡ್ನಿಯು ಬ್ಯಾಂಕಿನ ಹಣಮಾಡಿ ದುರುಪಯೋಗ ಸೆರೆಮನೆ ಸೇರಿದ. ಅಲ್ಲಿ ಆತ ಬರೆದ ಸಣ್ಣ ಕಥೆಗಳಿಂದ ಮುಂದೆ ಆತ ಸಣ್ಣ ಕಥೆಗಳ ರಾಜ ಓ ಹೆನ್ರಿ ಎಂದು ಪ್ರಸಿದ್ಧನಾದ.

ಸರ್ವಾಂಟಿಸ್ ಸೆರೆಮನೆಯಲ್ಲಿರುವಾಗಲೇ ರಚಿಸಿದ ಕೃತಿ 'ಡಾನ್ ಕ್ವಿಹೋಟೆ' ನಿಂದ ಜನಪ್ರಿಯನಾದ.

ಹಿಟ್ಲರನು 'ಮೈನ್ ಕಾಂಫ್' ಅನ್ನು ಬರೆದದ್ದು ಆತ ಸೆರೆಮನೆಯಲ್ಲಿ ದ್ದಾಗಲೆ.

ಸೆರೆಮನೆಯಲ್ಲಿದ್ದಾಗ ಅಮೂಲ್ಯ ಕೃತಿಗಳನ್ನು ರಚಿಸುವುದರಲ್ಲಿ ಭಾರತೀಯ ರೇನೂ ಹಿಂದೆ ಬಿದ್ದಿಲ್ಲ. ಲೋಕಮಾನ್ಯ ಟಿಳಕರು ಸೆರೆಯಲ್ಲಿದ್ದಾಗ 'ಗೀತಾಭಾಷ್ಯ' ವನ್ನು ಬರೆದಿದ್ದರು.

ಪಂಡಿತ ಜವಹರಲಾಲ್ ನೆಹರು ತಮ್ಮ ಆತ್ಮಚರಿತ್ರೆಯನ್ನು ಜೈಲಿನಲ್ಲಿದ್ದಾ ಗಲೇ ಬರೆದದ್ದು.

ರಾಜಾಜಿಯವರು ಸೆರೆಯಲ್ಲಿದ್ದಾಗ 'ಜೈಲ್ ಡೈರಿ' ಬರೆದಿದ್ದರು.

ಸ್ವಾತಂತ್ರ್ಯ ಹೋರಾಟಗಾರ ಚಂದ್ರಶೇಖರ ಆಜಾದ್‌ರು ಕುರಾನಿನ ಬಗ್ಗೆ ಲೇಖನಗಳನ್ನು ಬರೆದಿದ್ದರು.

ಲೋಕನಾಯಕ ಜಯಪ್ರಕಾಶ ನಾರಾಯಣರು ಕೂಡ ಸೆರೆಮನೆಯಲ್ಲಿದ್ದಾಗ ದಿನಚರಿಯನ್ನು ಬರೆದಿದ್ದಾರೆ.

—ಸಂಗ್ರಹ : ಪಿ. ಎಸ್. ಎ.

# 'ಹತಸಾಕ್ಷಿ'

ಬಹಳ ವರ್ಷಗಳ ಹಿಂದೆ ಒಬ್ಬ ಜ್ಯೂ ತಾಯಿಗೆ ಒಂದಾದ ಮೇಲೊಂದರಂತೆ ಏಳು ಗಂಡು ಮಕ್ಕಳು ಜನಿಸಿದರು. ಮಕ್ಕಳು ಬೆಳೆದು ದೊಡ್ಡವರಾದರು. ಜೀವನ ದುರ್ಭರವಾಯಿತು. ಆದರೂ ತುತ್ತಿನ ಚೀಲ ತುಂಬಿಸಲು ಸ್ವತಃ ಬೆವರು ಸುರಿಸಿ ದುಡಿಯುತ್ತಿದ್ದರೇ ಹೊರತು ಅವರೆಂದೂ ಸ್ವಾಭಿಮಾನವನ್ನು ಮಾರುತ್ತಿರಲಿಲ್ಲ. ಹೀಗಿರಲೊಂದು ದಿನ ಚಕ್ರವರ್ತಿಯೊಬ್ಬನ ಭಾರೀ ಪ್ರತಿಮೆಗಾಗಿ ಕೆಲಸಮಾಡಲು ಆ ಜ್ಯೂ ತಾಯಿಯ ಏಳು ಮಕ್ಕಳಿಗೆ ಆಜ್ಞೆ ಬಂತು. ಆದರೆ ಆ ಗಂಡುಗಲಿಗಳು ಅದನ್ನು ತಿರಸ್ಕರಿಸಿ, ತಮ್ಮ 'ಅವಿಧೇಯತೆ'ಯನ್ನು ಪ್ರದರ್ಶಿಸುತ್ತ, ಬೈಬಲ್ ಗ್ರಂಥದಿಂದಾಯ್ದ ಒಂದೊಂದು ಉಕ್ತಿಯನ್ನು ಉದಾಹರಿಸಿ ದಿಟ್ಟ ಉತ್ತರ ಕೊಟ್ಟರು. ಏಳನೆಯವನನ್ನು ಚಕ್ರವರ್ತಿಯ ಎದುರು ತಂದು ನಿಲ್ಲಿಸಿದಾಗ, ಚಕ್ರವರ್ತಿ ತನ್ನ ಉಂಗುರ ಕೆಳಗೆ ಬೀಳಿಸಿಕೊಂಡು, ಅವನಿಗೆ ಕೆಳಗೆ ಬಿದ್ದ ಉಂಗುರವನ್ನು ಎತ್ತಿಕೊಡಲು ಹೇಳಿದ. ಅದಕ್ಕೆ ಆತ ಚಕ್ರವರ್ತಿಗೆ– "ನಿನ್ನ ಕೀರ್ತಿ ವೃದ್ಧಿಗಾಗಿ ನೀನು ಅಷ್ಟೊಂದು ಉತ್ಕಂಠಿತನಾಗಿದ್ದರೆ, ನಮಗೆಲ್ಲ ಅನ್ನ, ಬುದ್ಧಿ ಕೊಡುವ ಆ 'ದಾತ'ನೆಷ್ಟು ಹಂಬಲಿಸಬೇಕು ತನ್ನ ಕೀರ್ತಿ ಸಂಪತ್ತಿಗಾಗಿ! ನಾನು ತಲೆಬಾಗಿದರೆ ಆ ದೇವರಿಗೆ ಬಾಗುತ್ತೇನೆ ವಿನಾ ಅನ್ಯರಿಗಲ್ಲ!" ಎಂಬ ಸ್ವಾಭಿಮಾನದ ಉತ್ತರ ಕೊಟ್ಟ. ಉದ್ಧಟ ವರ್ತನೆಗಾಗಿ ಈ ಅವಿಧೇಯನನ್ನು ಕೂಡಲೇ ಗಲ್ಲಿಗೇರಿಸಲು ಆಜ್ಞೆ ಗೈದನಂತೆ ಚಕ್ರವರ್ತಿ. ಕಣ್ಣೀರಿಟ್ಟ ಮಕ್ಕಳ ತಾಯಿ ಕಾಡಿ ಬೇಡಿ ಮಗನ ಕೊನೆಯ ಭೇಟಿಯನ್ನು ಪಡೆದುಕೊಂಡು, ಆತನಿಗೆ ಕೊನೆಯ ಮುತ್ತು ಕೊಡುತ್ತಾ, "ಹೇಳು ಹೋಗು ಮಗನೇ, ಹಿರಿಯನಿಗೆ ಹೇಳು ಎಲೋ ಅಬ್ರಹಾಮನೆ, ಒಬ್ಬ ಮಗನನ್ನು ಬಲಿ ತೆಗೆದುಕೊಳ್ಳಲೋಸುಗ ನೀನು ಒಂದು ಬಲಿಪೀಠ ಸ್ಥಾಪಿಸಿದರೆ, ನಾನು ಯಃಕಶ್ಚಿತ್ ಹೆಂಗಸು ಏಳು ಮಕ್ಕಳಿಗಾಗಿ ಬಲಿಪೀಠಗಳನ್ನು ತಯಾರಿಸಿದ್ದೇನೆ ಎಂದು" ಎಂದು ಹೇಳಿದವಳೇ ಮಹಡಿಯಿಂದ ಕೆಳಗೆ ಹಾರಿ ತಲೆಯೊಡೆದುಕೊಂಡು ಪ್ರಾಣ ಬಿಟ್ಟಳು. "ಸುಖೀ ಮಕ್ಕಳ ತಾಯಿ" ಎಂದು ಆವೇಶಯುಕ್ತ ಉದ್ಗಾರವೊಂದು ಪ್ರತಿಧ್ವನಿಸಿತು! ಸ್ವಾಭಿಮಾನವನ್ನು ಕಾಪಾಡಿಕೊಳ್ಳಲು 'ಹತಸಾಕ್ಷಿ'ಯರಾದರು ತಾಯಿ ಮಕ್ಕಳು! (ಆಧಾರ)

— ಎಚ್. ಎಸ್. ಶ್ರೀಪಾದಭಟ್ಟ

# ಲೆಪ್ರೋಸ್ಕೋಪಿಕ್ ಶಸ್ತ್ರಚಿಕಿತ್ಸೆ ಎಂದರೇನು?

ಡಾ. ಸುನಂದಾ ಕುಲಕರ್ಣಿ

ಏನು? ಲೆಪ್ರೋಸ್ಕೋಪಿಕ್ ಶಸ್ತ್ರಚಿಕಿತ್ಸೆ !! ಇದೆಂಥ ಚಿಕಿತ್ಸೆಯೆಂದು ಚಕಿತರಾಗಬೇಡಿ. ನೂರಾರು ಸ್ತ್ರೀಯರು ಒಂದೇ ದಿನದಲ್ಲಿ ಮಾಡಿಸಿಕೊಳ್ಳುವ ಈ ಸುಲಭ ಶಸ್ತ್ರಚಿಕಿತ್ಸೆಯು ಹಲವಾರು ಜನರ ಬಾಯಲ್ಲಿ ಬರೀ 'ಸೂಜಿಮದ್ದು' ಎಂದು ಸುಪರಿಚಿತವಿರಲೂಬಹುದು.

ಈ ಲೆಪ್ರೋಸ್ಕೋಪಿನ ಉಗಮವು ರಸವತ್ತಾಗಿದೆ. ಹದಿನೆಂಟನೆಯ ಶತಮಾನದ ಅಂತ್ಯಭಾಗದಲ್ಲಿ ಮೂತ್ರಾಶಯ, ಜಠರ ಮುಂತಾದ ಅಂಗಗಳನ್ನು ನೋಡಲು ದುರ್ಬೀನಿನಂತಹ ನಳಿಕೆಗಳು ಅಸ್ತಿತ್ವದಲ್ಲಿ ಬಂದವು. ೧೯೩೦ರಲ್ಲಿ ಜಾಕೋಬ್ ಎಂಬವರಿಗೆ ಮೂತ್ರಾಶಯವನ್ನು ನೋಡುವ ಉಪಕರಣವನ್ನು ಹೊಟ್ಟೆಯಲ್ಲಿ ತೂರಿಸಿ ನೋಡಬಹುದೇ ಎಂಬ ವಿಚಾರ ಬಂದಿತು. ಮೊದಲು ಇದನ್ನು ನಾಯಿಯ ಮೇಲೆ ಉಪಯೋಗಿಸಲಾಯಿತು. ಇದಕ್ಕೆ ಬೇಕಾಗುವ ಬೆಳಕನ್ನು ಮೇಣಬತ್ತಿಯ ಸಹಾಯದಿಂದ ಪಡೆಯಲಾಯಿತು. ಕಾಲಕ್ರಮೇಣ ಮೇಣಬತ್ತಿಯ ಸ್ಥಾನವನ್ನು ಕಂದೀಲು, ನಂತರ ಬಲ್ಬ್ ಪಡೆಯಿತು. ಹೀಗೆ ಹುಟ್ಟಿದ ಉಪಕರಣದಲ್ಲಿ ಕಾಲಾಂತರದಲ್ಲಿ ವಿಧ-ವಿಧವಾದ ಬದಲಾವಣೆಯಾಗಿ ಈಗಿನ ಲೆಪ್ರೋಸ್ಕೋಪ್ ಜನ್ಮ ತಳೆಯಿತು.

ಈ ಲೆಪ್ರೋಸ್ಕೋಪ್ ಒಂದು ಉದ್ದವಾದ ನಳಿಗೆಯಿದ್ದು, ಅದ್ದರಲ್ಲಿ ದುರ್ಬೀನಿನ ತರಹದ ಮಸೂರಗಳನ್ನು ಅಳವಡಿಸಿರುತ್ತಾರೆ. ಅದರ ಜೊತೆಗೆ ಬೆಳಕಿನ ವ್ಯವಸ್ಥೆಯೂ ಇರುತ್ತದೆ. ಈ ಬೆಳಕಿನ ಸಹಾಯದಿಂದ ಲೆಪ್ರೋಸ್ಕೋಪಿನಲ್ಲಿ ಶರೀರದ ಒಳ ಭಾಗಗಳನ್ನು ಗುರುತಿಸಬಹುದು. ಮೊದಲಿನಂತೆ ಹೊಟ್ಟೆಯನ್ನು ಕೊಯ್ದು ನೋಡದೆ ಸಣ್ಣ ತೂತನ್ನು ಮಾಡಿ. ಅದರಲ್ಲಿ ಲೆಪ್ರೋಸ್ಕೋಪ್ ತೂರಿಸಿ, ಕರುಳು. ಜಠರ. ಗರ್ಭಾಶಯ ಮುಂತಾದ ಅಂಗಗಳನ್ನು ಪರೀಕ್ಷಿಸಬಹುದು.

ಇನ್ನು ಡಿಂಭನಾಳ, ಅಂಡಾಶಯ ಮುಂತಾದವುಗಳ ಮೇಲೆ ಶಸ್ತ್ರಚಿಕಿತ್ಸೆಯನ್ನು ಮಾಡಬೇಕಾದರೆ, ಅದಕ್ಕೆ ಮತ್ತೊಂದು ಉಪಕರಣವಿರುತ್ತದೆ. ಕೆಲವದರಲ್ಲಿ ಲೆಪ್ರೋಸ್ಕೋಪಿನ ಜೊತೆಗೆ ಈ ಉಪಕರಣವನ್ನು ಸೇರಿಸಿ, ಒಂದರಲ್ಲಿಯೇ ಅಳವಡಿಸಿರುತ್ತಾರೆ. ಇನ್ನು ಕೆಲವದರಲ್ಲಿ ಅವೆರಡೂ ಬೇರೆ ಬೇರೆಯಾಗಿಯೇ ಇರಬಹುದು. ೧೯೫೦ ರಿಂದ ಈಚೆಗೆ ಇದರಲ್ಲಿ ಫೋಟೋಗಳನ್ನು ಕೂಡ ತೆಗೆಯುವ ವ್ಯವಸ್ಥೆ ಮಾಡಿದ್ದಾರೆ. ಈ ಉಪಕರಣದಲ್ಲಿ ಒಳಗಿನ ಅಂಗಗಳು, ಬಣ್ಣಗಳ ಬದಲಾವಣೆಯನ್ನು ತೋರಿಸದೆ, ಪ್ರತಿಫಲಿತವಾಗದೆ, ಸರಿಯಾಗಿ ಕಾಣಿಸುತ್ತವೆ. ೧೯೬೧

ರಲ್ಲಿ ನ್ಯೂಮನ್, ಹಾಗು ಫ್ರೀಕ್ ಎಂಬವರು ಡಿಂಭನಾಳದ ಮೇಲೆ ಮೊದಲ ಶಸ್ತ್ರಚಿಕಿತ್ಸೆಯನ್ನು ಮಾಡಿದರು. ನಂತರ ಇದರಲ್ಲಿ ಬೇರೆ ಬೇರೆ ಸಣ್ಣ ಚಿಕಿತ್ಸೆಗಳು ಬಳಕೆಗೆ ಬಂದಿವೆ.

ಡಿಂಭನಾಳ ಛೇದ ಶಸ್ತ್ರಕ್ರಿಯೆಯು ಈ ಪದ್ಧತಿಯಿಂದ ಹೆಚ್ಚು ಪ್ರಚುರವಾಗುತ್ತಿದೆ-ಜನಪ್ರಿಯವಾಗುತ್ತಲಿದೆ. ಈ ಶಸ್ತ್ರಚಿಕಿತ್ಸೆಯನ್ನು ಮಾಡುವಾಗ ಮೊದಲು ಹೊಟ್ಟೆಯಲ್ಲಿ ಹವೆಯನ್ನಾಗಲೀ ಇಲ್ಲವೆ ಅಂಗಾರಾಮ್ಲವಾಯುವನ್ನಾಗಲೀ ಸಣ್ಣ ಸೂಜಿಯ ಮುಖಾಂತರ ತುಂಬಲಾಗುತ್ತದೆ. ಗಾಳಿಯು ಹಗುರವಾಗಿರುವದರಿಂದ ಮೇಲಕ್ಕೆ ಬರುತ್ತದೆ. ಹಾಗೂ ಕರುಳುಗಳು ಹಿಂದಕ್ಕೆ ಸರಿಯುತ್ತವೆ. ಗರ್ಭಾಶಯ ಸರಿಯಾಗಿ ಕಾಣುವಂತೆ ಮಾಡಲು ಸ್ತ್ರೀಯರನ್ನು ಸ್ವಲ್ಪ ಇಳಿಜಾರಾಗಿ ಮಲಗಿಸುತ್ತಾರೆ. ಅದೂ ಅಲ್ಲದೆ ಯೋನಿಮೂಲಕ ಕೆಲ ಉಪಕರಣಗಳನ್ನು ಹಾಕಿ ಗರ್ಭಾಶಯವನ್ನು ಎತ್ತಿ ಹಿಡಿಯುತ್ತಾರೆ. ಇನ್ನು ಲೆಪ್ರೋಸ್ಕೋಪ್ ಹಾಗೂ ಶಸ್ತ್ರಕ್ರಿಯೆಯ ಉಪಕರಣವನ್ನು ಒಳಗೆ ತೂರಲು ಎರಡು ಸಣ್ಣ ಸಣ್ಣ ನಳಿಗೆಗಳು ಇರುತ್ತವೆ. ಈ ನಳಿಗೆಗಳನ್ನು ಹೊಟ್ಟೆಯ ಒಳಗಡೆ ಸಣ್ಣ ತೂತನ್ನು ಮಾಡಿ ತೂರಿಸುತ್ತಾರೆ. ಹೊಟ್ಟೆಯಲ್ಲಿ ಗಾಳಿಯು ತುಂಬಿಕೊಂಡಿರುವದರಿಂದ, ಈ ನಳಿಗೆಗಳಿಂದ ಕರುಳುಗಳಿಗೆ ಗಾಯವಾಗುವ ಸಂಭವ ಕಡಿಮೆ. ಈ ನಳಿಗೆಗಳಲ್ಲಿ ಲೆಪ್ರೋಸ್ಕೋಪನ್ನು ತೂರಿಸಿ, ಶಸ್ತ್ರಚಿಕಿತ್ಸೆಯನ್ನು ಮಾಡುತ್ತಾರೆ. ಡಿಂಭನಾಳವನ್ನು ಸ್ಪ್ರಿಂಗ್ ಕ್ಲಿಪ್ ಬ್ಯಾಂಡಿನ ಸಹಾಯದಿಂದ ಕಟ್ಟಿಹಾಕುತ್ತಾರೆ. ಹೀಗಾಗಿ ಅಂಡ ಡಿಂಭನಾಳದಿಂದ ಪಾರಾಗಿ ಬರಲು ಆಗುವುದಿಲ್ಲ.

ಬೆಳೆಯುತ್ತಿರುವ ಜನಸಂಖ್ಯೆಯನ್ನು ನಿಯಂತ್ರಿಸಲು 'ಲೆಪ್ರೋಸ್ಕೋಪ್ ಚಿಕಿತ್ಸೆ'ಯು ಬಹಳ ಮಹತ್ವದ ಪಾತ್ರವಹಿಸಿದೆ. ಸಣ್ಣ ಉಪಕರಣವಿರುವದರಿಂದ ಹೊಲಿಗೆಯನ್ನು ಹಾಕುವುದಿಲ್ಲ. ಗೃಹಿಣಿಯರಿಗೆ ಇದೊಂದು ವರದಾನವೇ ಸರಿ. ಆಸ್ಪತ್ರೆಯಲ್ಲಿ ಕೆಲವು ತಾಸುಗಳಿದ್ದರೆ ಸಾಕು. ಎಚ್ಚರ ತಪ್ಪಿಸುವ, ಹೊಲಿಗೆ ಬಿಚ್ಚುವ ಸುದ್ದಿಯೇ ಇಲ್ಲ. ಕೆಲವೇ ಗಂಟೆಗಳಲ್ಲಿ ನೂರಾರು ಸ್ತ್ರೀಯರ ಮೇಲೆ ಈ ಚಿಕಿತ್ಸೆಯನ್ನು ಮಾಡಬಹುದು. ಇದಕ್ಕೆ ಆಸ್ಪತ್ರೆಯೇ ಬೇಕೆಂದಿಲ್ಲ. ಅಂತೆಯೇ ಹಳ್ಳಿ-ಹಳ್ಳಿಗಳಲ್ಲಿ ಶಾಲೆ-ಕಾಲೇಜುಗಳಲ್ಲಿ ಸಂತಾನ ನಿರೋಧ ಶಿಬಿರಗಳನ್ನು ನಡೆಸುತ್ತಾರೆ.

ಇಷ್ಟೊಂದು ಸುಲಭ ಚಿಕಿತ್ಸೆಯಿಂದ ದುಷ್ಪರಿಣಾಮಗಳು ಇಲ್ಲವೆ? ಎಂಬ ಪ್ರಶ್ನೆಯು ಕೆಲವರಲ್ಲಿ ಉದ್ಭವಿಸಬಹುದು. ಪ್ರತಿಯೊಂದು ಗುಳಿಗೆಯಿಂದಷ್ಟೇ ಅಲ್ಲ. ಪ್ರತಿಯೊಂದು ಶಸ್ತ್ರಚಿಕಿತ್ಸೆಯಿಂದಲೂ, ಕೆಲವು ತರಹದ ಉಪಪರಿಣಾಮಗಳು ಒದಗಿಯೇ ಒದಗುತ್ತವೆ. ಆದರೆ ಅದಕ್ಕೆ ಪ್ರತಿ ಉಪಾಯ ಕೂಡ ಇರುತ್ತದೆ. ✡

ಪ್ರಜಾಸಂಖ್ಯೆಯದು ಬೆಳೆಯದಂತಿರಲು
ಇನ್ನೇನು ಮಾಡಬೇಕು?
ಎಲ್ಲ ಹೆಂಡರಿಗೂ ಬೇರೆ ಬೇರೆ ಕಡೆ
ನೌಕರಿಯ ನೀಡಬೇಕು.
ಕೇಳಿರುವ ಪ್ರಶ್ನೆಗಿದು ಅಲ್ಲ ಉತ್ತರವು
ಹೇಳೇನು ಮಾಡಬೇಕು?
ಹೆಂಡಿರನು ಹಗಲು-ಗಂಡರನು ರಾತ್ರಿ
ಪಾಳಿಯಲಿ ದೂಡಬೇಕು.

# ನಾಥದ್ವೀಪದ ಉಪವಾಸವ್ರತ

**ದ್ವಾಪರಯುಗದ ಅಂತ್ಯಭಾಗದವರೆಗೂ ಪ್ರವೃದ್ಧಮಾನವಾಗಿದ್ದು ತದನಂತರ ಕಲಿಯುಗದ ಪ್ರಾರಂಭ ದಿಶೆಯಲ್ಲಿ ಯಾವಾಗಲೋ ನಿರ್ನಾಮವಾಗಿ ಹೋದ ನಾಥದ್ವೀಪದ ನಿವಾಸಿಗಳಿದ್ದ ನಾಥ-ಕಾರಿಗ-ಮುನ್ನಿಗ-ಹೊನ್ನಿಗ ಎಂಬ ನಾಲ್ಕು ಆರ್ಥಿಕ ವರ್ಗಗಳ ಬಗ್ಗೆಯೂ ಆಗ ಅಲ್ಲಿ ಕಂಡು ಬಡವರಾದ ನಾಥ ವರ್ಗದ ಉದ್ಧಾರಕ್ಕಾಗಿ ನಡೆಸುತ್ತಿದ್ದ ಪ್ರಜಾಪ್ರಭುದೇವನ ನಿತ್ಯ ಪೂಜಾ ಮತ್ತು ಪಾಂಚವಾರ್ಷಿಕ ಜಾತ್ರಾ ಕ್ರಮದ ವೈಖರಿಯನ್ನೂ ಯಾತ್ರಿಕರು 'ಕಸ್ತೂರಿ'ಯ ಏಪ್ರಿಲ್ ೧೯೮೧ ರ ಸಂಚಿಕೆಯಲ್ಲಿ ಪ್ರಚುರವಾದ ದೀರ್ಘ ಲೇಖನದಲ್ಲಿ ವರ್ಣಿಸಿದ್ದಾರೆ. ಪ್ರಸ್ತುತ ಲೇಖನದಲ್ಲಿ ಶ್ರೀಯುತರು ನಾಥದ್ವೀಪೀಯ ಜೀವನದ ಮತ್ತೊಂದು ನೋಟವನ್ನು ನಮ್ಮ ಮುಂದೆ ಇಟ್ಟಿದ್ದಾರೆ.**

ದ್ವಾಪರಯುಗದ ಭಾರತದಲ್ಲಿ ಉಪವಾಸವನ್ನು ವ್ರತರೀತ್ಯಾ ಆಚರಿಸುವ ಕ್ರಮಗಳು ಇನ್ನೂ ಜಾರಿಗೆ ಬಂದಿರಲಿಲ್ಲ. ಎಲ್ಲೋ ಅಲ್ಲಿ ಇಲ್ಲಿ ಇದ್ದ ದುರ್ವಾಸ ಕುಚೇಲಾದಿಗಳಂತಹ ಬಡ ಬ್ರಾಹ್ಮಣೋತ್ತಮರು ತಮ್ಮ ತಮ್ಮ ಹೊಟ್ಟೆಗೆ ಒದ್ದೆ ಬಟ್ಟೆ ಕಟ್ಟಿಕೊಂಡು, ಇದ್ದುದನ್ನು ಮಕ್ಕಳಿಗೆ ಉಣಿಸುತ್ತಾ ಕಾಲ ಕಳೆಯುತ್ತಿದ್ದರೆ ಬೇಗನೆ ಒಬ್ಬ ದುರ್ಯೋಧನ ಅಥವಾ ಒಬ್ಬ ಕೃಷ್ಣನಂಥ ರಾಜಮಹಾರಾಜರು ಅವರ ನೆರವಿಗೆ ಬಂದು ಕಷ್ಟ ಪರಿಹಾರ ಮಾಡುತ್ತಿದ್ದರು.

ಆದರೆ ನಾಥದ್ವೀಪಕ್ಕೆ ಭಾರತದಿಂದ ವಲಸೆ ಬಂದ ನಂತರ, ಪ್ರವೃದ್ಧಮಾನರಾದ ನಾಥದ್ವೀಪಿಯರ ಚರಿತ್ರೆಯೇ ಸ್ವಲ್ಪ ಬೇರೆ ರೀತಿಯಲ್ಲಿ ಬೆಳೆದು ಬಂದ ಹಾಗೆ ತೋರುತ್ತದೆ. ಕೃತ-ತ್ರೇತಾ ಯುಗಗಳಲ್ಲೇ ಯಾರೋ ನಾಥದ್ವೀಪೀಯ ಋಷಿಗಳು ಉಪವಾಸವ್ರತದ ಮಹಿಮೆ ಕಂಡುಹಿಡಿದಿರಬೇಕು. ಅವರು ಅಗಸ್ತ್ಯರು ಎಂದು ವಾದಿಸುವ ಒಂದು ಪಕ್ಷವಿದ್ದಂತೆ (ನಾಥದ್ವೀಪೀಯ ಮತ್ತು ಭಾರತದ ಪುರಾತನ ಅಥವಾ ಪ್ರಾಚೀನ ಅಲ್ಲದೆ ಚಾರಿತ್ರಿಕ ಹೆಸರುಗಳೂ ಸನ್ನಿವೇಶಗಳೂ ಆಗುಹೋಗುಗಳೂ ಅನೇಕ ಸಂದರ್ಭಗಳಲ್ಲಿ ಒಂದನ್ನೊಂದು ಹೋಲುವುದರಲ್ಲಿ ಆಶ್ಚರ್ಯವೇನೂ ಇಲ್ಲ. ನಾಥದ್ವೀಪ ಮೊಟ್ಟ ಮೊದಲು ಭಾರತದ ಪೂರ್ವತೀರವನ್ನು ಅಪ್ಪಿ-ಹಿಡಿದಂತೆ ಅದರ ಉಪದ್ವೀಪವಾಗಿ ಹುಟ್ಟಿ ಕೃತ-ತ್ರೇತಾ ಯುಗಗಳಲ್ಲಿ ಸ್ವಲ್ಪ ಸ್ವಲ್ಪವಾಗಿ ಭಾರತದಿಂದ ದೂರ ಸರಿಯಿತೆಂದೂ ಭಾರತದ ಜನಗಳೇ ಕೃತ-ತ್ರೇತಾ ಯುಗಗಳಲ್ಲಿ ನಾಥದ್ವೀಪಕ್ಕೆ ವಲಸೆ ಬಂದಿದ್ದರೆಂದೂ ತಿಳಿದ ಮೇಲೆ ಈ ಹೋಲಿಕೆಗೆ ಇನ್ನೇನೂ ಬೇರೆ ಕಾರಣ ಕೊಡಬೇಕಾಗಿಲ್ಲ. [ಈಗಲೂ ಪ್ರವೃದ್ಧಮಾನವಾಗಿರುವ ಜಾ(ಯಾ)ವ, ಬಾ(ವಾ)ಲೀ ದ್ವೀಪಗಳ ಸಂಸ್ಕೃತಿಯ ಉದಾಹರಣೆಯನ್ನು ಕೊಡಬಹುದು.] ನಾಥ ಪುರಾಣದ ಪ್ರಕಾರ ಒಂದು ಸಲ ಇಲ್ವಲನೆಂಬ ಆಸುರ ಗೋತ್ರದ ಬ್ರಾಹ್ಮಣೋತ್ತಮ ತನ್ನ ಮಿತ್ರ ಅಗಸ್ತ್ಯರನ್ನು ಔತಣಕ್ಕೆ ಕರೆದನಂತೆ. ಆ ದಿನ ಸಾಯಂಕಾಲಕ್ಕೆ ಮುಂಚೆಯೇ ತಾನು ಧನಾರ್ಜನೆಯಾಗಿ ಕಾಡಿಗೆ

ಹೋಗಿ ಬೇಟೆಯಾಡಿ ತಂದಿದ್ದ, ಅಗಸ್ತ್ಯರಿಗೆ ಬಹಳ ಪ್ರಿಯವೆಂದು ತಿಳಿದಿದ್ದ ವಾತಾಪೀ ಜಾತಿಗೆ ಸೇರಿದ ಕೃಷ್ಣ ವರ್ಣದ ಕಾಡು ಆಡಿನ ಮಾಂಸದಿಂದ ಮಾಡಿದ ಮೇಷಾ ಪೂಪವನ್ನು ಅವರಿಗೆ ಸಾಕಷ್ಟು ಬಡಿಸಿದ. ಅವರೂ ಅವನು ಹಾಕಿದಷ್ಟನ್ನೂ ಉಂಡರು. ಅನಂತರ ಹೊಟ್ಟೆ ಉಬ್ಬರಿಸಿದಾಗ ಅವರು ವಾತಾಪೀ ಆಡಿನ ವಂಶವೇ ನಿರ್ವಂಶವಾಗಿ ಹೋಗಲೆಂದು ಶಪಿಸಿದ್ದಲ್ಲದೆ ತದನಂತರ ಒಂದು ತಿಂಗಳು ಪರ್ಯಂತ ಅನ್ನಾಹಾರಗಳನ್ನು ವರ್ಜಿಸಿ ಪುನಃ ಪೂರ್ಣಾರೋಗ್ಯ ಪಡೆದರಂತೆ. ತತ್ಕಾರಣದಿಂದ, ತಾನೇ ನಾಥದ್ವೀಪೀಯರಿಗೆ ಉಪವಾಸವ್ರತದ, ಅದರಲ್ಲೂ ವೈದ್ಯಕೀಯ ಉಪವಾಸದ, ಮಹಿಮೆ ತಿಳಿಯಿತಂತೆ. ಇನ್ನೊಂದು ಪಕ್ಷದ ಪ್ರಕಾರ ಬೇರೊಬ್ಬ ತಪಸ್ವಿಯಂತೆ ಉಪವಾಸದ ಮಹಿಮೆ ಕಂಡುಹಿಡಿದಿದ್ದು ತಪಸ್ಸಿನ ಅಂಗವಾಗಿ ಇವರು ವಾರಾಂತರ ಉಪವಾಸ ಮಾಡುತ್ತಾ ಬಂದಂತೆಲ್ಲ ಇವರ ಕೋಪವೂ ಜಾಸ್ತಿಯಾಗುತ್ತಿತ್ತು. ಕೋಪದ ಭರದಲ್ಲಿ ಕೊಟ್ಟ ಶಾಪಗಳೂ ನಡೆದುಹೋಗುತ್ತಿದ್ದವು. ಇದನ್ನು ನೋಡಿ ಜನಗಳು ಇವರಿಗೆ ದುರುಪವಾಸಿ ಎಂದು ಕೊಟ್ಟ ಅಡ್ಡ ಹೆಸರು ಕಾಲ ಕ್ರಮದಲ್ಲಿ ದೂರ್ವಾಸ ಎಂದು ಮಾರ್ಪಟ್ಟಿತು. ಇವರ ಮೂಲ ಹೆಸರು ಗೊತ್ತಿಲ್ಲ. ಅಂದಿನಿಂದ ಮಂತ್ರಮಾಟ ಮಾಡುವವರು ದೀರ್ಘಕಾಲದ ಉಪವಾಸವನ್ನು ಮಾಡುವ ಪದ್ಧತಿ ಬಂದಿತಂತೆ. ಕಾಲ ಕಳೆದಂತೆಲ್ಲ



ಉಪವಾಸವ್ರತದ ಮಹಿಮೆ ನಾಥದ್ವೀಪದ ಸಾಮಾನ್ಯ ಜನಗಳಲ್ಲೂ ಹರಡಿ ಅವರು ತಮ್ಮ ಆರೋಗ್ಯ ಲಾಭಕ್ಕೂ ಶತ್ರುಜನ ಸಂಹಾರಕ್ಕೂ ಶತ್ರುಗ್ರಹ ಶಾಂತಿಗೂ ಮಿತ್ರಗ್ರಹಗಳ ಒಲಿಮೆಗೂ ಹೀಗೆ ನಾನಾ ಉದ್ದೇಶಗಳನ್ನು ಸಾಧಿಸಲು ಆಗಾಗ ಉಪವಾಸ ಮಾಡಹತ್ತಿದರು.

ಸಾವಿರಾರು ವರ್ಷಗಳು ಕಳೆದ ಮೇಲೆ ದ್ವಾಪರಯುಗದ ಸುಮಾರು ಮುಕ್ಕಾಲು ಪಾಲು ಕಳೆದು ನಾಥದ್ವೀಪದ ಮೇಲೆ ಶ್ವೇತ ದ್ವೀಪೀಯರು ಆಳ್ವಿಕೆ ನಡೆಸುತ್ತಿದ್ದಾಗ ಸತ್ಯ ಪ್ರೇಮಿ ಮಹರ್ಷಿಗಳು ಜನ್ಮ ಹೊತ್ತರು. ನಾಥ ಪೌರಾಣಿಕರು ದ್ವೀಪವನ್ನು ಸಂದರ್ಶಿಸುವ ವೇಳೆಗೆ ಈ ಋಷಿವರ್ಯರು ದೈವಾಧೀನರಾಗಿ ಎರಡು ಸಾವಿರ ವರ್ಷಗಳಾಗಿದ್ದರೂ ಅವರು ನಡೆಸಿದ ಮಹಾಕಾರ್ಯಗಳೆಲ್ಲ ಇನ್ನೂ ಜನಗಳ ಬಾಯಿ ಮಾತಾಗಿತ್ತು. ಉಪವಾಸ ವ್ರತದಿಂದ ವ್ರತಿಗೆ ಸಿಗುವ ಮಹಾ ಶಕ್ತಿಯನ್ನು ಪರರಾಳಿಯ ಕೇಡಿಗೋ ಅಥವಾ ಬರೀ ತನ್ನ ಸ್ವಾರ್ಥಸಾಧನೆಗೋ ಉಪಯೋಗಿಸುವ ಬದಲು ದೇಶ ಹಿತ ಬಹು ಜನ ಹಿತ ಕಾರ್ಯಗಳಿಗಾಗಿ ಉಪಯೋಗಿಸುವುದನ್ನು ಸತ್ಯಪ್ರೇಮಿಗಳು ಆಚರಣೆಗೆ ತಂದರು. ಅವರ ಒಟ್ಟು ಎಂಟು ನೂರು ವರ್ಷಗಳ ಜೀವಮಾನದಲ್ಲಿ ಸುಮಾರು ಎಂಭತ್ತು ಉಪವಾಸ ವ್ರತಗಳನ್ನು ಹಿಡಿದು ತಾವು ಕೈಕೊಂಡ ಕಾರ್ಯಗಳನ್ನೆಲ್ಲಾ ಸಾಧಿಸಿದರಂತೆ. ಇವು ಒಂದೊಂದೂ ಇಪ್ಪತ್ತೊಂದು ವಾರಗಳ ಪರ್ಯಂತ ನಡೆಯುತ್ತಿದ್ದ ನಿರಶನವ್ರತ. ಆಗ ಇವರು ನೀರು ಮತ್ತು ವೈದ್ಯರ ಸಲಹೆಯಂತೆ ಸ್ವಲ್ಪ ನಿಂಬೆ ಹಣ್ಣಿನ ರಸ ಮತ್ತು ಒಂದು ಚಿಟಿಕೆ ಉಪ್ಪು ಬಿಟ್ಟು ಇನ್ನೇನನ್ನೂ ಸೇವಿಸುತ್ತಿರಲಿಲ್ಲ. ಸತ್ಯಪ್ರೇಮಿ ಮಹರ್ಷಿಗಳ ವ್ರತಗಳಿಂದ ಮೇಲೆದ್ದ ಸತ್ಯ ಜ್ವಾಲೆಯಲ್ಲಿ ಶ್ವೇತೀಯರ ಕಲ್ಲೆದೆಯೂ ಕರಗಿ ಕಡೆಗೆ ನಾಥದ್ವೀಪಕ್ಕೆ ಸ್ವಾತಂತ್ರ್ಯ ಕೊಟ್ಟು ತಮ್ಮ ಶ್ವೇತದ್ವೀಪಕ್ಕೆ ಹಿಂತಿರುಗುವಂತೆ ಆಯಿತು.

ಸತ್ಯಪ್ರೇಮಿ ಮಹರ್ಷಿಗಳು ಹಾಕಿ ಕೊಟ್ಟ ಮೇಲ್ಪಂಕ್ತಿಯನ್ನೇ ಅನುಸರಿಸಿದರೂ ಅವರ ನಂತರ ಬಂದ ತರುಣ ಮುಖಂಡರು ಕಾಲಕ್ಕೆ ತಕ್ಕಂತೆ ಈ ಉಪವಾಸ ವ್ರತಗಳ ಆಚರಣೆಯಲ್ಲಿ ಕೆಲವು ಮಾರ್ಪಾಡುಗಳನ್ನು ತಂದು ಆಚರಿಸಿ ಬಹು ನಾಥ ಜನರ ಜೀವನದಲ್ಲಿ ಅನೇಕ ಸುಧಾರಣೆಗಳನ್ನು ತಂದಿದ್ದರು. ಪ್ರಜಾಪ್ರಭುತ್ವದ ಸೇವೆಯಲ್ಲಿ ಈ ಉಪವಾಸ ವ್ರತಗಳ ಪಾತ್ರವನ್ನು ತಿಳಿಯುವ ಮುಂಚೆ ನಾಥ ಪೌರಾಣಿಕರು ನಾಥದ್ವೀಪಕ್ಕೆ ಸಂದರ್ಶಿಸುವ ವೇಳೆಗೆ ಅಲ್ಲಿ ಬಳಕೆಗೆ ಬಂದಿದ್ದ ವಿವಿಧ ಉಪವಾಸ ವ್ರತಗಳ ಬಗ್ಗೆ ಸ್ವಲ್ಪ ತಿಳಿಯೋಣ.

ನಾಥದ್ವೀಪದಲ್ಲಿ ಆಗ ಇಲ್ಲೋಪವಾಸ, ಉಳ್ಳೋಪವಾಸ, ವೈದ್ಯೋಪವಾಸ ಮತ್ತು ಮಹೋಪವಾಸ ಎಂಬ ನಾಲ್ಕು ಬಗೆಯ ಉಪವಾಸ ವ್ರತಗಳು ಆಚರಣೆಯಲ್ಲಿದ್ದವು. ಅದರಲ್ಲಿ ಮೊದಲನೆಯದಾದ ಇಲ್ಲೋಪವಾಸವು ನಾಥದ್ವೀಪದಲ್ಲಿ ಅನಾದಿಕಾಲದಿಂದಲೂ ಇತ್ತು ಎಂಬ ಪ್ರತೀತಿ ಇದ್ದರೂ ಶ್ವೇತದ್ವೀಪೀಯರು ಬಿಟ್ಟು ಹೊರಟ ಮೇಲೆ, ನಾಥ ದ್ವೀಪೀಯರು ಸ್ವತಂತ್ರರಾದ ಮೇಲೆ ಇತ್ತೀಚೆಗೆ ಈ ವ್ರತದ ಆಚರಣೆ ಹೆಚ್ಚು ಹೆಚ್ಚಾಗಿ ಬೆಳೆದುಬಂದಿದೆ ಎಂದು ಅನೇಕ ತಜ್ಞರು ಅಭಿಪ್ರಾಯ ಪಡುತ್ತಿದ್ದರಂತೆ. ಉಳ್ಳೋಪವಾಸ, ವೈದ್ಯೋಪವಾಸಗಳು ಅಗಸ್ತ್ಯ-ದೂರ್ವಾಸಾದಿ ಋಷಿಗಳ ಕಾಲದಿಂದೀಚೆಗೆ ಆಚರಣೆಯಲ್ಲಿ ಬಂದಿದ್ದವು. ಮಹೋಪವಾಸ ವ್ರತವು ಸತ್ಯ ಪ್ರೇಮಿ ಋಷಿಗಳು ದೈವಾಧೀನರಾದ ಮೇಲೆ ನವ ನಾಥದ್ವೀಪದ ತರುಣ ರಾಜಕೀಯ ಮುಖಂಡರುಗಳಿಂದ ಆಚರಣೆಗೆ ತರಲ್ಪಟ್ಟು ಪ್ರಜಾಪ್ರಭುತ್ವದ ಸೇವೆಯಲ್ಲಿ ಅಳವಡಿಸಲ್ಪಟ್ಟಿತ್ತು.

ಇಲ್ಲೋಪವಾಸ ಎಂದರೆ ಏನೂ ಇಲ್ಲದವರು ಮಾಡುವ ಉಪವಾಸ. ಹೊಟ್ಟೆಗೆ ಬೇಕಾದ್ದನ್ನು ಬೆಳೆದುಕೊಳ್ಳಲು ಸಾಕಷ್ಟು ಜಮೀನು ಇಲ್ಲ ಅಥವಾ ಜಮೀನು ಇಲ್ಲವೇ ಇಲ್ಲ. ಕೊಂಡುಕೊಳ್ಳಲು ಹಣವೂ ಇಲ್ಲ. ಕೂಲಿ [illegible] ಕೆಲಸಮಾಡಲು ಸಿದ್ಧವಾಗಿದ್ದರೂ ಅದೂ ಸಿಗದು. ಸಿಕ್ಕಿದರೂ ವಾರದಲ್ಲಿ [illegible]

ಮಾತ್ರ ಸಿಗಬಹುದು. ಭಿಕ್ಷೆ ಬೇಡಲು ಹೋದರೆ ಎಲ್ಲೆಲ್ಲೂ ಇಲ್ಲ, ಇಲ್ಲ, ಮುಂದಕ್ಕೆ ಹೋಗು ಎನ್ನುವ ಮಾತುಗಳೇ ಇವರಿಗೆ ಸಿಗುವುದು. ಹೀಗೆ 'ಇಲ್ಲ' ತತ್ವಕ್ಕೆ ವಾರಸುದಾರರಾಗಿ ಹುಟ್ಟಿದ ನಾಥವರ್ಗದವರು ಆಚರಿಸುತ್ತಿದ್ದ ಉಪವಾಸ ಕ್ರಮಕ್ಕೆ 'ಇಲ್ಲೋಪವಾಸ' ಎಂಬ ಹೆಸರು ನ್ಯಾಯವಾಗಿಯೇ ಬಂದಿತ್ತು.

ಆದರೆ ಇಲ್ಲೋಪವಾಸವನ್ನು ಉಪವಾಸ ವ್ರತವೆಂದು ಎಣಿಸಲಾಗದು ಎಂಬ ಮತವೂ ಇತ್ತು ಎಂದು ನಾಥ ಪೌರಾಣಿಕರು ಬರೆದಿದ್ದಾರೆ. ಕಾರಿಗ – ಮುನ್ನಿಗ ವರ್ಗಗಳಿಗೆ ಸೇರಿದ ಶಾಸ್ತ್ರವೇತ್ತರು ಇದಕ್ಕೆ ಅನೇಕ ಕಾರಣಗಳನ್ನು ಸೂಚಿಸುತ್ತಿದ್ದರಂತೆ. ಮೊದಲನೆಯದಾಗಿ ನಾಥ ಜನರು ಈ ಉಪವಾಸವನ್ನು ಸ್ವಂತ ಇಚ್ಛೆಯಿಂದ ಮಾಡುತ್ತಿರಲಿಲ್ಲ. ಎರಡನೆಯದು ಇದರಲ್ಲಿ ಯಾವ ತ್ಯಾಗವೂ – ತ್ಯಾಗ ಎಂದರೆ ಇರುವುದನ್ನು ತ್ಯಜಿಸುವಿಕೆ ಎಂಬ ಅರ್ಥದಲ್ಲಿ – ಇರಲಿಲ್ಲ. ಮೂರನೆಯದು, ಈ ವ್ರತವನ್ನು ನಾಥರು ಯಾವ ದೇವರ ಹೆಸರಿನಲ್ಲೂ ಮಾಡುತ್ತಿರಲಿಲ್ಲ. ಮಂತ್ರ ವಿಧಿಗಳಾಗಲಿ ನಿಯಮಿತ ಕಾಲವಾಗಲಿ ಆಕ್ರಮವಾಗಲಿ ಇರಲಿಲ್ಲ. ನಾಲ್ಕನೆಯದು ಇದು ಆ ವರ್ಗದ ಜನಗಳ ಮೂಲ ನಡವಳಿಕೆ. ಪರಂಪರಾಗತವಾಗಿಯೂ ಹುಟ್ಟಿನಿಂದಲೂ ಬಂದ ಮಾಮೂಲು ನಡವಳಿಕೆ, ನಂಬಿಕೆಯಿಂದ ಹಿಡಿದ ವ್ರತವಲ್ಲ. ಐದನೆಯದು ಈ ಉಪವಾಸದ ದಿನಗಳಲ್ಲೂ ನಾಥ ಜನರು ಕಾಡಿನಲ್ಲಿ ಹುಡುಕಾಡಿ ಅಲ್ಲಿ ಇಲ್ಲಿ ಸಿಗುವ ಗೆಡ್ಡೆ ಗೆಣಸುಗಳನ್ನೂ ರಸಭರಿತವಾದ ಭೂತಾಳೆ ಕತ್ತಾಳೆ ಎಲೆಗಳನ್ನೂ ಬೇಯಿಸಿಯೋ ಬೇಯಿಸದೆಯೋ ಆಹಾರವಾಗಿ ತಿನ್ನುತ್ತಿದ್ದುದರಿಂದ ಉಪವಾಸ ಭಂಗವಾಗುತ್ತಿತ್ತು. ಈ ಎಲ್ಲಾ ಕಾರಣಗಳೂ ಸೇರಿ ಇಲ್ಲದವರ ಇಲ್ಲೋಪವಾಸವನ್ನು ವ್ರತಗಳಲ್ಲಿ ಒಂದು ಎಂದು ವಿದ್ವಾಂಸರು ಒಪ್ಪಿಕೊಳ್ಳುತ್ತಿರಲಿಲ್ಲ. ಆದ್ದರಿಂದ ತಾನೆ ಈ ವ್ರತಾಚರಣೆಗೆ ದ್ವೀಪದ ವಾರ್ತಾ ಫಲಕ ಸಂಪಾದಕರುಗಳೂ ಧ್ವನಿ ವಾರ್ತಾ ಪ್ರಸಾರ ಡಂಗುರಕಾರರೂ ಯಾವ ಮನ್ನಣೆಯನ್ನೂ ಕೊಡುತ್ತಿರಲಿಲ್ಲವಂತೆ (ಪ್ರಜಾತಂತ್ರ ಭಾರತದಲ್ಲಿ ಕಾಣದಿದ್ದರೂ ಅದೇ ಕಾಲದಲ್ಲಿ ನಾಥ ದ್ವೀಪದಲ್ಲಿ ಜನಗಳು ಬಳಸುತ್ತಿದ್ದ ಈ ಆಶ್ಚರ್ಯಕರವಾದ ಸಮಾಚಾರ ಪ್ರಸಾರದ ವಿಧಾನದ ಬಗ್ಗೆ ಮುಂದೊಂದು ಸಂದರ್ಭದಲ್ಲಿ ವಿಶದವಾಗಿ ತಿಳಿಯೋಣ). ನಾಥ ಪೌರಾಣಿಕರು ದ್ವೀಪವನ್ನೆಲ್ಲಾ ಸುತ್ತಾಡಿಕೊಂಡು ಬರುತ್ತಿದ್ದ ಕಾಲದಲ್ಲೇ ಗೋಧೂಮ-ಪರ್ವತ ಜಿಲ್ಲೆಯಲ್ಲಿ ಮಳೆ ಸಾಲದೆ ಬೆಳೆ ಅರ್ಧಂಬರ್ಧ ಹಾಳಾಗಿ ನಾಥ ವರ್ಗೀಯರಿಗೆ ಕೂಲಿ ನಾಲಿ ಸಿಗದೆ ದಿನಂಪ್ರತಿ ನೂರು ನೂರಾಐವತ್ತು ಮಂದಿ ಹಸಿವಿನಿಂದ ಸಾಯುತ್ತಿದ್ದರು. ಈ ಮಾತುಗಳು ಒಂದೂ ಗೋಧೂಮವಾರ್ತಾ ಫಲಕದ ದೈನಿಕ ಸಂಚಿಕೆಯಲ್ಲಾಗಲಿ ಅಥವಾ ಗೋಧೂಮ ಪುರಸಭೆಯ ಡಂಗುರಕಾರರು ನಿತ್ಯವೂ ಗೊತ್ತಾದ ವೇಳೆಯಲ್ಲಿ ರಾಜವೀಥಿಗಳಲ್ಲಿ ನಿಂತು ಡಂಗುರವಾದ್ಯ ಧ್ವನಿಯೊಡನೆ ಪ್ರಸರಿಸುತ್ತಿದ್ದ ದೈನಿಕ ನಗರವಾರ್ತಾ ಅಥವಾ ಜಿಲ್ಲಾ ವಾರ್ತೆಗಳಲ್ಲಾಗಲಿ ತಲೆ ಹಾಕಲಿಲ್ಲ. ಆದರೆ ನಗರದ ಮುನ್ನಿಗ ಯುವಜನ ಮುಖಂಡರಾದ ರಾಮು, ಲಕ್ಷ್ಮಣ, ಶತ್ರಸೇನರು ನಗರಸಭೆಯ ನಾಥ ವರ್ಗೀಯ ನೌಕರರ ಮಾಸಿಕ ವೇತನವನ್ನು ೧೦ ತಾಮ್ರ ವರಹಗಳಿಂದ ೧೨ಕ್ಕೆ ಏರಿಸದಿದ್ದರೆ ತಾವೂ ತಮ್ಮ ಏಳು ಜನ ಅನುಯಾಯಿಗಳೂ ಹೂಡುವುದಾಗಿದ್ದ ೪೮ ಗಂಟೆ ಕಾಲದ ಘೋರ



ವೈಜ್ಞಾನಿಕ ದೃಷ್ಟಿಕೋಣ ಮೊಂಪಟ್ಟಾಗುವುದು.

"ಪುಷ್ಪಗಳಲ್ಲಿ ಪರಾಗ ಕ್ರಿಯೆಯಾಗಿ ಹೂವಿನ ಅಂಡಾಶಯ ಕಾಯಾಗಿ ಪರಿವರ್ತನೆಯಾದ ನಂತರ ಅದು ಬೆಳೆದು ಬರುವುದೇ ಫಲ. ಇದು ಉಪವಾಸದ ದಿನ ಫಲಾಹಾರಕ್ಕೆ ಯೋಗ್ಯವಾದದ್ದು. ಪುಷ್ಪಗಳಾಗದೆ, ಕಾಯಾಗದೆ, ನೆಲದಲ್ಲೇ ಅಡಗಿ ಬೆಳೆಯುವ ಕಂದ ಮೂಲಾದಿಗಳನ್ನೂ 'ಗುಪ್ತಫಲ' ಗಳೆಂದು ಗಣಿಸಬೇಕು.

"ನಿತ್ಯಾಹಾರವಾಗದೆ ಅಪರೂಪವಾಗಿ ಆಹಾರವಾಗಿ ಉಪಯೋಗಿಸುತ್ತಿರುವ ವಸ್ತುಗಳನ್ನು ಫಲಾಹಾರಗಳೆಂದು ಗಣಿಸಬಹುದು. ನಿತ್ಯ ಗೋಧಿ ತಿನ್ನುವವರಿಗೆ ಅಕ್ಕಿ ರಾಗಿ ಜೋಳಗಳೂ, ಹಾಗೆಯೇ ಅಕ್ಕಿ ತಿನ್ನುವವರಿಗೆ ಗೋಧಿ ಮುಂತಾದುವೂ ಫಲಾಹಾರ ಯೋಗ್ಯ. ಅವಲಕ್ಕಿ ಮತ್ತು ದ್ವಿದಳ ಧಾನ್ಯಗಳು ಸರ್ವತ್ರರಿಗೂ ಫಲಾಹಾರ ಯೋಗ್ಯ.

"ನೀರಿನಲ್ಲಿ ಬೇಯಿಸದೆ, ಹಾಲಿನಲ್ಲಿ ಬೇಯಿಸಿಯೋ ಅಥವಾ ತುಪ್ಪ-ಎಣ್ಣೆಗಳಲ್ಲಿ ಕರಿದೋ ಮಾಡುವ ದುಗ್ಧ ಪಕ್ವ, ತೈಲ ಪಕ್ವ, ಘೃತ ಪಕ್ವ ಪದಾರ್ಥಗಳು ಯಾವಾಗಲೂ ಉಪವಾಸದ ದಿನ ಫಲಾಹಾರ ಯೋಗ್ಯ ವಸ್ತುಗಳು. ಇವುಗಳ ಫಲ ಅದಕ್ಕೂ ನಿರಾಹಾರೋಪವಾಸಕ್ಕೆ ಇರುವಷ್ಟೇ ಫಲ ಇದೆ. ಇದು ಶಾಸ್ತ್ರಸಮ್ಮತ."

ಹೀಗೆ ಹೇಳಿದ ಅನುಕೂಲಾಚಾರ್ಯರ ನಿಬಂಧನ ಮಾತುಗಳನ್ನು ನಾಥದ್ವೀಪದ ನಾಗರ - ಮುನ್ನಿಗ ವರ್ಗದ ಆಹಾರಶೀಲ ರಕ್ಷಕರು ಕಟ್ಟುನಿಟ್ಟಾಗಿ ಆಚರಿಸುತ್ತಿದ್ದಂತೆ. ನಿತ್ಯ ಅಕ್ಕಿ ಅನ್ನ ಊಟ ಮಾಡುತ್ತಿದ್ದ ವ್ರತಿಗಳು ಏಕಾದಶಿ ಫಲಾಹಾರೋಪವಾಸ ವ್ರತಕ್ಕೆ ಪೂರಿ ಪಲ್ಯ, ಚಪಾತಿ ಸಾಗು, ರವೆ ಉಪ್ಪಿಟ್ಟು, ರವೆ ದೋಸೆ-ಇಡ್ಲಿ ಉತ್ತಪ್ಪ, ಸಾಮೋಸಾ (ಸಹ ಮೋದ)ಗಳೂ ಗೋಧಿಯೇ ಮುಖ್ಯಾಹಾರವಾದ ಜನಗಳಿಗೆ ಫಲಾಹಾರಕ್ಕಾಗಿ ಅಕ್ಕಿ ತರಿ ಉಪ್ಪಿಟ್ಟು, ದೋಸೆ, ಇಡ್ಲಿ, ಹುಳಿಯನ್ನ-ಮೊಸರನ್ನಾದಿಗಳೂ ನಿಯಮವಾಗಿದ್ದವು. ದುಗ್ಧಪಕ್ವ ಪದಾರ್ಥಗಳಲ್ಲಿ ಒಂದು ತೊಟ್ಟು ನೀರೂ ಕಾಣಿಸದೆ ಪೂರಾ ಮಹಾ ಮಾಹೀ ದುಗ್ಧದಲ್ಲೇ ಧಾರಾಳವಾಗಿ ತುಪ್ಪ ಹಾಕಿ ಬೇಯಿಸಿ ಮಾಡಿದ ರವೆ ಸೀಸಜ್ಜಿಗೆ, ಶಾಲ್ಯಾನ್ನ ಬೆಲ್ಲದನ್ನ, ಪೊಂಗಲ್ ಅಥವಾ ಸಕ್ಕರೆ ಪೊಂಗಲ್‌ಗಳಿಗೆ ಮನ್ನಣೆ ಸಿಕ್ಕಿತ್ತು.

ತುಪ್ಪದಲ್ಲಿ ಕರಿದು ಮಾಡುವ ಪದಾರ್ಥಗಳಲ್ಲಿ ಜಿಲೇಬಿ, ಜಾಂಗ್ರಿ - ಜಹಾಂಗೀರ್ - ಅಮೃತಿ, ಚಿರೋಟಿ, ಮೇಸು,' ಪೇಣಿ-ಪದರ ಪೇಣಿ, ಮೈಸೂರುಪಾಕ್, ಬಾದಾಮಿ ಹಲ್ವಾ, ಸೋನ್ ಹಲ್ವಾ, ಗೋಧಿ ಹಲ್ವಾ ಮುಂತಾದ ಸಿಹಿ ಪದಾರ್ಥಗಳನ್ನೂ ಎಣ್ಣೆಯಲ್ಲಿ ಮಾಡುವ ಮಸಾಲೆವಡೆ (ಈರುಳ್ಳಿ ರಹಿತ) ಮದ್ದೂರುವಡೆ, ಅಂಬೋಡೆ, ಕಲ್ಲೊಡೆ-ಹಲ್ಲೊಡೆ, ಸತ್ತೂರು ಯಾ- ಅತ್ತೂರು ಉದ್ದಿನವಡೆ, ಬೊಂಬಾಯಿ ಅಥವಾ ಮೈಸೂರು ಬೋಂಡ, ಮುಳ್ಳು ಚಕ್ಕುಲಿ, ನಿಮ್ಮರ್ಳ್ಳು ಚಕ್ಕುಲಿ, ಕೋಡು ಬಳೆ, ಖಾರಾ ಸೇವ್, ಮುಂತಾದ ನಮ್ಕೀನ ಪದಾರ್ಥಗಳನ್ನೂ ಅನುಕೂಲಾಚಾರ್ಯರು ಸಮ್ಮೋದಿಸಿದ್ದಾರೆ. ಅವಲಕ್ಕಿಯನ್ನು ಫಲಾಹಾರವನ್ನಾಗಿ ಸೇವಿಸಲು ಆ ಬಾಲವೃದ್ಧರಾಗಿಯಾಗಿ ಉತ್ತರ ದಕ್ಷಿಣದವರಿಬ್ಬರಿಗೂ ಸಮ್ಮತಿ ಇತ್ತು. ದಂತ ರಹಿತರಿಗೆ ಅವಲಕ್ಕಿಯನ್ನು ಮೊಸರಿನಲ್ಲಿ ಒಂದೆರಡು ತಾಸು ನೆನೆಸಿಯೂ, ದಂತ ಸಹಿತರಿಗೆ ಅದನ್ನು ತುಪ್ಪದಲ್ಲಿ ಕರಿದು ಉಪ್ಪು ಖಾರ ಹಾಕಿಯೂ ಸೇವಿಸಲು ಸೂಚನೆಯಿತ್ತಿದ್ದರು. ದ್ವಿದಳ ಧಾನ್ಯಗಳನ್ನೂ ಅವುಗಳ ಬೇಳೆಗಳನ್ನೂ ಬೇಯಿಸಿ ಉಸಲಿಯನ್ನಾಗಿ ಫಲಾಹಾರದ ದಿನ ಸೇವಿಸಲು ದಂತರಹಿತರಿಗೂ, ಕಡಲೆ ಬೇಳೆ ಹೆಸರು ಬೇಳೆಗಳನ್ನು ನೆನೆಸಿ ತೆಂಗಿನಕಾಯಿ ತುರಿ, ಕೊತ್ತಂಬರಿ, ಹಸಿಮೆಣಸಿನಕಾಯಿ, ನಿಂಬೆ ಹಣ್ಣು ಹಾಕಿ ಒಗ್ಗರಿಸಿ ಕೋಸಂಬರಿಯನ್ನು ರೂಪದಲ್ಲಿ ಸೇವಿಸಲು ದಂತ ಸಹಿತರಿಗೂ ಅನುಮತಿಯಿತ್ತು. ಹೀಗೆ ನಾಥದ್ವೀಪದಲ್ಲಿ ಉಪವಾಸವ್ರತವನ್ನು ಫಲಾಹಾರ ರೀತ್ಯಾ ಮಾಡಿ ಕೃತಕೃತ್ಯರಾಗುವಂತೆ ಮಾಡಿದ ಅನುಕೂಲಾಚಾರ್ಯರು ಆಚಾರ್ಯ ಪಟ್ಟಕ್ಕೆ ಬರುವ ಮೊದಲು ದ್ವೀಪದ ಮುಖ್ಯ ಪಾಕಶಾಲಾಧಿಕಾರಿಗಳೋ ಅಥವಾ ಅಲ್ಲಿಯ ವಿಶ್ವವಿದ್ಯಾಲಯದ ಆಹಾರ ವಿಜ್ಞಾನ ವಿಭಾಗದ ಮುಖ್ಯೋಪಾಧ್ಯಾಯರಾಗಿಯೋ ಇದ್ದಿರಬೇಕು. ಆದರೆ ಈ ಕುತೂಹಲಜನಕವಾದ ವಿಷಯದ

ಬಗ್ಗೆ ನಾಥ ಪೌರಾಣಿಕರು ಏನೂ ಹೇಳಿಲ್ಲ.

ಫಲಾಹಾರಕ್ಕೆ ಇಷ್ಟೇ ತಿನ್ನಬೇಕು ಎಂಬ ಮಿತಿ ಇರಲಿಲ್ಲ. ಹೊಟ್ಟೆ ತುಂಬುವುದಕ್ಕೆ ಸ್ವಲ್ಪ ಮುಂಚೆ ಫಲಾಹಾರ ಮುಗಿಸಿ ಕೈತೊಳೆದುಕೊಳ್ಳಬೇಕು ಎಂಬ ನಿಯಮವಿತ್ತು. ಕೆಲ ಪಂಗಡಗಳಲ್ಲಿ ಫಲಾಹಾರಕ್ಕಾಗಿ ನೆಲದ ಮೇಲೆ ಎಲೆ ಹಾಕಿಕೊಂಡು ಕುಳಿತುಕೊಳ್ಳಕೂಡದೆಂದೂ ಒಂದು ಬಿಡಿ ಪಲಾಶಪತ್ರವನ್ನೋ ಅಥವಾ ಮೂರು ಉಪಪತ್ರಗಳನ್ನು ಹಚ್ಚಿ ಮಾಡಿದ ತ್ರಿಪತ್ರಾವಳಿಯನ್ನೋ ಕೈಯಲ್ಲಿ ಎತ್ತಿ ಹಿಡಿದು ಅದಕ್ಕೆ ಒಂದು ಸಲ ತುಂಬುವಷ್ಟು ಮಾತ್ರ ಹಾಕಿಸಿಕೊಂಡು ಅದನ್ನುಂಡು ಫಲಾಹಾರ ಮುಗಿಸಬೇಕೆಂಬ ವಿಧಿ ಇತ್ತು. ಆದ್ದರಿಂದ ಈ ಏಕ ಅಥವಾ ತ್ರಿಪಲಾಶ ಪತ್ರ ಫಲಾಹಾರಿಗಳು ತಾವೇ ಕಾಡಿಗೆ ಹೋಗಿ ಆದಷ್ಟು ದೊಡ್ಡ ಪತ್ರಗಳನ್ನು ಆರಿಸಿಕೊಂಡು ಬರುತ್ತಿದ್ದರಂತೆ.

ಈ ಎಲ್ಲಾ ಕಾರಣಗಳಿಂದಾಗಿ ಕಾರಿಸ–ಮನ್ನಿಗ ವರ್ಗಗಳಲ್ಲಿ ಫಲಾಹಾರ ಸಹಿತ ಮಾಡುವ ಉಪವಾಸ ವ್ರತಗಳಿಗೆ ಬಹಳ ಮನ್ನಣೆ ಇತ್ತು. ಮನೆಯಲ್ಲಿ ಇಂತಹ ವ್ರತಿಗಳಿದ್ದರೆ ಈ ವ್ರತದಲ್ಲಿ ಮಕ್ಕಳೂ ಬಹಳ ಉತ್ಸಾಹ ತೋರಿಸುತ್ತಿದ್ದರು. ಆದರೂ ಅನುಕೂಲಾಚಾರ್ಯರ ಕಾಲಕ್ಕೂ ಹಿಂದೆ ಆಚರಣೆಯಲ್ಲಿದ್ದ ಹಳೇ ಕಂದಾಚಾರಗಳನ್ನು ಅನುಸರಿಸುತ್ತಿದ್ದ ಅನೇಕ ಕೂಪಕೂರ್ಮವಾದಿಗಳಿದ್ದರಂತೆ. ಇದರಲ್ಲಿ ಕೆಲವರು ಉಪವಾಸದ ದಿನ ಹಲ್ಲುಜ್ಜುವಾಗ ಬಾಯಿ ಮುಕ್ಕಳಿಸುತ್ತಾ ಒಂದೆರಡು ತೊಟ್ಟು ನೀರು ಅನಿವಾರ್ಯವಾಗಿ ಗಂಟಲೊಳಗೆ ಹಾದು ಹೋಗಿದ್ದನ್ನು ಬಿಟ್ಟರೆ ಬೇರೆ ಒಂದು ತೊಟ್ಟು ನೀರು ಸಹಿತ ತೆಗೆದುಕೊಳ್ಳುತ್ತಿರಲಿಲ್ಲ. ಮತ್ತೆ ಕೆಲವರು ಈ ಸಂದರ್ಭ ಕೂಡ ಬಾರದಿರಲೆಂದು ಆ ದಿನ ಹಲ್ಲುಜ್ಜುವವನ್ನೂ ನಿಷೇಧಿಸಿದ್ದರು. ಇನ್ನೂ ತೀವ್ರೋಪವಾಸಿಗಳು ಕೆಲವರು ಉಗುಳು ನುಂಗಿದರೂ ಉಪವಾಸವ್ರತ ಕೆಟ್ಟಂತೆ ಎಂದು ತಿಳಿದು ಬಾಯಲ್ಲಿ ಸೇರುವ ಉಗುಳನ್ನು ಆಗಾಗ ಹೊರಗೆ ಹೋಗಿ ಉಗುಳಿ ವ್ರತ ಪಾಲಿಸಿಕೊಳ್ಳುತ್ತಿದ್ದರಂತೆ. ಇವನ್ನೆಲ್ಲಾ ಕಂಡಿದ್ದ ಅನುಕೂಲಾಚಾರ್ಯರು ತಾವು ಹೇಳಿದ ಅನುಕೂಲಾಚಾರದ

ಸತ್ಯತೆಯನ್ನು ತಮ್ಮ ಗ್ರಂಥದಲ್ಲಿ ಒಂದು ಕಡೆ ಹೀಗೆ ಹೇಳಿದ್ದರಂತೆ:

"ಜ್ಞಾನಾರ್ಜನೆ ಮಾಡದೆಯೇ ಬರೀ ಉಪವಾಸ ಮಾಡಿ ಖಾಲಿ ಹೊಟ್ಟೆಯಲ್ಲಿ ಪುಣ್ಯಗಳಿಸಿ ಮೋಕ್ಷ ಸಾಧಿಸಲು ಸಾಧ್ಯ ಎನ್ನುವುದು ಶುದ್ಧ ಮೌಢ್ಯದ ಮಾತುಗಳು. ಮನುಷ್ಯನ ದೇಹದಲ್ಲಿ ಜ್ಞಾನ ಸಂಪಾದನೆಗೆ ಮೀಸಲಾದ ಅಂಗ ಮಸ್ತಿಷ್ಕ. ಸಾಕಷ್ಟು ಪೋಷಣೆಯಿಲ್ಲದಿದ್ದರೆ ಮಸ್ತಿಷ್ಕ ಜ್ಞಾನಾರ್ಜನೆಯಲ್ಲಿ ತೊಡಗುವುದಿಲ್ಲ. ಉಪವಾಸದ ದಿನಗಳಲ್ಲಿ ದಿನವಹಿ ಸೇವಿಸುವ ಆಹಾರವನ್ನು ವರ್ಜಿಸಿ ಅದಕ್ಕೆ ಬದಲಾಗಿ ಮಸ್ತಿಷ್ಕಕ್ಕೆ ಪೋಷಕ ದ್ರವ್ಯಗಳನ್ನು ಒದಗಿಸುವಂತಹ ವಿಶೇಷ ಆಹಾರವನ್ನು ತೆಗೆದುಕೊಳ್ಳಬೇಕು. ಅದೇ ಫಲಾಹಾರದ ಗುಟ್ಟು. ಆದ್ದರಿಂದಲೇ ದೇಹ ಶೋಷಣೆಯ ನಿರಾಹಾರೋಪವಾಸಕ್ಕಿಂತ ಮಸ್ತಿಷ್ಕಕ್ಕೆ ಪೋಷಣೆಯ ಫಲಾಹಾರೋಪವಾಸವು ಶ್ರೇಯಸ್ಕರ" ಎಂದು ಪ್ರಾರಂಭಿಸಿ ನಂತರ ತಾನೆ ನಾವು ಹಿಂದೆ ಹೇಳಿದಂತೆ 'ಫಲ' ಎನ್ನುವ ಮಾತಿನ ಅರ್ಥಾಂತರಗಳನ್ನು ಮಂಡಿಸಿದ್ದಾರೆ.

ನಾಥದ್ವೀಪವಾಸಿಗಳಿಗೆ ಫಲಾಹಾರೋಪವಾಸವನ್ನು ಆಚರಿಸಲು ಸಹಾಯವಾಗುವಂತೆ ಅನುಕೂಲಾಚಾರ್ಯ ವಂಶಪರಂಪರೆಗೆ ಸೇರಿದ ಧರ್ಮಾಚಾರ್ಯ (ಅಥವಾ ಮಹರಾಜ್ ಅಥವಾ ನಳಪುತ್ರ) ರೆಂಬ ಪಶ್ಚಿಮ ನಾಥದ್ವೀಪ ತೀರವಾಸೀ ಬ್ರಾಹ್ಮಣೋತ್ತಮರು ಅಲ್ಲಲ್ಲೇ ಫಲಾಹಾರ ಮಂದಿರಗಳನ್ನು ಸ್ಥಾಪಿಸಿ ವ್ರತಧಾರಿಗಳು ದಕ್ಷಿಣೆಯಾಗಿ ಕೊಡುತ್ತಿದ್ದ ಕೆಲವು ತಾಮ್ರ ಅಥವಾ ಬೆಳ್ಳಿ ವರಾಹಗಳನ್ನು ಸ್ವೀಕರಿಸಿ ವ್ರತಿಯ ನಿಯಮಗಳಿಗೆ ಸೂಕ್ತವಾದ ಫಲಾಹಾರ ಸಾಮಗ್ರಿಗಳನ್ನು ಮಾಡಿಕೊಡುವ ಏರ್ಪಾಡು ಕಲ್ಪಿಸಿದ್ದರು. ಅದೇ ದ್ವೀಪಾಂತ್ಯದ ಭಾರತ ಈ ದೃಷ್ಟಿಯಲ್ಲಿ ಬಹಳ ಹಿಂದುಳಿದಿತ್ತು. ಫಲಾಹಾರಿಗೆ ಮನೆಯೇ ಗತಿ. ಇಲ್ಲವೇ ಯಾರಾದರೂ ಅತಿಥಿಗಾಗಿಡಲು ಹೋಗಿದ್ದರೆ ಕುಡಿಕೆ ಹಣ ಕೊಟ್ಟರೂ ಒಂದು ಹೊತ್ತಿನ ಫಲಾಹಾರ ಸಿಗದೆ ಫಲಾಹಾರ ರಹಿತವಾದ ಉಪವಾಸದಿಂದ ಸಾಯಬೇಕಾಗಿತ್ತು.

ರಾಮಾಜನವೆಂಬ ಪಂಗಡದವರಿಗೆ ಆ ಹೆಸರು

ಕ್ರಮದಲ್ಲಿ ಹೆಚ್ಚು ಕಡಿಮೆ ಆಗಿ ಹೊಟ್ಟೆ ಕೆಡಬಹುದಿತ್ತು. ಆಗ ವೈದ್ಯರು ವಿಧಿಸುವ ಉಪವಾಸವನ್ನೂ ಅತ್ಯಲ್ಪ ಫಲಾಹಾರ ರೀತ್ಯಾ ಮಾಡಬೇಕಾಗಿತ್ತು. ಪುರಾತನ ನಾಥದ್ವೀಪದಲ್ಲೂ ಈ ಸಂದರ್ಭದಲ್ಲಿ ಹಾಲು ರವೆ ಗಂಜಿ, ಖೀರು ಇವುಗಳಿಗೆ ಮನ್ನಣೆ ಇತ್ತು.

ಇಚ್ಛೋಪವಾಸ, ಉಚ್ಛೋಪವಾಸ, ವೈದ್ಯೋಪವಾಸಗಳ ವಿಚಾರ ನಾಥ ಪೌರಾಣಿಕರು ವಿವರಿಸಿದ ಮೇಲೆ ಮಹೋಪವಾಸದ ಬಗ್ಗೆ ವಿಶದವಾದ ವಿವರಣೆ ಇತ್ತಿದ್ದಾರೆ. ಮೊದಲ ಮೂರು ಉಪವಾಸ ವಿಧಿಗಳು ವ್ಯಕ್ತಿಯ ಕಲ್ಯಾಣಕ್ಕೋಸ್ಕರ ಆಚರಿಸಬೇಕಾಗಿತ್ತು. ಆದರೆ ಮಹೋಪವಾಸವು ಒಟ್ಟು ಪ್ರಜಾಹಿತಕ್ಕಾಗಿ—ಅದರಲ್ಲೂ 'ದರಿದ್ರನಾರಾಯಣ'ನೆಂದು ಹೆಸರು ಹೊತ್ತ ಕಡು ಬಡವರಾದ ನಾಥವರ್ಗದ ಏಳ್ಗೆಗಾಗಿ—ಕಾರಿಗ—ಮನ್ನಿಗ ವರ್ಗದ ಮಹಸೀಯನು ನಡೆಸುತ್ತಿದ್ದ ವ್ರತ. ಮೊಟ್ಟಮೊದಲು ಇದನ್ನು ಸತ್ಯೋಪವಾಸವೆಂಬ ರೂಪದಲ್ಲಿ ಸತ್ಯಪ್ರೇಮಿ ಋಷಿಗಳು ಆಚರಿಸುತ್ತಿದ್ದರು. ಅವರು ಉಪವಾಸ ಕಾಲದಲ್ಲಿ ದಿನವಹಿ ಊಟವೆಂದರೆ ಮೂರು ನಾಲ್ಕು ಒಣಕಲು ಗೋಧಿ ರೊಟ್ಟಿ, ನಂಜಿಕೊಳ್ಳಲು ನಾಲ್ಕಾರು ನೆಲಗಡಲೆ ಬೀಜ, ಒಂದು ಚೂರು ಬೆಲ್ಲ, ಒಂದು ಲೋಟ ಆಡಿನ ಹಾಲು—ಪೂರಾ ವರ್ಜಿಸಿ ಬೇಕಾದಷ್ಟು ನೀರು, ವೈದ್ಯರ ಕೋರಿಕೆಯಂತೆ ಆಗಾಗ ನೀರಿಗೆ ಒಂದೆರಡು ಚಿಟಕಿ ಉಪ್ಪು ಒಂದು ಚಮಚ ನಿಂಬೆ ಹಣ್ಣಿನ ರಸ ಮಾತ್ರ ಸೇವಿಸುತ್ತಾ ಬಂದು, ಇಪ್ಪತ್ತೊಂದು ವಾರ ಪೂರಾ ನಿರಾಹಾರಿಯಾಗಿರುತ್ತಿದ್ದರು. ಅವರು ಉಪವಾಸಕ್ಕೆ ಕುಳಿತಾಗ ಅವರ ಪ್ರೀತಿಯ ಆಡೂ ಏನನ್ನೂ ತಿನ್ನುತ್ತಿರಲಿಲ್ಲ ಎಂದು ಅವರ ಅನುಯಾಯಿಗಳು ನಾಥ ಪೌರಾಣಿಕರಿಗೆ ತಿಳಿಸಿದ್ದಾರಂತೆ. ಅದು ನಿಜವಾಗಿರಬಹುದು. ಅಥವಾ ಮೂಕ ಪ್ರಾಣಿಗಳಿಗೂ ಸತ್ಯಪ್ರೇಮಿಗಳ ಪ್ರಭಾವ ಮುಟ್ಟಿತ್ತೆಂದು ಸ್ವಲ್ಪ ಉತ್ಪ್ರೇಕ್ಷಿಸಿ ಹೇಳಿದ ದಂತಕಥೆ ಇದ್ದಿರಬಹುದು. ಅನಾಥ [ದ್ವೀಪಕ್ಕೆ (ಈ ದ್ವೀಪದ ಸ್ವಾತಂತ್ರ್ಯಪೂರ್ವ ಹೆಸರು) ಸ್ವಾತಂತ್ರ್ಯ ಕೊಟ್ಟು, ನಾಥದ್ವೀಪವಾಗಿ ಮಾಡಿದ ಶ್ವೇತೀಯರು ತಮ್ಮ ದ್ವೀಪಕ್ಕೆ ವಾಪಸ್ಸು ಹೊರಟ ಕೆಲವೇ ದಿನಗಳಲ್ಲಿ ತಮ್ಮ ಅವತಾರದ ಮುಖ್ಯ ಉದ್ದೇಶ ಸಫಲವಾಯಿತೆಂದು ತಿಳಿದು ಸತ್ಯಪ್ರೇಮಿಗಳು ದೈವಾಧೀನರಾದರು. ಈ ಮಹಾ ಪುರುಷರ ಮುಖ್ಯ ಅನುಯಾಯಿಗಳು ಸಭೆ ಸೇರಿ ಅವರ ನೆನಪನ್ನು ಯಾವ ರೀತಿಯಲ್ಲಿ ಜನಗಳ ಮನಸ್ಸಿನಲ್ಲಿ ಅಳಿಯದೆ ಬೇರೂರುವಂತೆ ಮಾಡಬಹುದು ಎಂದು ಯೋಚಿಸಿ ಕಡೆಗೆ ಇನ್ನೂ ಸಫಲವಾಗದೆ ನಿಂತ ಅವರ ಎರಡನೆಯ ಉದ್ದೇಶ – ನಾಥವರ್ಗದ ಏಳಿಗೆ – ಸಾಧಿಸಬೇಕು, ಇದಕ್ಕೆ ಶ್ವೇತೀಯರಿಂದ ಕಲಿತ ಪ್ರಜಾಪ್ರಭುದೇವನ ಪೂಜಾಕ್ರಮದಲ್ಲಿ ಸತ್ಯಪ್ರೇಮಿಗಳು ಆಚರಿಸುತ್ತಿದ್ದ ಸತ್ಯೋಪವಾಸವನ್ನು ಅಳವಡಿಸಿ ಅವರ ಮೂಕ ನಾಥಜನ ಸೇವೆ ನಡೆಸಬೇಕು ಎಂದು ತೀರ್ಮಾನಿಸಿದರು. ಸತ್ಯಪ್ರೇಮಿಗಳ ಸತ್ಯೋಪವಾಸವು ಮಹೋಪವಾಸವಾಗಿ ಬೇಗನೆ ಉಪವಾಸ ಮಹೋತ್ಸವವಾಗಿ ಪರಿವರ್ತಿತವಾಯಿತು.

ನಾಥವರ್ಗದ ಏಳಿಗೆಗಾಗಿ ನಡೆಸಬೇಕಾಗಿದ್ದ ಪ್ರಪ್ರಥಮ ಕೆಲಸ ಅವರಿಗೆ ಪ್ರಜಾಪ್ರಭು ಜಾತ್ರೆಯಲ್ಲಿ ಕಡೆಯ ದಿನ ಮಂದಿರದ ಗರ್ಭಗೃಹದವರೆಗೂ ಹೋಗಿ ಅಲ್ಲಿಟ್ಟಿರುವ ಗೋಲಕಗಳಲ್ಲಿ ತಮ್ಮ ತಮ್ಮ ಮತ ಬಿಲ್ಲೆಗಳನ್ನು ಹಾಕುವ ಸ್ವಾತಂತ್ರ್ಯ ಅವರಿಗೆ ಕೊಡಿಸುವುದು. ಸತ್ಯಪ್ರೇಮಿಗಳು ಕಾಲವಾದ ಕೆಲವೇ ವರ್ಷಗಳಲ್ಲಿ ಇದು ನಾಥರಿಗೆ ದೊರಕಿತು, ನಿಜ. ಅನೇಕ ಕಡೆಗಳಲ್ಲಿ ಕಾರಿಗ ಮನ್ನಿಗ ಅಭ್ಯರ್ಥಿಗಳೂ ಅವರ ಭೀಮಕಾಯರಾದ ಅನುಯಾಯಿಗಳೂ ಮಂದಿರದ ಮಹಾದ್ವಾರದಲ್ಲೇ ನಿಂತು ನಾಥಜನಗಳು ಒಳಗೆ ಪ್ರಜಾಪ್ರಭುವಿನ ದರ್ಶನ ಮಾಡಲು ಬಿಡುತ್ತಿರಲಿಲ್ಲ. ಅಥವಾ ಬಿಟ್ಟರೂ ಅವರಿಗೆ "ನಿಮ್ಮ ಮತದ ಬಿಲ್ಲೆಗಳನ್ನು ಇಂತಹ ನಮ್ಮ ಗುರುತಿರುವ ಗೋಲಕ ಪಾತ್ರೆಗಳಲ್ಲಿ ಹಾಕದಿದ್ದರೆ ನಿಮ್ಮ ತಲೆಗೆ ದೊಣ್ಣೆ ಸೇವೆ ಮಾಡುತ್ತೇವೆ," ಎಂದು ದೊಣ್ಣೆ ತೋರಿಸಿ ಈಗಲೂ ಹೆದರಿಸುತ್ತಿದ್ದಾರೆಂದು ನಾಥ ಪೌರಾಣಿಕರಿಗೆ ತಿಳಿದುಬಂದಿತಂತೆ. ಮಹೋಪವಾಸಗಳನ್ನು ಹೂಡಿ ಅಂತಹ ಅಸಭ್ಯ ಜನಗಳ ಮನಸ್ಸನ್ನು ಪರಿವರ್ತಿಸಲು ಎಷ್ಟೋ ಪ್ರಯತ್ನ

ನಡೆದಿತ್ತಂತೆ. ಇನ್ನು ಕೆಲವು ಶತಮಾನಗಳಲ್ಲೇ ಇದು ಸಫಲವಾಗಬಹುದು ಎಂದು ನಂಬಿಕೆಯಿತ್ತಂತೆ.

ನಾಥಜನರಿಗೆ ವರ್ಷವೆಲ್ಲ ದಿನವೂ ಒಂದು ಹೊತ್ತಾದರೂ ಹೊಟ್ಟೆ ತುಂಬ ಊಟ ಸಿಗುವಂತೆ ಅವರಿಗೆ ಸಾಕಷ್ಟು ಭೂಮಿ ಅಥವಾ ವೃತ್ತಿ ಕೊಡಿಸುವ ಏರ್ಪಾಡು, ಅವರಿಗೆ ಕುಡಿಯುವ ನೀರಿನ ಬಾವಿಗಳು, ಇರಲು ಗುಡಿಸಲುಗಳು, ಅವರ ಮಕ್ಕಳಿಗೆ ಕಡ್ಡಾಯ ಪ್ರಾಥಮಿಕ ಶಿಕ್ಷಣ ಮುಂತಾದ್ದನ್ನೆಲ್ಲ ಕ್ರಮೇಣ ಒಂದಾದ ಮೇಲೊಂದು ಕೊಡಿಸುವಂತೆ ದ್ವೀಪ ಸರ್ಕಾರವನ್ನು ಒತ್ತಾಯಪಡಿಸಲು ರಾಜಕೀಯ ಮುಖಂಡರು ಆಗಾಗ ಉಪವಾಸ ಮಹೋತ್ಸವಗಳನ್ನು ಕೈಗೊಳ್ಳುತ್ತಿದ್ದರು. ಈ ಉಪವಾಸ ಸಮಾರಂಭಗಳು ಬಹಳ ಸಂಭ್ರಮದಿಂದ ನಡೆಯುತ್ತಿದ್ದವೆಂದು ಅವನ್ನು ಕಣ್ಣಾರೆ ಕಂಡ ನಾಥ ಪೌರಾಣಿಕರು ಹೇಳಿ ಕೇಳಿದವನ್ನು ಕೆಳಕಂಡಂತೆ ವರ್ಣಿಸಿದ್ದಾರೆ.

ಪ್ರಾರಂಭದಲ್ಲಿ ಮುನ್ನಿಗ ಮುಖಂಡರು ನಾಥ ವರ್ಗದ ಸೇವೆಯ ಯಾವ ಒಂದು ಅಂಶವನ್ನಾದರೂ ಆರಿಸಿ ಅದನ್ನು ಸರ್ಕಾರ ಕೂಡಲೇ ನೆರವೇರಿಸಬೇಕೆಂದು ಒತ್ತಾಯಪಡಿಸುವುದಲ್ಲದೆ ಒಂದು ವಾರ ಅಥವಾ ತಿಂಗಳು ಅಥವಾ ವರ್ಷ ಕಾಲದಲ್ಲಿ ಆ ಬೇಡಿಕೆಯನ್ನು ನೆರವೇರಿಸದಿದ್ದರೆ ತಾವು (ಅಥವಾ ತಾವೂ ತಮ್ಮ ಅನುಯಾಯಿಗಳೂ ಸಹ ಇರಬಹುದು, ಕೆಲವು ಸಂದರ್ಭಗಳಲ್ಲಿ) ಆಮರಣಾಂತ ಉಪವಾಸವನ್ನು ಹೂಡುವದಾಗಿ ಡಂಗುರ ಪ್ರಸಾರಗಳ ಮೂಲಕವೂ ಸ್ಥಳೀಯ ವಾರ್ತಾ ಫಲಕಗಳ ಮೂಲಕವೂ ಹೇಳಿಕೊಡುತ್ತಿದ್ದರು. ಈ ಬೇಡಿಕೆಗಳು ಆ ಮುಖಂಡರ ಅಂತಸ್ತಿನ ಪ್ರಕಾರ ಬಗೆ ಬಗೆಯಾಗಿರುತ್ತಿತ್ತು. ಸ್ಥಳೀಯ ಮುಖಂಡರು ತಮ್ಮ ಊರಿನ ನಾಥ ಕೇರಿಯಲ್ಲಿ ನಾಲ್ಕು ಕುಡಿಯುವ ನೀರಿನ ಬಾವಿಗಳನ್ನು ನಗರಸಭೆ ತೋಡಿಸಬೇಕು ಎಂದು ಬೇಡಿದರೆ ಜಿಲ್ಲಾ ಮುಖಂಡರು ನಾಥಬಾಲಕರಿಗೆ ಮಾಧ್ಯಮಿಕ ವಿದ್ಯಾಲಯದ ಪರೀಕ್ಷೆಯಲ್ಲಿ ತೇರ್ಗಡೆಯಾಗಲಿಲ್ಲವೆಂಬ ಸಬೂಬು ಉಪಯೋಗಿಸಿ ವಿದ್ಯಾರ್ಥಿವೇತನ ನಿಲ್ಲಿಸಕೂಡದು ಎಂದು ಬೇಡಬಹುದು. ನಾಥ ಪೌರಾಣಿಕರು ದ್ವೀಪದಲ್ಲಿದ್ದಾಗ ತಾನೇ ಕೇಂದ್ರ ಮುಖಂಡರೊಬ್ಬರು ನಾಥ ವಿದ್ಯಾರ್ಥಿಗಳಿಗೆ ಉಚ್ಚ ಶಿಕ್ಷಣ ಪಡೆಯುವುದರಲ್ಲಿದ್ದ ಕೆಲವು ಆತಂಕಗಳನ್ನು ನಿಗ್ರಹಿಸಲು ಕಂಕಣ ಕಟ್ಟಿ ನಿಂತಿದ್ದರಂತೆ. ಆಯುರ್ವೇದಾಚಾರ್ಯ ಪ್ರಶಸ್ತಿ ಪಡೆಯಲು ಅಭ್ಯಾಸ ಮಾಡಬೇಕಾಗಿದ್ದ ಚರಕ ಸುಶ್ರುತ ಸಂಹಿತೆಗಳ ಅಭ್ಯಾಸವಿಲ್ಲದೆಯೇ ನಾಥವರ್ಗದ ವಿದ್ಯಾರ್ಥಿಗಳು ಆ ಪ್ರಶಸ್ತಿ ಪಡೆಯಲಾಗುವಂತೆ ನಿಯಮಗಳಲ್ಲಿ ಬದಲಾವಣೆ ಮಾಡಬೇಕೆಂದು ಇವರು ಬೇಡಿ ಸರ್ಕಾರ ತಮ್ಮ ಬೇಡಿಕೆ ಸಲ್ಲಿಸದಿದ್ದರೆ ಆಮರಣಾಂತ ಉಪವಾಸ ಹೂಡುವುದಾಗಿ ಬೆದರಿಸಿದ್ದರಂತೆ. ಸಾಮಾನ್ಯವಾಗಿ ಉಪವಾಸಿಗಳ ಬೇಡಿಕೆಗಳ ಹಿಂದೆ ನಾಥವರ್ಗಕ್ಕೆ ಒಂದಲ್ಲ ಒಂದು ಅನುಕೂಲವನ್ನು ಕಲ್ಪಿಸಬೇಕು ಅಥವಾ ರಿಯಾಯಿತಿ ಕೊಡಿಸಬೇಕು ಎನ್ನುವ ಉದ್ದೇಶ ಇರುತ್ತಿತ್ತು. ಇದು ನಿಃಸ್ವಾರ್ಥ ಸೇವೆ. ಇದನ್ನು ನಡೆಸುವಾಗ ಪ್ರಾಣತ್ಯಾಗ ಮಾಡಬೇಕಾಗಿಯೂ ಬರಬಹುದಾಗಿತ್ತು. ಆದರೆ ಸ್ಥಿತಿ ಅಲ್ಲಿಯ ವರೆಗೂ ಬರಲು ಬಿಡುತ್ತಿರಲಿಲ್ಲ.

ಬೇಡಿಕೆಗೆ ಸರ್ಕಾರವು ಮಾನ್ಯತೆ ಕೊಡಲಿಲ್ಲವೆನ್ನೋಣ – ಸಾಮಾನ್ಯವಾಗಿ ಉಪವಾಸ ವ್ರತ ರಹಿತವಾದ ಬೇಡಿಕೆಗಳಿಗೆ ಮಾನ್ಯತೆ ಕೊಡುತ್ತಿರಲಿಲ್ಲ. ಆಗ ಬರಲಿರುವ ಮಹೋಪವಾಸದ ಬಗ್ಗೆ ವಾರ್ತಾ ಫಲಕಗಳ ಮೂಲಕವೂ ಡಂಗುರಕಾರರ ಮೂಲಕವೂ ಮುಖಂಡರು ಮಾಡಲಿರುವ ಉಪವಾಸದ ಬಗ್ಗೆ ನಿತ್ಯವೂ ಪ್ರಚಾರ ನಡೆಯುತ್ತಿತ್ತು. ಆರಂಭದಿನ, ಹೊತ್ತು, ಎಲ್ಲವನ್ನೂ ಮೊದಲೇ ಜ್ಯೋತಿಷಿಗಳನ್ನು ಕೇಳಿ ನಿಷ್ಕರ್ಷೆಮಾಡುತ್ತಿದ್ದರೂ (ನಾಥ ಪೌರಾಣಿಕರು ದ್ವೀಪವನ್ನು ಸಂದರ್ಶಿಸಿದ ಕಾಲದಲ್ಲಿ ರಾಜಕಾರಣಿಗಳಿಗೂ ಹೊನ್ನಿನ ಮಹಾಶಯರಿಗೂ ಜ್ಯೋತಿಷ್ಯದಲ್ಲಿದ್ದ ನಂಬಿಕೆ ಕಂಡು ಆಶ್ಚರ್ಯವಾಯಿತಂತೆ. ದ್ವೀಪಾಧ್ಯಕ್ಷರು ಯಾವ ಕೆಲಸ ಮಾಡಬೇಕಾದರೂ ಜ್ಯೋತಿಷಿಗಳು ಅಧ್ಯಕ್ಷರ ! ಜನ್ಮನಕ್ಷತ್ರಕ್ಕೆ ಮಾಡಬೇಕಾದ ಕೆಲಸದ ಗ್ರಹ ಸಂಪತ್ತಿಗೂ ಸೇರುವ ಕಾಲ ನಿರ್ಣಯ ಮಾಡಿದ ಮೇಲೆ ತಾನೆ ಅವರು,

# ಈಗ
# ಚೆಲುವಿಗೆ ಒಂದು ಕ್ಯಾಲಮೈನ್



# ಪಾಂಡ್ಸ್
## ಕ್ಯಾಲಮೈನ್ ಲೋಶನ್

**ಅರಳಿದ ಚೆಲುವನ್ನು ಕಾಪಾಡುತ್ತದೆ ತ್ವಚೆಗೆ ಆರೋಗ್ಯವನ್ನೂ ಹೊಳಪನ್ನೂ ಕೊಡುತ್ತದೆ**

ತ್ವಚೆಯ ಆರೋಗ್ಯದೊಂದಿಗೆ ಸೌಂದರ್ಯದ ಹೊಳಪು ನಿಮಗೆ ಬೇಡವೇ ? ಎರಡೂ ಲಾಭ ಪಡೆಯಲು ಇದೋ ಇಲ್ಲಿದೆ ಹೊಸ ಪಾಂಡ್ಸ್ ಕ್ಯಾಲಮೈನ್ ಲೋಶನ್. ನಿತ್ಯ ಕಂಡ ನಿರ್ಮಲ ಸೌಂದರ್ಯ, ನಿರಂತರ ಉಲ್ಲಾಸ, ತಂಗಾಳಿಯ ಹಿತಕರ ಶೀತಲತೆ ನೀಡುತ್ತದೆ. ಸಿಂಗರಿಸಿಕೊಳ್ಳುವ ಮೊದಲು, ನಂತರ, ಪ್ರತ್ಯೇಕವಾಗಿ ಉಪಯೋಗಿಸಲು ಸಿದ್ಧ ಸಾಧನ. ಪರಿಮಳಯುಕ್ತ, ಸೌಂದರ್ಯ ನೀಡುವ ಪಾಂಡ್ಸ್ ಕ್ಯಾಲಮೈನ್ ಲೋಶನ್.




ಪಾಂಡ್ಸ್

ಅವರಂತೆ ತಮ್ಮ ಅರಮನೆ ಬಿಟ್ಟು ಹೊರ ಬರುತ್ತಿದ್ದರು). ಉಪವಾಸವು ಪುರಸಭೆಯ ಮುಂದಿನ ಚೌಕ, ಅಥವಾ ಪ್ರಜಾಪ್ರಭು ಮಂದಿರದ ಮಹಾದ್ವಾರ, ಮುಂತಾದ ಸಾರ್ವಜನಿಕ ಸ್ಥಳದಲ್ಲಿ ಹಾಕಿದ್ದ ಚಪ್ಪರದಲ್ಲಿ ಸೇರಿದ್ದ ಜನಸಂದಣಿಯ ಎದುರು ಮುಚ್ಚು ಮರೆಯಿಲ್ಲದೆ ಬಹಿರಂಗವಾಗಿ ನಡೆಯುತ್ತಿತ್ತು. ಬೆಳಿಗ್ಗೆ ೧೦ ಗಂಟೆಯಿಂದ ಉಪವಾಸ ಪ್ರಾರಂಭವಾಗುವದಿದ್ದರೆ ವ್ರತಧಾರಿಗಳು ಬೆಳಿಗ್ಗೆ ೮ ಗಂಟೆಗೆಲ್ಲ ಮನೆಯಲ್ಲಿ ವ್ರತಪೂರ್ವ ಕಟ್ಟಕಡೆಯ ಭೋಜನ ಮುಗಿಸಿ ಒಂದು ಗೇಣುದ್ದ ಲೋಟ ತುಂಬ ಕಲ್ಲು ಸಕ್ಕರೆ, ಬಾದಾಮಿ ಗೋಡಂಬಿ, ದ್ವೀಪದ್ರಾಕ್ಷಿ, ಕೇಸರಿ, ಏಲಕ್ಕಿ, ಜಾಕಾಯಿ ಮುಂತಾದ ವೈದ್ಯಕೀಯ ವಸ್ತುಗಳ ಸಮ್ಮಿಶ್ರಣದಿಂದ ಪರಿಷ್ಕರಿಸಿದ ಮಹಾಮಹಿಷೀ ದುಗ್ಧವನ್ನು ಔಷಧವಾಗಿ ಸೇವಿಸಿ ಮುಖಾಮುಖವಾಗಿ ಮೇಲೆದ್ದು ಬರುತ್ತಿದ್ದ ತೇಗುಗಳನ್ನು ಸಭ್ಯ ರೀತಿಯಲ್ಲಿ ತಮ್ಮ ಕರವಸ್ತ್ರದೊಳಗೇ ಶೇಖರಿಸಿಟ್ಟುಕೊಳ್ಳುತ್ತಾ ತಮ್ಮ ಮುಂದಿರುವ ವಿಷಮ ಪರೀಕ್ಷೆಗೆ ಸಿದ್ಧರಾಗುತ್ತಿದ್ದರು.

ಉತ್ತಮವಾದ ಉದ್ದೇಶಗಳಿಂದ ಮಾಡುವ ಕಾರ್ಯಗಳಿಗೂ ಬೇರೆ ಬೇರೆ ವಿರುದ್ಧ ಅರ್ಥಕೊಟ್ಟು ಅವಕ್ಕೆ ಕೆಟ್ಟ ಹೆಸರು ಬರುವಂತೆ ಮಾಡುವುದನ್ನು ಈಗ ರಾಜಕೀಯ ರಂಗದಲ್ಲಿ ನಾವು ನೋಡುವುದಿಲ್ಲವೇ? ಹಾಗೆಯೇ ಐದು ಸಾವಿರ ವರ್ಷಗಳಿಗೂ ಹಿಂದೆ ದ್ವಾಪರಯುಗದ ಅಂತ್ಯ ಭಾಗದಲ್ಲಿ ಪ್ರವೃದ್ಧಮಾನವಾಗಿದ್ದ ನಾಥ ದ್ವೀಪದಲ್ಲಿಯೂ ನಡೆಯುತ್ತಿತ್ತು. ವ್ರತಧಾರಿಯ ಎದುರು ಪಕ್ಷದವರು ವ್ರತಿಯ ಬೇಡಿಕೆಗಳಿಗೆ ವಿರುದ್ಧವಾದ ಅರ್ಥ ಕಟ್ಟುತ್ತಿದ್ದರು. ಚರಕ-ಶುಶ್ರುತ ಸಂಹಿತೆಗಳಲ್ಲಿ ಪರೀಕ್ಷೆಯಲ್ಲಿ ತೇರ್ಗಡೆಯಾಗದ ನಾಥ ವಿದ್ಯಾರ್ಥಿಗಳಿಗೂ ಆಯುರ್ವೇದಾಚಾರ್ಯ ಪದವಿ ಕೊಡಬೇಕು ಎಂಬ ಬೇಡಿಕೆಯನ್ನು ಅಲ್ಲಗಳೆಯುತ್ತಾ ಅವರ ಪ್ರತಿ ಪಕ್ಷದ ನಾಯಕರು ಹೇಳಿದರಂತೆ: "ಸರಿ, ಹಾಗೇ ಆಗಲಿ, ಚರಕ ಶುಶ್ರುತ ಸಂಹಿತೆ ಓದದ ನಾಥ ವರ್ಗದ ವೈದ್ಯರಿಂದ ಶ್ರೀಯುತರು ತಮ್ಮ, ಸಂಸಾರದವರ ಚಿಕಿತ್ಸೆಯಾಗಲು ಒಪ್ಪುತ್ತಾರೋ, ಕೇಳಿನೋಡಿ." ಈ ಮಾತುಗಳನ್ನು ವಾರ್ತಾ ಫಲಕಗಾರರೂ ಡಂಗುರಕಾರರೂ ದ್ವೀಪದ್ಯಂತ ಪ್ರಸರಿಸಿದರಂತೆ. ಹೀಗೆ ಒಳ್ಳೆಯ ಕಾರ್ಯಗಳನ್ನು ಮಾಡಹೊರಟರೂ ಎದುರು ಬೀಳದವರಿರಲಿಲ್ಲ.

ಜ್ಯೋತಿಷಿಗಳು ನಿರ್ಧರಿಸಿದ ಪ್ರಶಸ್ತವಾದ ಗಳಿಗೆ ಹತ್ತಿರ ಬಂದ ಹಾಗೆಲ್ಲ ಉಪವಾಸ ಮಹೋತ್ಸವವನ್ನು ಸಂದರ್ಶಿಸಲು ನೂರಾರು ನಾಥ ಜನಗಳೂ ಐವತ್ತು ಅರವತ್ತು ಕಾರಿಗಳೂ ಮತ್ತು ಹಲಕೆಲವು ವಸ್ನಿಗಳೂ ವ್ರತ ಮಂಟಪಕ್ಕೆ ಬಂದಿದ್ದಾರೆ. ವ್ರತಧಾರಿಗಳ ಅನುಯಾಯಿಗಳೂ ದಿನ ಬೆಳಿಗ್ಗೆ ನೂರಾರು ನಾಥ ಜನರ ಮನೆ ಮನೆಗೂ ಹೋಗಿ ಹಾಲಿ ವ್ರತದ ಪ್ರಾಮುಖ್ಯ ಮತ್ತು ಅದರಿಂದ ನಾಥ ವರ್ಗದ ಉನ್ನತಿ ಹೇಗೆ ಆಗುತ್ತದೆ ಎನ್ನುವುದನ್ನು ಸಮಾರಂಭದ ಕಡೆಯಲ್ಲಿ ಪಾನಕ ಗೋಷ್ಠಿ ಇದೆ ಎನ್ನುವುದನ್ನು ತಿಳಿಸಿ ಸಾಕಷ್ಟು ಮಂದಿಯನ್ನು ಸೇರಿಸಿದ್ದಾರೆ. ವಾರ್ತಾ ಫಲಕ ಡಂಗುರ ವಾರ್ತಾ ಸಂಪಾದಕರನ್ನು ಮೊದಲೇ ಸೇರಿಸಿ ಪಾನಕ ಪಣ್ಯಾರಗಳಿಂದ ಆದರಿಸಿ ವ್ರತಧಾರಿಯ ಆಶಯಗಳಿಗೆ ಸಹಕಾರ ಸೂಚಿಸುವ ವಾರ್ತೆಗಳನ್ನು ಕೋರಿದ್ದಾಯಿತು. ನೆರಳು ಗಡಿಯಾರದ ಕೈ ಸೂರ್ಯೋದಯವಾಗಿ ನಾಲ್ಕು ತಾಸುಗಳಾಗುವುದಿದೆ ಎಂದು ತೋರಿಸುವುದಕ್ಕೆ ಸರಿಯಾಗಿ ವ್ರತಧಾರಿಗಳು ತಮ್ಮ ಅನುಯಾಯಿಗಳು ಹಾಕಿದ ಹತ್ತಾರು ಪುಷ್ಪಹಾರಗಳ ಭಾರದಿಂದ ಬಾಗುತ್ತಾ ಹಿತೈಷಿಗಳಿಂದ ಸುತ್ತುವರಿಯಲ್ಪಟ್ಟು ವಾದ್ಯ ಸಮೇತ ವ್ರತದ ಚಪ್ಪರವನ್ನು ಸೇರಿ ಅಲ್ಲಿ ಮೊದಲೇ ಸೇರಿದ್ದವರ ಕರತಾಡನಗಳಿಂದ ಸ್ವಾಗತಿಸಲ್ಪಡುತ್ತಿದ್ದಾರೆ. ಅವರು ವೇದಿಕೆಯ ಮೇಲೆ ಕುಳಿತ ನಂತರ ಅವರ ಮುಖ್ಯ ಅನುಯಾಯಿಯೊಬ್ಬರು ಶ್ರೀಯುತರು ನಾಥಗಣಕ್ಕಾಗಿ ಅವರು ಕೈಗೊಂಡಿರುವ ಉಪವಾಸವ್ರತ ಶ್ರೇಯಸ್ಕರವಾಗಿ ಮುಕ್ತಾಯವಾಗಲೆಂದು ಹಾರೈಸಿದ್ದಾಯಿತು. ಕಡೆಗೆ ವ್ರತಧಾರಿಗಳು ತಾವೇ ಎದ್ದು ತಮ್ಮ ಬೇಡಿಕೆಗಳನ್ನು ತಮಗೆ ಸಮಾಧಾನವಾಗುವಂತೆ ಸರ್ಕಾರದವರು ಪೂರೈಸಿ ನಾಥ ಜನಗಳು ತಮ್ಮ ಏಳಿ

ಗೆಯ ಹಾದಿಯಲ್ಲಿ ಇನ್ನೊಂದು ಪಾತ್ರ ಪತ್ರ್ಯವ ಹಾಗೆ ಆವ ಹೊರತು ತಾವು ಉಪವಾಸವನ್ನು ಮುಗಿಸುವದಿಲ್ಲವೆಂದೂ ಅದಕ್ಕಾಗಿ ತಮ್ಮ ಪ್ರಾಣವನ್ನು ಕೊಡಲೂ ಸಿದ್ಧರಾಗಿದ್ದರೆಂದೂ ಹೇಳಿ ಕರತಾಡನಗಳ ಮಧ್ಯದಲ್ಲಿ ಕುಳಿತುಕೊಂಡರು.

ಇಂತಹ ಘನವಾದ ಸಂದರ್ಭದಲ್ಲೂ ವ್ರತಧಾರಿಗಳನ್ನು ಕಂಡರೆ ಹಿಡಿಸದ, ಪ್ರಾಯಶಃ ಎದುರು ಪಕ್ಷಕ್ಕೆ ಸೇರಿದ ಒಬ್ಬ ಮುನ್ನಿಗ ಮಹನೀಯರು ತಮ್ಮ ಪಕ್ಕದಲ್ಲಿ ಕುಳಿತಿದ್ದ ಇನ್ನೊಬ್ಬರ ಕಿವಿಯಲ್ಲಿ, "ಈತ ಯಾಕೆ ತನ್ನ ಪ್ರಾಣಕೊಡುತ್ತಾನ್ರೀ, ಈ ಸಬೂಬಿನಲ್ಲಿ ಒಂದು ದೊಡ್ಡ ಸರ್ಕಾರೀ ಕೆಲಸವೋ ಸಮಿತೀ ಸದಸ್ಯತನವೋ ಸಿಕ್ಕರೆ ಸಾಕು, ನಿಂಬೂ ಶರಬತ್ತು, ದೊಡ್ಡೆಮ್ಮೆ ಹಾಲಿನ ಖೀರು ಇವಕ್ಕೆ ಸಿದ್ಧನಾಗಿದ್ದಾನೆ," ಎಂದು ಉಸುರಿದರು.

ತಮ್ಮ ಸತ್ಯೋಪವಾಸ ಪೂರೈಸಿದಾಗ ಸತ್ಯ ಪ್ರೇಮಿಗಳು ಒಂದು ಲೋಟಾ ನಿಂಬೆ ಹಣ್ಣಿನ ಶರಬತ್ತು ಸೇವಿಸಿ ತಮ್ಮ ಅನುಯಾಯಿಗಳ ಮನಸ್ಸಿಗೆ ಸಮಾಧಾನ ತರುತ್ತಿದ್ದರು. ಅವರ ಕಾಲದಿಂದೀಚೆಗೆ, ಸತ್ಯೋಪವಾಸವು ಉಪವಾಸ ಮಹೋತ್ಸವವಾದ ಮೇಲೆ ಉಪವಾಸದ ಪ್ರಾರಂಭದಲ್ಲಿ ಬಹಿರಂಗ ಸಭೆಯಲ್ಲಿ ವ್ರತಧಾರಿಗಳು ಒಂದು ಲೋಟಾ ನಿಂಬೂ ಶರಬತ್ತನ್ನೂ ವ್ರತ ಸಮಾಪ್ತಿಯಲ್ಲಿ ನಿಂಬೂ ಶರಬತ್ ಮತ್ತು ಗೇಣುದ್ದ ಲೋಟಾ ತುಂಬಾ ಪರಿಷ್ಕರಿಸಿದ ದೊಡ್ಡೆಮ್ಮೆ ಹಾಲಿನ ಖೀರನ್ನೂ ಪಾರಣೆಯಾಗಿ ತೆಗೆದುಕೊಳ್ಳುವ ಸಂಪ್ರದಾಯ ಬೆಳೆದು ಬಂದಿತ್ತು.

ಮುನ್ನಿಗ ಮಹನೀಯರು ತಮ್ಮ ಸ್ನೇಹಿತರ ಕಿವಿಯಲ್ಲಿ ವ್ರತಧಾರಿಗಳ ಉದ್ದೇಶದ ಬಗ್ಗೆ ಕಟುವಾಗಿ ಟೀಕಿಸುತ್ತಿದ್ದಾಗ ಅಲ್ಲೇ ಅನತಿ ದೂರದಲ್ಲಿ ಕುಳಿತಿದ್ದ ಕೆಲವು ನಾಥಬಂಧುಗಳು ಒಬ್ಬರಿಗೊಬ್ಬರು ಹೇಳಿಕೊಳ್ಳುತ್ತಿದ್ದುದು ನಾಥ ಪೌರಾಣಿಕರ ಕಿವಿಗೆ ಬಿದ್ದು ಅವರು ಅದನ್ನು ನಿಷ್ಪಕ್ಷಪಾತವಾಗಿ ಬರೆದಿಟ್ಟಿದ್ದಾರೆ:

"ಏನು, ನಿಂಗಣ್ಣ, ಷಡಕ್ಷರಯ್ಯನೋರು ಈ ಸಾಟಿ ಉಪವಾಸಕ್ಕೆ ನಿಂತ್ಬಿಟ್ರಲ್ಲ! ಆದರೆ ನಮ್ಮ ಪೈಕಿ ಓದೋದ್ಬರೆಯೋದ್ಬಿಟ್ಟು ಶಾಲೆಗೆ ಹೋಗದೆ ಕಳ್ಳ ತಪ್ಪಿಸಿಕೊಂಡು ಪೋಲಿ ತಿರುಗೋರು ನೋಡಿದ್ರೆ ಆ ಮುಂಡೇವಕ್ಕೆ ಐನೋರು ಯಾಕೆ ಪ್ರಾಣ ಕೊಡ್ಬೇಕೋ ಗೊತ್ತಾಗೋದಿಲ್ಲ ನೋಡು."

"ನಿಜವಾದ ಮಾತ್ಹೇಳ್ದಿ ಈರಣ್ಣ, ಹತ್ತನೇ ಪರೀಕ್ಷೆನಲ್ಲಿ ಒಂದಲ್ಲ ಎರಡಲ್ಲ ಮೂರು ಸಲ ಢುಂಕಿ ಹೊಡೆದ ನಿನ್ನ ಮಗ ಮಾದ, ಹಾಗೇ ನನ್ನ ಮಗ ಲಕ್ಕನ್ನೂ, ಶಾಲೆ ಐನೋರನ್ನ ಮನೆ ಪಾಟಕ್ಕೆ ಇಟ್ಟರೆ ಅವರು ಬಂದಾಗ ಇವರು ಮನೇಲಿದ್ದಾರ ತಾನೆ? ಈಗ ದಿನಾ ಬೆಳಗಾದರೆ ರಾವಯ್ಯನವರ ಬಯಲಾಟದ ಡೇರಾನಲ್ಲೇ ಇವರಿಬ್ಬರ ಮೊಕ್ಕಾಂ. ಆ ಡೊಂಬರ ಎದೆ ಕುಣಿಸುವ ಹೆಣ್ಣುಮಕ್ಕಳ ಮೇಲೆ ಇವರ ಕಣ್ಣು. ಇವರಿಬ್ಬರಿರಲಿ ನಮ್ಕೇರಿಗೆ ಕೇರೀನೇ ಹೀಗೆ. ಇಂಥವರು ನಾಳೆ ಚರ್ಕ ಸುಸುತ್ರು ಓದಿ ವೈದ್ಯ ಮಾಡ್ತಾರಾ? ಇವರು ವೈದ್ಯ ಮಾಡಿ ಇವರು ಕೊಡೋ ಮದ್ದು ತೆಗೆದುಕೊಂಡು ನಾವ್ ಬದುಕೀವಾ? ಜನ ಒಪ್ತಾರಾ?"

'ಕೆಟ್ಟು ಪಟ್ಟಣ ಸೇರು' ಎಂಬಂತೆ ನಾಥ ಪೌರಾಣಿಕರ ಸಂದರ್ಶನದ ವೇಳೆಗೆ ಅನೇಕ ನಾಥ ಜನರು ಹಳ್ಳಿಪಳ್ಳಿಗಳನ್ನು ಬಿಟ್ಟು ಪಟ್ಟಣ ಸೇರಿ ಗುಡಿಸಲು ಕಟ್ಟಿಕೊಂಡು ನಾಥ ಸರ್ಕಾರದ ಉಪೇಕ್ಷೆಯಿಂದಲೂ ತಮ್ಮ ಅವಿದ್ಯೆಯ ಕಾರಣದಿಂದಲೂ ದನಗಳ ಕೊಟ್ಟಿಗೆಯಂತಹ ವಾತಾವರಣ ಕಲ್ಪಿಸಿಕೊಂಡು ಎಲ್ಲಾದರೂ ಸೇವಾ ವೃತ್ತಿ ಅವಲಂಬಿಸಿ ಒಂದು ಹೊತ್ತಿಗಾದರೂ ಗಂಜಿ ಕಾಣುತ್ತಿದ್ದರು. ಅವರಲ್ಲಿ ಅಸ್ಪೃಷ್ಟ ಶಾಲಿ ನಾಥರು ಹಾಲು, ಬೆಣ್ಣೆ, ತುಪ್ಪ ಅಥವಾ ಕಾಯಿಪಲ್ಯ, ಹಣ್ಣು ಹೂಪಲು ವ್ಯಾಪಾರದಲ್ಲಿ ಧನ ಗಳಿಸಿ ತಮ್ಮ ನಾಥಕೇರಿ ವರ್ಜಿಸಿ ಕಾರಿಗ ನಗರಿಯನ್ನೋ ಮುನ್ನಿಗ ಮೊಹಲ್ಲಾವನ್ನೋ ಸೇರಿ ಅಲ್ಲಿಯ ಜನಗಳಲ್ಲಿ ಐಕ್ಯವಾಗಲು ಕಾತುರ ಪಡುತ್ತಿದ್ದರು. ಆದರೆ ಅಪ್ಪಅಮ್ಮಂದಿರ ಕಷ್ಟದ ದಿನಗಳನ್ನು ಎಂದೂ ಕಾಣದ ಇವರ ಮಕ್ಕಳು ಮೊಮ್ಮಕ್ಕಳು ಕಾರಿಗ–ಮುನ್ನಿಗ ಮಕ್ಕಳ ಒಳ್ಳೇ ಗುಣಗಳನ್ನು ಕಲಿಯದೆ ಅವರ

ದುಶ್ಚಾಳಿಗಳನ್ನೆಲ್ಲಾ ಒಂದಕ್ಕೆರಡಾಗಿ ಕಲಿತು ನಾಥ ವರ್ಗಕ್ಕೇ ಕಳಂಕ ಪ್ರಾಯವಾಗುತ್ತಿದ್ದರು. ಇಂತಹ [ನಾಥ ಬಾಲಕರ ವಿದ್ಯಾಭಿವೃದ್ಧಿಗಾಗಿ ರಿಯಾಯಿತಿಗಳನ್ನು ಬೇಡಿ ವಾನ್ನಿಗರು ಉಪವಾಸ ವ್ರತ ಹೂಡುತ್ತಿದ್ದರು.

"ನನ್ನೇಳಿದರೆ ಸಂಜಾತಿ ಹೈಕಳಿಗೆ ಮೊದಲಿಂದ ನಿತ್ಯ ತಿಕದ ಮೇಲೆ ಎರಡು ಬರೆ ಕೊಟ್ಟು ಅಥ್ವಾ ಬರೆ ಹಾಕ್ತೀವಿ ಎಂದು ಹೆದರಿಸಿ ಶಾಲೇಲಿ ಛಡಿ ಬೆತ್ತ ಆಗಾಗ ಉಪಯೋಗಿಸಿ ಪಾಟ ಹೇಳ್ಕೊಟ್ಟರೆ ತಾನೆ ಓದೋ ರೂಢಿ ಬರುತ್ತೆ. ಅದು ಬಿಟ್ಟು ನೀನು ಪರೀಕ್ಷೇಲಿ ತೇರ್ಗಡೆ ಆಗದಿದ್ದರೂ ನಿನ್ನನ್ನು ಮೇಲು ವರ್ಗದಲ್ಲಿ ಕೂರಿಸ್ತೀನಿ ನಿಂ ಜನ ಉದ್ಧಾರ ಮಾಡೋಕೆ ಎಂದೆಲ್ಲಾ ಹೇಳಿದ್ರೆ ಅದ್ಹೆಂಗೆ ಕಲಿತಾವು ನಮ್ಮ ಹೈಕ್ಳು? ಎರಡು ಮೂರು ತಲೆ ಬೂರು ತನಕ ಕಟ್ಟು ನಿಟ್ಟಾಗಿ ಹಾಗೆ ಕಲಿಸಲಿ, ಆ ಮೇಲೆ ನೋಡೋವಂತೆ ನಮ್ಮ ಹೈಕ್ಳು ಐನೋರ ಹೈಕಳನ್ನು ಮೀರಿಸ್ತಾರೋ ಇಲ್ವೋ !"

"ಆದರೆ ನೀನು ಕಲಿಯದಿದ್ದರೂ ಪರವಾಗಿಲ್ಲ, ಕಲಿತವರಂತೆ ನಿನಗೂ ಪದವೀ ಕೊಡಿಸ್ತೀನಿ ಅಂದರೆ ಯಾರು ಬಿಟ್ಟಾರು ಈರಣ್ಣ ! ಈ ಕಿತಾಪತಿ ಹಿಂದೆ ಬೇಡರ ಕೇರಿ ಸಾವ್ಕಾರ್ ಲಕ್ಷ್ಮತಯ್ಯ ಇದಾನೆ. ನನ್ಮೇಲಿ ಬಿತ್ತು. ಆತನ ಮಗ ನಾಲ್ಕು ವರ್ಷದಿಂದ ವೈದ್ಯ ಪರೀಕ್ಷೇಲಿ ಚರ್ಕ-ಸುಸ್ರುತದಲ್ಲಿ ಸೊನ್ನೆ ತೆಕ್ಕೊಂಡ್ಬರ್ತಾ ಇದಾನಂತೆ. ಲಕ್ಷ್ಮತಯ್ಯ ಈಗ ಷಡಕ್ಷರಯ್ಯನೋರ ಕೈಯಲ್ಲಿ ಈ ಆಟ ಕಟ್ಟಿಸಿದಾನಂತೆ. ಇಲ್ಲಿ ಸೇರಿರೋ ಮುಂದೀಗೆಲ್ಲ ಲಡ್ಡು ಕೊಟ್ಟು ಇಲ್ಲಿ ಡೇರಾಹಾಕ್ಸಿ, ದೊಡ್ಡ ಮನ್ಸರು. ಸಂಪಾದಕರು ಇವೆಲ್ಲನ್ನೆಲ್ಲ ಬರವಾಡ್ಕೊಂಡು ಆದರಿಸೋಕೆ ಕಾಡಿಕೆ ಹಣ ಬೇಕು; ಬುದ್ದಿ ಬೇಕು. ಲಕ್ಷ್ಮತಯ್ಯನ ಹಣ ಷಡಾಕ್ಷರಯ್ಯನ ತಲೆ ಎರಡೂ ಸೇರಿದೆ ಅಂತ ಮಾತು."

"ಅಂದರೆ ಸಡಕ್ಷರಯ್ಯನ ಹಟ ಗೆದ್ದರೆ ತಾನೆ ಲಕ್ಷ್ಪಯ್ಯನ ಮಗ ವೈದ್ಯ ಆಗೋದು"

"ಅವಕ್ಕೂ ಏರ್ಪಾಡು ಮಾಡಿದಾನೆ ಲಕ್ಷ್ಪತಯ್ಯ, ಕೇಳ್ಲಿಲ್ವ? ನಮ್ಕೇರೀಗೆ ಕೇರೀನೇ ಬರೋ ಸೋಮವಾರ ಮಂತ್ರಿಗಳ ಕಛೇರಿಗೆ ಮೆರವಣಿಗೆ ಹೋಗಿ 'ಸಡಕ್ಷರಯ್ಯನವರ ಬೇಡಿಕೆ ಮಂಜೂರು ಮಾಡಿ ಹಿಂದುಳಿದ ಯುವಕರಿಗೆ ವೈದ್ಯರಾಗುವ ಅವಕಾಶ ಕೊಡಿ' ಎಂದು ಒಟ್ಟಿಗೆ ಗುಂಪಾಗಿ ಕೂಗುಹಾಕಬೇಕು. ಅದಕ್ಕೆ ಎಷ್ಟು ಖರ್ಚಾಗಲಿ, ಔತಣ ಎಲ್ಲರಿಗೂ ಹಾಕ್ತೀನಿ ಎಂದು ಮನೆಮನೆಗೂ ಜನ ಬಿಟ್ಟು ಹೇಳಿಸ್ತಿದಾನೆ. ನಿನ್ಮನೇಗೂ ಈ ದಿನ ನಾಳೆ ಬರಬಹುದು. ಸಾವ್ಕಾರ್ರು ಮಾತು ಎತ್ಹಾಕಾಕಾಗೋದಿಲ್ಲ, ನಾವೂ ಹೋಗ್ಬೇಕಾಗುತ್ತೆ. ಅಲ್ಲವೆ?"

"ಸಾವ್ಕಾರ್ರು ಮಾತು ಎತ್ಹಾಕೊದಕ್ಕಾಗೋದಿಲ್ಲ ನಿಜ. ಅಲ್ಲದೆ ನಮ್ಮ ನಾಥಜನ ಮುಂದಕ್ಬರೋದನ್ನೂ ನೋಡಬೇಕು, ಅಲ್ಲವೇ? ಸರಿಯೋ ತಪ್ಪೋ ಆ ಮೇಲೆ ನೋಡೋಣ."

"ಆದರೆ ಒಂದು ಮಾತು. ಸಡಕ್ಷರಯ್ಯನೋರು ಬಹಳ ಬುದ್ಧಿ ಅಂತೆ; ಸರಿ ಹಾಗೆ ಯುಕ್ತಿನೂ ಇದೆ ಯಂತೆ. ಸುಮ್ಮನೆ ಲಕ್ಷ್ಪತಯ್ಯನ ಮಗ ಓದಿನಲ್ಲಿ ಒಂದು ಮೆಟ್ಟಲು ಮೇಲಕ್ಕೆ ಹತ್ಲಿ ಎಂದು ತಮ್ಮ ಪ್ರಾಣ ಬಿಡ್ತಾರೇನು?"

ಈ ಮಾತುಗಳು ಇನ್ನೂ ನಡೆಯುತ್ತಿದ್ದಾಗಲೇ ವ್ರತಧಾರಿಯ ಭಕ್ತರು ಶ್ರೀಯುತರ ಕೈಗೆ ವ್ರತ ಪ್ರಾರಂಭ ಸೂಚಕವಾದ ನಿಂಬೆ ಹಣ್ಣಿನ ಪಾನಕವನ್ನು ಕೊಟ್ಟರು. ಅವರು ಇದನ್ನು ಕುಡಿಯುತ್ತಿರುವಾಗ ಅವರ ಹೆಸರು ಹೇಳಿ ಜಯಕಾರ ಧ್ವನಿಗಳು ಚಪ್ಪರದಿಂದೆದ್ದು ಸುತ್ತ ಮುತ್ತ ಕಚೇರಿಗಳಿಗೆಲ್ಲ ಪಸರಿಸಿತು. ಹೀಗೆ ಒಂದು ಆಮರಣಾಂತ ಮಹೋಪವಾಸ ಪ್ರಾರಂಭವಾಯಿತು.

ಇಂತಹ ಉಪವಾಸ ನಡೆಯುವಾಗ ಹಗಲೂ ಇರುಳೂ ಉಪವಾಸ ಚಪ್ಪರದಲ್ಲಿ ಜನರು ವ್ರತಿಯ ದರ್ಶನಕ್ಕೆಂದು ಬಂದು ಹೋಗುತ್ತಲೇ ಇರುತ್ತಾರಂತೆ. ದಿವಗಳು ಕಳೆದಂತೆಲ್ಲ ಉಪವಾಸದಿಂದ ವ್ರತಿಯ ಸ್ಥಿತಿ ಕೆಟ್ಟಂತೆಲ್ಲ ವ್ರತಿಯ ಮಿತ್ರರಿಗೂ ಸರ್ಕಾರದ ನಾಯಕರಿಗೂ ಇದಿರು ಪಕ್ಷಗಳ ನಾಯಕರಿಗೂ ನಡುವೆ ಸಂಧಾನ ನಡೆಯುತ್ತಲೇ ಇರುತ್ತದೆ. ವ್ರತಿಯ ಬೇಡಿಕೆಗಳನ್ನು ಎಳ್ಳಷ್ಟು ನಡೆಸಿಕೊಡುವುದಿಲ್ಲವೆಂದರೆ ವ್ರತಿ ಸೋತೆನೆಂದು ಒಪ್ಪಿಕೊಂಡು ಉಪವಾಸ ಹಿಂಗಿಸಬೇಕು; ಇಲ್ಲವೆ ಹಟ ತೊಟ್ಟು ಉಪವಾಸ ಮುಂದುವರಿಸಿ ಸರಕಾರವನ್ನು ಶಪಿಸಿ ತನ್ನ ಪ್ರಾಣ ತ್ಯಜಿಸಬೇಕು. ಕೆಲವು ಸಂದರ್ಭಗಳಲ್ಲಿ ಹೀಗೂ ಆಗಿ ವ್ರತಿ ಪ್ರಾಣ ತೆತ್ತಾಗ, ಕೋಪಗೊಂಡ ಆತನ ಭಕ್ತರೂ ಅನುಯಾಯಿಗಳೂ ದಂಗೆ ಎದ್ದು ಸರ್ಕಾರೀ ಕಟ್ಟಡಗಳಿಗೆ ಬೆಂಕಿ ಹಚ್ಚಿ, ಮಂತ್ರಿವರ್ಯರುಗಳ ಮೇಲೆ ಕೈ ಮಾಡಿರುವುದೂ ಉಂಟು. ಆದ್ದರಿಂದ ಇಂತಹ ವಿಪರೀತದ ವರೆಗೂ ಸ್ಥಿತಿ ಬಿಗಡಾಯಿಸಲು ಬಿಡದೆ ಇರುವುದು ತಾನೆ ಸಂಬಂಧಪಟ್ಟ ಎಲ್ಲರಲ್ಲೂ ಇರಬೇಕಾದ ಜಾಣತನ.

ನಾಥ ಪೌರಾಣಿಕರು ಕಂಡ ಮೇಲಿನ ಆ ಉಪವಾಸ ಮಹೋತ್ಸವದಲ್ಲಿ ಸಡಕ್ಷರಯ್ಯನವರೂ ಸರ್ಕಾರದ ಮಂತ್ರಿವರ್ಯರೂ ಇತರರೂ ಜಾಣರಾಗಿದ್ದರಿಂದ ಸಂಧಾನದ ಮೂಲಕ ಉಪವಾಸದ ಐದನೇ ದಿನ ಸಾಯಂಕಾಲದ ವೇಳೆಗೆ ಜಯಕಾರಗಳ ಮಧ್ಯೆ ವ್ರತಿ ಕೈಯಲ್ಲಿ ವ್ರತ ಸಮಾಪ್ತಿಯ ನಿಂಬೆ ಹಣ್ಣಿನ ಪಾನಕವನ್ನೂ ಕೊಟ್ಟು ಸರ್ಕಾರದ ಮಂತ್ರಿವರ್ಯರೊಬ್ಬರು ಅವರ ಗುಣಗಾನ ಮಾಡಿದರು. ಹಿಂದುಳಿದ ನಾಥ ಜನಗಳ ಯುವಕರಿಗೆ ಹೆಚ್ಚು ಹೆಚ್ಚಾಗಿ ಆಯುರ್ವೇದ ಶಿಕ್ಷಣ ದೊರಕಬೇಕೆನ್ನುವುದನ್ನು ಸರ್ಕಾರ ಒಪ್ಪಿತು. ಇದನ್ನು ಹೇಗೆ ಸಾಧಿಸಬೇಕು ಎನ್ನುವುದನ್ನು ಕೂಲಂಕಷವಾಗಿ ವಿಚಾರಮಾಡಿ ಸಲಹೆ ಮಾಡಲು ಸರ್ಕಾರದವರು ಒಂದು ಸಮಿತಿ ಏರ್ಪಡಿಸಲು ಒಪ್ಪಿದ್ದರು. ಅದರ ಏಕಮಾತ್ರ ಸದಸ್ಯ ಮತ್ತು ಅಧ್ಯಕ್ಷ ಕೂಡ ಆಗಿ ಶ್ರೀಯುತ ಸಡಕ್ಷರಯ್ಯನವರನ್ನು ನೇಮಕ ಮಾಡಿತ್ತು. ಈ ಸಮಿತಿ ಉಚ್ಚ ಸ್ಥಾನ ತೋರಿಸಲು ನಾಥದ್ವೀಪ ಸರಕಾರದವರು ಸಮಿತಿಯ

ಅಧ್ಯಕ್ಷರಿಗೆ ದ್ವೀಪಸಭೆಯ ಸದಸ್ಯರ ಸ್ಥಾನಮಾನ ವೇತನಗಳನ್ನು ಮಂಜೂರು ಮಾಡಿದ್ದರು. ಮೂರು ವರ್ಷಗಳಲ್ಲಿ ಈ ಸಮಿತಿ ವಿಷಯವನ್ನು ಎಲ್ಲಾ ದೃಷ್ಟಿಕೋನದಿಂದಲೂ ಪರೀಕ್ಷೆ ಮಾಡಿ ತಮ್ಮ ವರದಿಯನ್ನು ಸರ್ಕಾರಕ್ಕೆ ಕಳಿಸಬೇಕು. ಸಮಿತಿ ತನ್ನ ವರದಿ ಮಾಡುವುದಕ್ಕೆ ಮೊದಲು ನಾಥ ದ್ವೀಪದ ಜೊತೆಗೆ ಜಂಬೂ ದ್ವೀಪದಲ್ಲಿರುವ ಮೂವತ್ತು ಮೂರು ಸಾವಿರ ಚಿಲ್ಲರೆ ದ್ವೀಪಗಳಲ್ಲಿ ಅತಿ ಮುಖ್ಯವಾದ ಛಪ್ಪನ್ನಾರು ದ್ವೀಪಗಳನ್ನು ಸಂದರ್ಶಿಸಿ ಅಲ್ಲಿ ಸ್ಥಳೀಯ ಹಿಂದುಳಿದವರ ವೈದ್ಯಕೀಯ ಶಿಕ್ಷಣಕ್ಕೆ ಅಲ್ಲಿಯ ಸರಕಾರಗಳು ಮಾಡಿರುವ ಏರ್ಪಾಡುಗಳನ್ನು ಪರೀಕ್ಷಿಸಿ ನಾಥ ದ್ವೀಪದಲ್ಲೂ ಅವುಗಳನ್ನು ಸೂಕ್ತವಾಗಿ ಮಾರ್ಪಡಿಸಿ ಅನುಸರಿಸುವುದಕ್ಕಾಗುತ್ತದೆಯೇ ಎನ್ನುವುದನ್ನೂ ವರದಿ ಮಾಡಲು ಸರ್ಕಾರ ಸೂಚಿಸುತ್ತದೆ. ಇದಕ್ಕೆ ತಗಲುವ ಪ್ರಯಾಣದ ಖರ್ಚು, ಭತ್ಯ ಮುಂತಾದಕ್ಕೆ ಏರ್ಪಾಡು ಮಾಡಲಾಗುತ್ತದೆ... ಹೀಗೆ ಶಾಂತಿರಸ್ತು, ತುಷ್ಟಿರಸ್ತು, ಸೌಭಾಗ್ಯಮಸ್ತು, ಸರ್ವೇ ಜನಾಃ ಸುಖಿನೋ ಭವಂತು, ಸರ್ವತ್ರ ಸೌಹಾರ್ದಮಸ್ತು ಎನ್ನುವ ವಾತಾವರಣ ಚಪ್ಪರದಲ್ಲಿ ಊಟವಾಗಿ ವ್ರತಧಾರಿಗಳು ತಮ್ಮ ಕೈಯಲ್ಲಿರಿಸಿದ ಗೇಣುದ್ದ ಲೋಟ ತುಂಬ ಇದ್ದ ಸರ್ವೋಪಕರಣ ಭರಿತವಾಗಿ ಘಮಘಮಿಸುತ್ತಿದ್ದ ಮಹಾ ಮಹಿಷೀ ದುಗ್ಧವನ್ನು



"ಅಪ್ಪ ಇನ್ನೂ ಪಾಪ ಹೆಚ್ಚಲ್ವಾ! ದೇವರು ಅವತರಿಸೋಕೆ?!"

ಶ್ವೇತೀಯರ ರೀತಿಯಲ್ಲಿ ಚೀಟಿ ಕುಡಿಯುತ್ತಾ ತಮ್ಮ ವ್ರತ ಸಮಾಪ್ತಿ ಮಾಡಿದರಂತೆ. ಸಾಹುಕಾರ್ ಲಕ್ಷ್ಮಣಯ್ಯನವರ ಮಗನಿಗೆ ಆಯುರ್ವೇದಾಚಾರ್ಯ ಪ್ರಶಸ್ತಿ ಸಿಕ್ಕಿತೋ ಇಲ್ಲವೋ ನಾಥ ಪೌರಾಣಿಕರಿಗೆ ತಿಳಿಯುತಿಲ್ಲ. ಅದು ಹೇಗಾದರೂ ಇರಲಿ, ನಾಥ ಜನರ ವಿದ್ಯಾಭಿವೃದ್ಧಿಯ ಕಾರ್ಯದಲ್ಲಿ ದ್ವೀಪ ಸರ್ಕಾರ ಸದಕ್ಷರಯ್ಯ ಸಮಿತಿಯ ನೇಮಕದ ರೂಪವಾಗಿ ಒಂದು ಹೆಜ್ಜೆ ಮುಂದಿಟ್ಟಿತ್ತು. ಸದಕ್ಷರಯ್ಯನವರು ಮಾಡಿದ ಮಹೋಪವಾಸ ಸಫಲವಾಯಿತು.

ಅಪೂರ್ಣಾಂತರ ಉಪವಾಸವ್ರತ: ಗುಪ್ತ ಪೂಜಾವಿಧಾನ: ಇದರ ವೈಶಿಷ್ಟ್ಯವೇನೆಂದರೆ ರಾತ್ರಿ ವೇಳೆ ವ್ರತಿಯು ಏಕಾಂತದಲ್ಲಿದ್ದು ಯೋಗ ನಿದ್ರೆಯಲ್ಲಿ ಕಳೆಯಬೇಕೆಂಬ ನಿಯಮ. ಕೆಲವು ಸಂದರ್ಭಗಳಲ್ಲಿ ಎದುರು ಪಕ್ಷದ ನಾಯಕರೂ ದ್ವೀಪ ಸರ್ಕಾರವೂ ವ್ರತಿಯ ಬೇಡಿಕೆಗಳಿಗೆ ಒಪ್ಪದೆ ಮಧ್ಯಸ್ಥಿಕೆಗೂ ಒಪ್ಪದಿದ್ದರೆ ಆಗ ನಾಲ್ಕಾರು ವಾರಗಳ ನಂತರ ವ್ರತಧಾರಿ ಹಸಿವಿನಿಂದ ಕಾಲವಾಗುವ ಸಂಭವ ಇತ್ತು. ಆದ್ದರಿಂದ ರಾತ್ರಿಯೆಲ್ಲಾ ಏಕಾಂತ ಯೋಗ ನಿದ್ರೆಯಲ್ಲಿ ಕಳೆದರೆ ನಿದ್ರಾಕಾಲದಲ್ಲಿ ದೇಹಬಲ, ಮನೋಬಲಗಳು ಪುನರ್ನವವಾಗಿ ವ್ರತಿ ಬಹಳ ಕಾಲ ಉಪವಾಸವನ್ನು ಮುಂದುವರಿಸುವುದಕ್ಕೆ ಸಾಧ್ಯವಾಗುತ್ತಿತ್ತು. ಈ ಮಧ್ಯೆ ಎದುರು ಪಕ್ಷದವರ ಹೃದಯ ಪರಿವರ್ತನೆಯಾಗುವ ಸಂಭವವೂ ಇರುತ್ತಿತ್ತು. ಅಲ್ಲದೆ ಭಕ್ತರೂ ತಮ್ಮ ಮೆಚ್ಚಿನ ನಾಯಕರು ಉಪವಾಸದಲ್ಲೇ ಎಲ್ಲಿ ವಿಧಿವಶರಾಗಿ ಬಿಡುತ್ತಾರೋ ಎಂಬ ಭಯದಿಂದ ಒಬ್ಬರಿಗೂ ಗೊತ್ತಾಗದೆ ಮಹಾ ಮಹಿಷಿ ದುಗ್ಧವನ್ನೋ ವನಕುಕ್ಕುಟ ರಸಾಯನವನ್ನೋ ಯೋಗ ನಿದ್ರೆಯಲ್ಲಿ ವ್ರತಧಾರಿಗೆ ಗೊತ್ತಿಲ್ಲದಂತೆಯೇ ಅವರಿಗೆ ಔಷಧಾರ್ಥವಾಗಿ ಕುಡಿಸಿ ವ್ರತ ದೀರ್ಘಕಾಲ ನಡೆಯುವ ಏರ್ಪಾಡು ಮಾಡುತ್ತಿದ್ದರಂತೆ. ಆದರೆ ಇದು ಅನೇಕ ಸಲ ಸಮುಖಿವಾಗಿ ನಡೆಯದೆ ವ್ರತಿಯು ಮಾನಹಾನಿಯಾಗುತ್ತಿತ್ತು. ನಾಥಪೌರಾಣಿಕರು ಉದಾಹರಣೆಗೆ ಈ ಕೆಳಕಂಡ ಪ್ರಸಂಗವನ್ನು ವರ್ಣಿಸಿದ್ದಾರೆ: ನಾಥ

ದ್ವೀಪದ ವಾಯುವ್ಯ ಸೀಮೆಯಲ್ಲಿ ಒಂದು ಕಡೆ ಬಹಳ ಜನಪ್ರಿಯವಾದ ಪ್ರಜಾಪ್ರಭು ಮಂದಿರವು ಪಂಚ ಪೂಜಾರಿಗಳೆಂಬ ಐದು ಜನ ಗಣ್ಯರ ಅಧೀನದಲ್ಲಿತ್ತು. ಅದೇ ಕಾಲದಲ್ಲಿ ಈ ಪ್ರಾಂತ್ಯದಲ್ಲಿ ನಕ್ಷತ್ರ ಸಿಂಹನೆಂಬ ಬಹಳ ಜನಪ್ರಿಯ ವ್ಯಕ್ತಿ ಇದ್ದರು. ಪಂಚಪೂಜಾರಿಗಳ ವರ್ತನೆ ಪೂರಾ ಸಮರ್ಪಕವಾಗಿಲ್ಲವಾದ್ದರಿಂದ ಮಂದಿರವನ್ನು ತಾನು ನಡೆಸಿಕೊಂಡು ಬರುವುದಾಗಿ ಹೇಳಿದಾಗ ಅವರುಗಳು ಒಪ್ಪಲಿಲ್ಲ. ಅವರ ಹೃದಯ ಪರಿವರ್ತನೆ ಮಾಡಲು ಇವರು ಆಮರಣ ಉಪವಾಸವನ್ನು ಹೂಡಿದರು. ನಕ್ಷತ್ರಸಿಂಹರ ಅನುಯಾಯಿಗಳು ಡಂಗುರದವರನ್ನು ಊರಿನ ಮೂಲೆ ಮೂಲೆಗೆಲ್ಲಾ ಕಳುಹಿಸಿ ಜನಗಳು ಗುಂಪು ಕಟ್ಟಿಕೊಂಡು ಬಂದು ಪಂಚ ಪೂಜಾರಿಗಳನ್ನು ತಮ್ಮ ಕೆಲಸಕ್ಕೆ ರಾಜೀನಾಮೆ ಕೊಡುವಂತೆ ಒತ್ತಾಯ ಪಡಿಸಬೇಕೆಂದು ಸಂದೇಶವನ್ನು ಪ್ರಸರಿಸಿದರೂ ಜನಗಳು ಉತ್ಸಾಹ ತೋರಿಸಲಿಲ್ಲ. ಪಂಚ ಪೂಜಾರಿಗಳೂ ಮಧ್ಯಸ್ಥಿಕೆಗೆ ಒಪ್ಪಲಿಲ್ಲ. ಉಪವಾಸದ ಹತ್ತನೆಯ ದಿನದ ವೇಳೆಗೆ ಜಠರಾಗ್ನಿಯ ಉರಿ ತಡೆಯಲಾರದೆ ವ್ರತಧಾರಿಗಳು ಮಧ್ಯರಾತ್ರಿಯಲ್ಲಿ ಯೋಗನಿದ್ರೆ ಪ್ರವೇಶಿಸದೆ ಭಕ್ತರು ತಂದು ಕೊಟ್ಟ ವನ ಕುಕ್ಕುಟ ರಸಾಯನವನ್ನು ಚಪ್ಪರಿಸುತ್ತಾ ಆಸ್ವಾದಿಸುತ್ತಿದ್ದಾಗ ಪಂಚ ಪೂಜಾರಿಗಳು ಎಲ್ಲಿಂದಲೋ ಬಂದು ಇವರೆದುರಿಗೆ ಪ್ರತ್ಯಕ್ಷರಾಗಿಬಿಟ್ಟರು. ವನಕುಕ್ಕುಟ ರಸಾಯನದ ಕಣಗಳು ದಾಡಿ ಮೇಲೆಲ್ಲಾ ಇನ್ನೂ ಅಂಟಿಕೊಂಡಿದ್ದ ಆರ್ತ ಸ್ಥಿತಿಯಲ್ಲಿಯೇ ನಕ್ಷತ್ರಸಿಂಹರನ್ನೂ ಅವರು ಅರ್ಧ ಮಾತ್ರ ಆಸ್ವಾದಿಸಿದ್ದ ವನ ಕುಕ್ಕುಟ ರಸಾಯನದ ಕುಡಿಕೆಯನ್ನೂ ಆ ವೇಳೆಗೆಲ್ಲಾ ಮಂದಿರದ ಮುಂದೆ ಸೇರಿದ್ದ ಜನತೆಯ ಮುಂದೆ ಹಾಜರ್ ಮಾಡಿದರು. ಪ್ರಜಾಪ್ರಭು ಪೂಜಾರಿಗಳಿಂದ ಉಪವಾಸದ ಪಾವಿತ್ರ್ಯಕ್ಕೆ ಭಂಗ ತಂದ ಆಪಾದನೆ ರುಜುವಾತಾಗಿ ಭಕ್ತಜನ ಸಭೆ ನಕ್ಷತ್ರ ಸಿಂಹರಿಗೆ ಎರಡು ದಂಡಗಳನ್ನು ವಿಧಿಸಿತು. ಒಂದನೆಯದಾಗಿ ಅವರು ಬರಲಿರುವ ಪ್ರಜಾಪ್ರಭುವಿನ ಮಾಸೋತ್ಸವದ ದಿನ ಮಂದಿರಕ್ಕೆ ಬರುವ

ಘೊಳೊರಸಿ ಹರಳೆಣ್ಣೆ ಸವರಿ ಹದ ಮಾಡಿ ಪೂಜೆ ಮುಗಿಸಿಕೊಂಡು ಹಿಂದಿರುಗಲಿರುವ ಸನರಿ ಭಕ್ತರ ಕಾಲುಗಳಿಗೆ ತಾವೇ ಏರಿಸಬೇಕು. ಎರಡನೆಯ ದಂಡವಾಗಿ ಮಾಸೋತ್ಸವದ ಮಾರನೆ ದಿನ ಸಂತರ್ಪಣೆ ಮುಗಿದ ಮೇಲೆ ಅಲ್ಲಿ ಬಳಸಿದ ದೊಡ್ಡ ಗಂಗಾಳಗಳನ್ನೂ ಇತರ ಅಡಿಗೆ ಪಾತ್ರೆಗಳನ್ನೂ ಚೊಕ್ಕಟವಾಗಿ ತಾವೇ ತೊಳೆದು ಕೊಡಬೇಕು. ಇದಾದ ನಂತರ ಈ ನಾಯಕರು ಪುನಃ ಸಾರ್ವಜನಿಕ ಸೇವೆ ಮಾಡಲು ರಂಗಕ್ಕೆ ಇಳಿಯಲಿಲ್ಲವಂತೆ.

ನಿಯತಕಾಲ ಮರಣಾಂತ್ಯೋಪವಾಸ ವ್ರತ ಪೂಜಾ ವಿಧಾನ: ಇದನ್ನು ಅನುಸರಿಸಲು ವ್ರತಿಗೆ ಕೆಚ್ಚೆದೆ ಇರಬೇಕಾಗುತ್ತದಂತೆ. ನಾಥ ಪೌರಾಣಿಕರು ದ್ವೀಪವನ್ನು ಸಂದರ್ಶಿಸಿದ ಕಾಲದಲ್ಲಿ ಕೇವಲ ಒಬ್ಬ ಪ್ರಜಾಹಿತೈಷಿಗಳು ಮಾತ್ರ ಇದನ್ನು ಕೈಗೊಂಡು ಅರ್ಧ ಸೋತು ಪ್ರಾಣ ಹೋಗದಿದ್ದರೂ ಕೈ ಸುಟ್ಟುಕೊಂಡರಂತೆ. ಕೆಚ್ಚೆದೆಯ ಹಿರಿಮೆಗೆ ಹೆಸರು ಹೊಂದಿ ನಾಥ ದ್ವೀಪದ ವಾಯುವ್ಯ ಸೀಮೆಯ ಹುಲಿ ಜಾತಿ ಜನಗಳಲ್ಲಿ ಎರಡು ಪಂಗಡವಾಗಿ ನಾ ಮೇಲು ತಾ ಮೇಲೆಂದು ಕಚ್ಚಾಟವಾಗುತ್ತಿತ್ತಂತೆ. ಒಂದು ಪಂಗಡದ ನಾಯಕರು—ಅವರ ಹೆಸರು ಜಯಸಿಂಹ ಎಂದು ಪೌರಾಣಿಕರು ತಿಳಿಸುತ್ತಾರೆ—ತಮ್ಮ ಮೇಲ್ಮೆಯನ್ನು ಸಮರ್ಥಿಸಲು ಒಟ್ಟು ಜಿಲ್ಲಾ ಪ್ರಜೆಗಳ ಪರವಾಗಿ ನಾಥ ಸರ್ಕಾರಕ್ಕೆ ಕೆಲವು ಬೇಡಿಕೆಗಳನ್ನು ಸಲ್ಲಿಸಿ ಈ ಘೋರ ಉಪವಾಸವ್ರತ ಹೂಡಿದರಂತೆ. ಇದರ ನಿಯಮದ ಪ್ರಕಾರ ವ್ರತಕಾಲ ನಿಯತವಾಗಿರಬೇಕು, ಅದರ ಅಂತ್ಯದಲ್ಲಿ ವ್ರತಿಯ ಬೇಡಿಕೆಗಳು ಸಲ್ಲದಿದ್ದರೆ ಆತ ಅಗ್ನಿಯಲ್ಲಿ ಆತ್ಮ ಸಮರ್ಪಣೆ ಮಾಡಬೇಕು. ಗೊತ್ತುಪಡಿಸಿದ್ದ ಹತ್ತು ದಿನಗಳ ಕಾಲ ಸರ್ಕಾರದಿಂದ ಯಾವ ಪ್ರತಿಕ್ರಿಯೆಯೂ ಬರಲಿಲ್ಲ. ಜಯಸಿಂಹರ ಭಕ್ತ ವ್ಯಾಘ್ರಗಳೂ ಗುಂಪು ಕಟ್ಟಿಕೊಂಡು ದ್ವೀಪ ಸರ್ಕಾರದ ಮೇಲೆ ದಾಳಿಮಾಡಲಿಲ್ಲ. ಇನ್ನೇನು ಗತಿ! ಮಂದಿರದ ಮುಂದೆ ದೊಡ್ಡ ಚಿತೆ ಸಿದ್ಧವಾಯಿತು. ವ್ರತಿಯ ಇದಿರು ಪಕ್ಷದ ಭಕ್ತರು ಚಿತೆಯನ್ನು ಸಿದ್ಧಪಡಿಸುವುದರಲ್ಲಿ ಬಹಳ ಮುತುವರ್ಜಿ ವಹಿಸಿದ್ದರಂತೆ. ಜಯಸಿಂಹರು ಮಧ್ಯಸ್ಥಿಕೆಗಾಗಿ ರಾಜಧಾನಿಗೆ ಕಳಿ

ಬಿಡುತ್ತಾ ವ್ರತಧಾರಿ ಹಳದಿ ಬಟ್ಟೆಗಳನ್ನುಟ್ಟು ಸಿದ್ಧವಾಗುತ್ತಿದ್ದಾಗ, ಆತ್ಮಸಮರ್ಪಣೆಗೆ ಇನ್ನು ಕೇವಲ ಹದಿನೈದು ನಿಮಿಷಗಳು ಮಾತ್ರ ಉಳಿದಿದ್ದು ಹತ್ತಾರು ಸಾವಿರ ಜನಗಳು ಚಿತೆ ಸುತ್ತ ಸೇರಿದಾಗ ಇದ್ದಕ್ಕಿದ್ದ ಹಾಗೆ ಅರಬಾಶ್ವಗಳನ್ನು ಕಟ್ಟಿದ್ದ ಸರ್ಕಾರೀ ಬಾವುಟವನ್ನೇರಿಸಿದ್ದ ರಥವೊಂದು ವಾಯುವೇಗದಲ್ಲಿ ರಾಜಧಾನಿಯ ಕಡೆಯಿಂದ ಬಂದು ಮಂದಿರದ ಬಾಗಿಲಿನಲ್ಲಿ ನಿಂತಿತು. ರಥದಿಂದ ಕೆಳಗಿಳಿದ ಮಂತ್ರಿವರ್ಯರೊಬ್ಬರು ಮೆಟ್ಟಲು ಹತ್ತಿ ಓಡಿ ಹೋಗಿ ವ್ರತಧಾರಿಯ ಹತ್ತಿರ ಬಂದು ಅವರನ್ನುದ್ದೇಶಿಸಿ, "ಈಗ ತಾನೆ ನಾನು ರಾಜಧಾನಿಯಿಂದ ಬರುತ್ತಿದ್ದೇನೆ, ನಿನ್ನೆ ರಾತ್ರಿ ಅಧ್ಯಕ್ಷರೂ ಮಂತ್ರಿಗಳೂ ಒಟ್ಟಿಗೆ ಕಲೆತು ನಿಮ್ಮ ಬೇಡಿಕೆಗಳನ್ನು ಚರ್ಚಿಸಿದರು. ನಿಮಗೆ ಸಮಾಧಾನವುಂಟಾಗುವ ತೀರ್ಮಾನಗಳಿಗೆ ಬಂದಿದ್ದಾರೆ. ಲಿಖಿತ ಮೂಲಕ ನಾಳೆ ನಾಡಿದ್ದರಲ್ಲಿ ನಿಮಗೆ ತಿಳಿಸುತ್ತಾರೆ. ಈಗ ನಿಮ್ಮ ವ್ರತವನ್ನು ಇಲ್ಲಿಗೇ ಮುಕ್ತಾಯ ಮಾಡಿ," ಎಂದರಂತೆ. ಅಲ್ಲಿ ಸೇರಿದ್ದವರಲ್ಲಿ ಜಯಸಿಂಹರ ಅನುಯಾಯಿಗಳು ತಮಗೆ ಇದು ಸಮರ್ಪಕವೆಂದು ಜಯಸಿಂಹರು ವ್ರತಸಮಾಪ್ತಿ ಮಾಡಬೇಕೆಂದೂ ಕೂಗಿದಾಗ ಅವರ ಇದಿರು ಪಕ್ಷಕ್ಕೆ ಸೇರಿದ ಸಾವಿರಾರು ಮಂದಿ ವ್ಯಾಘ್ರಸಮೂಸರು ಇದರಲ್ಲಿ ಕೃತ್ರಿಮವಿದೆಯೆಂದೂ ಇದನ್ನೆಲ್ಲಾ ಜಯಸಿಂಹರು ತಮ್ಮ ಪ್ರಾಣ ಉಳಿಸಿಕೊಳ್ಳಲು ಮಾಡಿರುವ ಕುಟಿಲೋಪಾಯವೆಂದೂ ಈಗ ಅವರು ಚಿತೆ ಏರಲೇಬೇಕು ಎಂದೂ ಕೂಗಿಕೊಂಡರಂತೆ. ಜಯಸಿಂಹರೇನೋ ನಿಂಬೂ ಪಾನಕವನ್ನು ಕುಡಿದು ತದನಂತರ ಮಾಹಾಮಹಿಷೀ ದುಗ್ಧದ ಪಾರಣೆ ಮಾಡಿ ಮುಂದೆಯೂ ಪ್ರಜಾಸೇವೆಮಾಡಲು ತಮ್ಮ ಪ್ರಾಣ ಉಳಿಸಿಕೊಂಡರೂ ಅವರ ತೇಜಸ್ಸು ಮಾತ್ರ ಉಳಿಯಲಿಲ್ಲವಂತೆ. ಎರಡು ದಿನ ಕಳೆದು ಜಯಸಿಂಹರಿಗೆ ಸರ್ಕಾರದವರು ಕಳುಹಿಸಿದ ಲಿಖಿತ ಹೇಳಿಕೆಯಲ್ಲಿ ಅವರ ಬೇಡಿಕೆಗಳನ್ನು ಸಹಾನುಭೂತಿಯಿಂದ ಪರಿಶೀಲಿಸುತ್ತಾ ಇರುವುದಾಗಿ ಬರೆದಿದ್ದರು, ಅಷ್ಟೆ.

ನಿಯತ ಹ್ರಸ್ವ ಕಾಲೋಪವಾಸ ವ್ರತ ಪೂಜೆ: ಸತ್ಯಪ್ರೇಮಿ ಭಕ್ತಿಗಳು ಆಗಾಗ ತಮ್ಮ ಆತ್ಮಶುದ್ಧಿ ಮಾಡಿಕೊಳ್ಳಲು ಇಪ್ಪತ್ತೊಂದು ವಾರಗಳ ನಿರಾಹಾರೋಪವಾಸವನ್ನು ಕೈಗೊಳ್ಳುತ್ತಿದ್ದರು. ಆದರೆ ಸ್ವಾತಂತ್ರ್ಯದ ನಂತರ ಬಂದ ರಾಜಕೀಯ ನೇತಾರರ ಆತ್ಮದಲ್ಲಿ ಕಳಂಕಾದಿಗಳು ಕಡಿಮೆ ಇದ್ದು ಆತ್ಮಶುದ್ಧಿಯಾಗಲು ಕೆಲವೇ ದಿನಗಳ, ಕೆಲವು ಸಂದರ್ಭಗಳಲ್ಲಿ ಕೇವಲ ಕೆಲವೇ ಗಂಟೆಗಳ ಕಾಲದ ಉಪವಾಸ ಸಾಕಾಗಿತ್ತು. ಡಂಗರುಕಾರರ ಮೂಲಕವೂ ವಾರ್ತಾ ಫಲಕಾರರ ಮೂಲಕವೂ ಊರೂರಿಗೆಲ್ಲಾ ಸಮಾಚಾರ ಕಳುಹಿಸಿ ಎರಡೋ ಮೂರೋ ದಿನಗಳು ಉಪವಾಸ ಮಾಡಿ ಆತ್ಮಶುದ್ಧಿ ಪಡೆಯುತ್ತಿದ್ದರು. ನಾಥಸಭೆ ಮತ್ತು ದ್ವೀಪಸಭೆಗೆ ಚುನಾವಣೆಯ ಕಾಲ ಬಂದರೆ ಆಗ ಅಭ್ಯರ್ಥಿಗಳು ತಾವು ಹಿಂದೆ ಮಾಡಿರುವ ನಿಯತಕಾಲೋಪವಾಸಗಳ ಬಗ್ಗೆ ಮತದಾರರಿಗೆ ಸಭೆಗಳಲ್ಲಿ ತಿಳಿಸಿ ತಮ್ಮ ಪರಿಶುದ್ಧತೆ ವಿಚಾರದಲ್ಲಿ ಭರವಸೆ ಕೊಡುತ್ತಿದ್ದರಂತೆ.

ಸರದಿ ಉಪವಾಸ ಮಹೋತ್ಸವ: ನಾಥದ್ವೀಪದ ಯುವಜನ ನಾಯಕರು ತಮ್ಮ ಹಿರಿಯರು ಬಳಕೆಗೆ ತಂದಿದ್ದ ನಿಯತ (ಹ್ರಸ್ವ) ಕಾಲೋಪವಾಸವ್ರತಕ್ಕೆ ತಮ್ಮ ಸಂಖ್ಯಾಬಲವನ್ನು ಲಗತ್ತಿಸಿ ಹೊಸ ರೂಪ ಕೊಟ್ಟು ಪೂಜಾವಿಧಾನ–ಉದಾಹರಣೆಗೆ ಹತ್ತು ಜನಗಳು ಸೇರಿ ಹತ್ತು ದಿನಗಳ ಉಪವಾಸವನ್ನು ತಮ್ಮ ತಮ್ಮಲ್ಲಿ ವಿಭಾಗಿಸಿಕೊಂಡು ಸರದಿಯ ಪ್ರಕಾರ ಒಬ್ಬೊಬ್ಬನೂ ಒಂದು ದಿವಸ ಉಪವಾಸವಿರುತ್ತಿದ್ದ– ಹೀಗೆ ಒಂದು ತಿಂಗಳು ಪರ್ಯಂತರ ಉಪವಾಸವನ್ನು ಹತ್ತು ಅಥವಾ ಹದಿನೈದು ಅಥವಾ ಮೂವತ್ತು ಜನ ಗೊತ್ತಾದ ಸರದಿಯಂತೆ ಮಾಡಬಹುದಾಗಿತ್ತು. ಒಬ್ಬ ವ್ರತಿ ಉಪವಾಸಕ್ಕೆ ಕುಳಿತಿದ್ದಾಗ ಇವರ ಸಹವ್ರತಿಗಳು ನಾಥಜನಗಳ ಗುಂಪು ಸೇರಿಸಿ ಪತಾಕೆಗಳನ್ನು ಹಿಡಿದುಕೊಂಡು ಪ್ರದರ್ಶಿಸುತ್ತಾ ಮುಖ್ಯ ಬೀದಿಗಳಲ್ಲಿ ರಥ ಸಂಚಾರವನ್ನು ನಿಲ್ಲಿಸುತ್ತಾ ಪ್ರಜಾಪ್ರಭು ಭವನವನ್ನು ಸುತ್ತುಗಟ್ಟಿ ನಿಂತು ಡಂಗುರ ವಾದ್ಯದೊಡನೆ ತಮ್ಮ ಘೋಷಣೆಗಳನ್ನು ಬರೆಸಿ, ಕೆಲವು ಸಂದರ್ಭಗಳಲ್ಲಿ ಶಿಲಾವರ್ಷವನ್ನೂ ಸೇರಿಸಿ ಪ್ರಜಾಪ್ರಭು ನಿದ್ರೆಯಿಂದ

ಪಚ್ಚಿತ್ತು ತಮ್ಮ ಕೋರಿಕೆಗಳಿಗೆ ಕಿವಿಗೊಡುವಂತೆ ಮಾಡುತ್ತಿದ್ದರು. ಇದರಿಂದ ಸುಪ್ರೀತನಾದ ಪ್ರಭು ಸರ್ಕಾರವೆನ್ನೂ ಸೂಕ್ತವಾಗಿ ಪ್ರಚೋದಿಸುತ್ತಿದ್ದುದನ್ನು ನೋಡಿ ಈ ಉಪವಾಸ ಪೂಜಾಕ್ರಮ ದ್ವೀಪದಲ್ಲೆಲ್ಲಾ ಬೇಗ ಹರಡಿತು ಎಂದು ನಾಥ ಪೌರಾಣಿಕರು ಬರೆದಿದ್ದಾರೆ.

*

ನಾಥ ಪೌರಾಣಿಕರು ದ್ವಾಪರ ಭಾರತಕ್ಕೆ ಹಿಂದಿರುಗಿದಮೇಲೆ ಇಲ್ಲಿಯ ರಾಜಕೀಯ ವರ್ಗಕ್ಕೆ ತಾನು ನಾಥದ್ವೀಪದಲ್ಲಿ ಕಂಡ ಪ್ರಜಾಪ್ರಭು ದೇವತ ಪೂಜೆಯ ಬಗ್ಗೆಯೂ ಅದರ ಅಂಗವಾದ ಉಪವಾಸೋತ್ಸವಗಳ ಬಗ್ಗೆಯೂ ತಿಳುವಳಿಕೆ ಕೊಟ್ಟರೋ ಇಲ್ಲವೋ ನಮಗೆ ತಿಳಿಯದು. ಯಾವ ಪೌರಾಣಿಕ ಆಧಾರವೂ ಸಿಕ್ಕಿಲ್ಲ. ನಮ್ಮಲ್ಲಿ ಹಾಲಿ ಇರುವುದು ವ್ಯಾಸಭಾರತ. ಆದರೆ ಅದರಲ್ಲಿ ನಮಗೆ ಕಾಣುವುದು ತಪೋನಿಷ್ಠರಾದ ಮಹರ್ಷಿ ಬ್ರಹ್ಮರ್ಷಿಗಳೂ ಸಿಂಹಾಸನಾರೂಢರಾದ ರಾಜ ಮಹಾರಾಜರುಗಳು ಮತ್ತು ಅವರ ಬಂಧುಬಳಗಗಳೂ ಅವರ ಆಳ್ವಿಕೆಯಲ್ಲಿ ಸಹಾಯಮಾಡುತ್ತಿದ್ದ ರತ್ನಾಭರಣ ಭೂಷಿತರಾದ ಮುನ್ನಿಗ ಮಂತ್ರಿಗಳೂ ಸೇನಾಪತಿಗಳೂ ಮಾತ್ರ. ಆಗಿನ ಭಾರತದಲ್ಲಿ ನಾಥವರ್ಗ ದಂತಿನ ಜನಗಳು ಇರಲಿಲ್ಲವೆಂದಲ್ಲ. ಆದರೆ ಅವರು ವ್ಯಾಸರ ಕಣ್ಣಿಗೆ ಬೀಳಲೇ ಇಲ್ಲ. ಪ್ರಜಾಪ್ರಭುತ್ವವನ್ನು ಅಸಡ್ಡೆ ಮಾಡಿ ತಾವುಂಟೋ ಮೂರು ಲೋಕವುಂಟೋ ಎಂಬಂತೆ ಆಗಿನ ಆಳರಸರಾದ ಪಾಂಡವರೂ ಕೌರವರೂ ಅವರ ಸಹಸ್ರಾವಧಿ ಮಿತ್ರ ರಾಜರುಗಳೂ ತಮ್ಮ ತಮ್ಮೊಳಗೇ ಪರಸ್ಪರ ಆಡುತ್ತಾ ಕಾದುತ್ತಾ ಕೊನೆಗೆ ಅತ್ಯಲ್ಪ ಕಾರಣಕ್ಕಾಗಿ ಕುರುಕ್ಷೇತ್ರದಲ್ಲಿ ಎದುರುಬದುರಾಗಿ ನಿಂತರು. ಒಂದು ಕ್ಷಣ ಕಾಲ ಮಾತ್ರ ತನ್ನ ವೈಯಕ್ತಿಕ ಅಜ್ಞಾನದ ತೆರೆ ತೆರೆದು ಸತ್ಯವನ್ನು ಕಂಡ ಅರ್ಜುನ ಯುದ್ಧ ಬೇಡವೆಂದು ಬಿಲ್ಲು ಬಾಣಗಳನ್ನು ಕೆಳಗೆಸೆದರೂ ಈ ಒಟ್ಟು ಸಮಾಜದ ಕೊನೆಗಾಲ ಒದಗಿದೆ ನವಯುಗ ಮೂಡುವುದಿದೆ ಎಂದು ಜ್ಞಾನದೃಷ್ಟಿಯಿಂದ ತಿಳಿದ ಕೃಷ್ಣ ಅರ್ಜುನನಿಗೆ ಧರ್ಮ ಬೋಧಿಸಿ ಯುದ್ಧರಂಗಕ್ಕೆ ಹಿಂತಿರುಗುವಂತೆ ಮಾಡಿದ. ಮಹಾಭಾರತ ಯುದ್ಧ ನಡೆಯಿತು. ಗೆದ್ದವನು ಸೋತ, ಸೋತವನು ಸತ್ತ, ಎಂಬ ಗಾದೆಯಂತೆ ಸೋತ ಕೌರವರೆಲ್ಲ ಸತ್ತರು, ಗೆದ್ದ ಪಾಂಡವರಲ್ಲಿ ಕೆಲವರು ಪ್ರಾಣ ಸಹಿತ ಉಳಿದರೂ ರಹಿತಸತ್ವರಾಗಿ ನಿಸ್ತೇಜರಾಗಿ, ಕೆಲ ವರ್ಷಗಳು ಆಳಿದ ಶಾಸ್ತ್ರ ಮಾಡಿ ಕಡೆಗೆ ಜನಮೇಜಯ ರಾಜನಿಗೆ ರಾಜ್ಯ ಒಪ್ಪಿಸಿ ಕಾಡು ಸೇರಿದರು. ✡

## ಪುರಾಣ ಕಥೆ

ವಿದ್ಯೆಯ ವಧಿಸಿ,
ಬುದ್ಧಿಯ ವಂಚಿಸಿ,
ಅಭ್ಯಾಸವಿಲ್ಲದೇ
ಅನುಭವಿಸುವ
ಹೊಸ ಹೊಸ ಆಯಾಮಗಳನ್ನ
ವ್ಯಾಯಾಮಿಸಿದ
(ಕು)ತಂತ್ರಗಳೇ
ಕಣ್ಣು ಕುಕ್ಕಿದ್ದರಿಂದ
ಬಿಚ್ಚಿದ ಪುರಾಣ ಮುಚ್ಚಿ
ಕೈ ತೊಳೆದುಕೊಂಡೆ.

— ಜಿ. ಬಸವಂತಪ್ಪ

Printed & published by H. M. Kaujalgi on behalf of the Administrator, Loka Shikshna Trust, at Samykuta Karnatak Press, Koppikar Road, Hubli-580 020. Rept : Bombay; V. Satyamurthy Phone: 5224121 Calcutta: H. Majumdar Phone: 46-4233: Madras: K. A. Subramanian

# ಕರ್ನಾಟಕದ ಗುರಿ

- ೨೦೦೦ ನೇ ವರ್ಷದ ವೇಳೆಗೆ ಎಲ್ಲರಿಗೂ "ಆರೋಗ್ಯ ಭಾಗ್ಯ"
- ಮುಂಬರುವ ೧೮ ವರ್ಷಗಳಲ್ಲಿ "ಎಲ್ಲರಿಗೂ ಆರೋಗ್ಯ" ಸಾಧಿಸುವ ಗುರಿಯನ್ನು ಹೊಂದಿರುವ ಕರ್ನಾಟಕ ಸರ್ಕಾರ, ೧೫೦೦ ಜನಸಂಖ್ಯೆಗೆ ಒಂದರಂತೆ ಪ್ರಾಥಮಿಕ ಆರೋಗ್ಯ ಘಟಕ, ೫೦,೦೦೦ ಜನಸಂಖ್ಯೆಗೆ ಒಂದರಂತೆ ಪ್ರಾಥಮಿಕ ಆರೋಗ್ಯ ಕೇಂದ್ರ, ಪ್ರತಿ ತಾಲ್ಲೂಕು ಕೇಂದ್ರದಲ್ಲಿ ಒಂದು ೩೦ ಹಾಸಿಗೆ ಆಸ್ಪತ್ರೆ ಮತ್ತು ಉಪವಿಭಾಗೀಯ ಕೇಂದ್ರದಲ್ಲಿ ೫೦ ಹಾಸಿಗೆ ಆಸ್ಪತ್ರೆಯನ್ನು ಸ್ಥಾಪಿಸಲು ಉದ್ದೇಶಿಸಿದೆ.
- ಕಳೆದ ಎರಡು ವರ್ಷಗಳಲ್ಲಿ ೧೨೭ ಹೊಸ ಪ್ರಾಥಮಿಕ ಆರೋಗ್ಯ ಘಟಕಗಳನ್ನು ರಾಜ್ಯದಲ್ಲಿ ಮಂಜೂರು ಮಾಡಲಾಗಿದೆ. ಇದಲ್ಲದೇ ೩೭ ಪ್ರಾಥಮಿಕ ಆರೋಗ್ಯ ಕೇಂದ್ರಗಳ ಸ್ಥಾಪನೆಗೂ ಕೂಡ ಮಂಜೂರಾತಿ ನೀಡಲಾಗಿದೆ.
- ೨೪ ತಾಲ್ಲೂಕು ಕೇಂದ್ರಗಳಲ್ಲಿ ೫೦/೩೦ ಹಾಸಿಗೆ ಆಸ್ಪತ್ರೆಗಳನ್ನು ಮಂಜೂರು ಮಾಡಲಾಗಿದೆ. ೪೦೦ ಕುಟುಂಬ ಕಲ್ಯಾಣ ಉಪಕೇಂದ್ರಗಳನ್ನು ಸ್ಥಾಪಿಸಲಾಗಿದೆ. ೧೯೮೪-೮೫ ರ ಕೊನೆಗೆ ಪ್ರತಿ ೫೦೦೦ ಜನಸಂಖ್ಯೆಗೆ ಒಂದು ಉಪಕೇಂದ್ರ ಸ್ಥಾಪಿಸುವ ಗುರಿಯನ್ನು ಹೊಂದಲಾಗಿದೆ.
- ಎಲ್ಲ ಜಿಲ್ಲಾ ಕೇಂದ್ರಗಳಲ್ಲಿಯ ಆಸ್ಪತ್ರೆಗಳನ್ನು ೨೫೦ ಹಾಸಿಗೆ ಉಳ್ಳ ಜನರಲ್ ಆಸ್ಪತ್ರೆಯಾಗಿ ಪರಿವರ್ತಿಸುವ ಉದ್ದೇಶಕ್ಕೆ ಅನುಗುಣವಾಗಿ, ಬೀದರ, ರಾಯಚೂರು ಮತ್ತು ಕಾರವಾರಗಳಲ್ಲಿ ಇರುವ ಆಸ್ಪತ್ರೆಗಳನ್ನು ೨೫೦ ಹಾಸಿಗೆವುಳ್ಳ ಆಸ್ಪತ್ರೆಗಳಾಗಿ ಪರಿವರ್ತಿಸಲು ಕ್ರಮಕೈಗೊಳ್ಳಲಾಗಿದೆ.
- ಉತ್ತಮ ವೈದ್ಯಕೀಯ ಸೌಲಭ್ಯಗಳನ್ನು ನೀಡುವುದಕ್ಕಾಗಿ ಸ್ಥಳೀಯ ಸಂಸ್ಥೆಗಳು ನಡೆಸುತ್ತಿದ್ದ ೪೦೫ ಆಸ್ಪತ್ರೆಗಳನ್ನು ಸರ್ಕಾರ ವಹಿಸಿಕೊಂಡಿದೆ.
- ಹೊರರೋಗಿಗಳು ಸರ್ಕಾರಿ ಆಸ್ಪತ್ರೆಗಳಲ್ಲಿ ನೋಂದಣಿಗಾಗಿ ನೀಡಬೇಕಾಗಿದ್ದ ೨೫ ಪೈಸೆ ಶುಲ್ಕವನ್ನು ರದ್ದುಗೊಳಿಸಲಾಗಿದೆ.
- ಅಂಧತ್ವ ನಿವಾರಣೆಗಾಗಿ ೪ ವಿಭಾಗೀಯ ಸಂಚಾರಿ ಘಟಕಗಳನ್ನು ಬೆಂಗಳೂರು, ಮೈಸೂರು, ಗುಲ್ಬರ್ಗ ಮತ್ತು ಬೆಳಗಾಂವಗಳಿಗೆ ಮಂಜೂರು ಮಾಡಲಾಗಿದೆ. ಪ್ರಾಥಮಿಕ ಆರೋಗ್ಯ ಕೇಂದ್ರ ಮತ್ತು ಜಿಲ್ಲಾ ಆಸ್ಪತ್ರೆಗಳಲ್ಲಿ ಹೆಚ್ಚಿನ ಸೌಲಭ್ಯ ನೀಡುವುದರ ಮೂಲಕ ಕಣ್ಣು ರಕ್ಷಣೆ ಬಗ್ಗೆ ಹೆಚ್ಚಿನ ಕಾಳಜಿ ವಹಿಸಲಾಗಿದೆ.
- ೧೯೩೦ ರಲ್ಲಿ ಪ್ರಪ್ರಥಮವಾಗಿ ಕುಟುಂಬ ಯೋಜನೆ ಕಾರ್ಯಕ್ರಮವನ್ನು ಪ್ರಾರಂಭಿಸಿದ ಕೀರ್ತಿ ಕರ್ನಾಟಕಕ್ಕೆ ಸಲ್ಲುತ್ತದೆ. ಈ ವರ್ಷ ಸಂತಾನ ನಿಯಂತ್ರಣ ಶಸ್ತ್ರ ಚಿಕಿತ್ಸೆಗಾಗಿ ನಿಗದಿಪಡಿಸಿದ ಗುರಿಯನ್ನು ಶೇಕಡಾ ೮೩.೪ ರಷ್ಟು ಈಗಾಗಲೇ ಸಾಧಿಸುವುದರ ಮೂಲಕ ಮತ್ತೆ ರಾಷ್ಟ್ರದಲ್ಲಿಯೇ ಉತ್ತಮ ಕಾರ್ಯವೆಸಗಿದ ಕೀರ್ತಿ ಪಡೆದಿದೆ.
- ಕುಷ್ಠರೋಗ, ಕ್ಷಯರೋಗ, ಮಲೇರಿಯಾ, ಆನೆಕಾಲು ರೋಗ ಮುಂತಾದವುಗಳ ನಿಯಂತ್ರಣಕ್ಕಾಗಿ ಆಯ್ದ ಸ್ಥಳಗಳಲ್ಲಿ ವಿಶೇಷ ಯೋಜನೆಗಳನ್ನು ಪ್ರಾರಂಭಿಸಲಾಗಿದೆ.
- ಆರೋಗ್ಯವಂತ ನಾಗರಿಕರು ದೇಶದ ನಿಜವಾದ ಸಂಪತ್ತು. ಸಣ್ಣ ಕುಟುಂಬ ಸಮೃದ್ಧಿಯೆಡೆಗೆ ಮೊದಲ ಹೆಜ್ಜೆ.

**ಪ್ರಕಟಣೆ: ಕರ್ನಾಟಕ ಸರ್ಕಾರದ ವಾರ್ತಾ ಮತ್ತು ಪ್ರಚಾರ ಇಲಾಖೆ**

ಡಿಐಪಿ/೫/೫೭-೮೫

KASTURI PRICE: 2-50 Regd. No. KRNG 43
*Registered with the Registrar of Newspapers for India under No. 3533/57*



